ನವೆಂಬರ್ 1997 ರಾಜ್ಯೋತ್ಸವ ಸಂಚಿಕೆ ರೂ. 10

# ಬಿಸಿಲ ಬದುಕು

• ವಾಣಿಜ್ಯ • ವಿಕಾಸ • ಮಾಹಿತಿ • ಸಂಪರ್ಕ



ಮಂತ್ರಿ ಎಂ.ಪಿ.ಪ್ರಕಾಶರ 'ಕುಟುಂಬ ಕಲ್ಯಾಣ !'

ಉದಯವಾಗದ ಚೆಲುವ ಕನ್ನಡ ನಾಡು !

ಗ್ರಾಹಕರೇ ನಿಮಗಿದು ಗೊತ್ತೆ?

ಕ್ರಿಕೆಟ್ ತಾರೆಗಳ ಕಾಣದ ಮುಖ

ಹಣ್ಣಿನ ಆರೋಗ್ಯ-ಸೌಂದರ್ಯ

◆

ಸೆಂಟಿಮೆಂಟ್ ನಿರ್ದೇಶಕ ಮಹೇಂದರ್

◆

## ವಿದ್ಯೆ-ಉದ್ಯೋಗ

ಎಂಬಿಎ ಮಾಡುವುದು ಹೇಗೆ?

ಸೇನಾಪಡೆಯಲ್ಲಿ ಅವಕಾಶ

ನರ್ಸಿಂಗ್ ಪದವಿ ಕೋರ್ಸು

ಅಣ್ಣಾಮಲೈ ಅಂಚೆ ಶಿಕ್ಷಣ

ಸ್ವಯಂ ಉದ್ಯೋಗ ಮಾಹಿತಿ

ವಿದೇಶಿ ಶಿಕ್ಷಣದ ಸಿದ್ಧತೆ

ನವಂಬರ್ ೧೯೯೭ ಸಂಪುಟ ೧ ಸಂಚಿಕೆ ೫

# ಬಿಸಿಲ ಬದುಕು

ಮಾಸಪತ್ರಿಕೆ

• ವಾಣಿಜ್ಯ • ವಿಕಾಸ • ಮಾಹಿತಿ • ಸಂಪರ್ಕ







*ಸ್ಥಿರ ಶೀರ್ಷಿಕೆಗಳು*





ಸಂಪಾದಕ
ಚಂದ್ರಕಾಂತ ವಡ್ಡು

ನಿರ್ವಹಣೆ
ಸಿ.ಪಿ. ಸುರೇಶ್

ಪ್ರಸಾರ
ವೈ.ಬಿ. ವಿಜಯಕುಮಾರ

ಅಕ್ಷರ ಜೋಡಣೆ
ಜಿ. ಸುರೇಶ್
ಆಶಾ ರಮೇಶ್

*ಲೇಖಕರು :*
ಉಷಾ ನವರತ್ನರಾಮ್
ಎನ್.ಕೆ. ಕುಲಕರ್ಣಿ
ಡಾ. ಎಸ್.ಸಿ. ಶರ್ಮಾ
ಕೋ. ಚೆನ್ನಬಸಪ್ಪ
ಗೋಪಾಲಕೃಷ್ಣ ವಂಡ್ಸೆ
ಎಂ.ಎಸ್. ನರಸಿಂಹಮೂರ್ತಿ
ಡಾ. ಆರತಿ ವೆಂಕಟೇಶ್
ದೀಪಾ ರವೀಂದ್ರ,
ಕೇಶವ ನಾಡಕರ್ಣಿ
ಎಸ್. ನಾಗರಾಜ್
ಡಾ. ನಾರಾಯಣ ಮಹಿಪಿ
ಕೆ.ಎ. ಬಳಿಗೇರ
ಪ್ರಸಾದ ನಾಯಕ
ಎಂ. ಸಹನಾ
ಲೋಕೇಶ್ ಎನ್.

ಮುಖಪುಟ ಚಿತ್ರ
ಎಂ. ವಿಶ್ವನಾಥ

ಮುಖ ಪುಟ ವಿನ್ಯಾಸ
ಚಂದ್ರಶೇಖರ ಗುಬ್ಬಿ

ವಿಳಾಸ
ಬಿಸಿಲ ಬದುಕು ಮಾಸ ಪತ್ರಿಕೆ
ಅಂಕುರ ಪ್ರಕಾಶನ, ಅಂಚೆ ಪೆಟ್ಟಿಗೆ : 7951
ಬಸವೇಶ್ವರ ನಗರ, ಬೆಂಗಳೂರು- 560 079

Edited, Printed, Published and Owned by CHANDRAKANTA VADDU
473, I Cross, I Block, III Stage, Near Water Tank Bus Stop, Basaveshwaranagar,
BANGALORE - 560 079. Tel : 080 3358198 Fax : 080 5091136

# ಟಪಾಲು

**ಕಥೆ ಬೇಡ**

'ಬಿಸಿಲ ಬದುಕು' ಮಾಸಪತ್ರಿಕೆಯನ್ನು ಹೊಸಪೇಟೆಯ ಶಾರದಾ ಬುಕ್ ಡಿಪೊದಲ್ಲಿ ತೂಗು ಹಾಕಿದ್ದರು. ಇದು ತರುಣ-ತರುಣಿಯರಿಗೆ, ಹೊಸ ಬದುಕು ರೂಪಿಸಿಕೊಳ್ಳಬಯಸುವವರಿಗೆ ಉಪಯುಕ್ತವೆನಿಸಿತು. ಕಾದಂಬರಿ, ಕಥೆ, ಹರಟೆ ಬೇಡ ಸ್ವಾಮೀ!

**- ಲಿಂಗಾನಂದ ಶರ್ಮ**, ಗಂಗಾವತಿ

♦

ನಿಮ್ಮ ಮಾಸಪತ್ರಿಕೆಯು ತುಂಬಾ ಸೊಗಸಾಗಿ ಮೂಡಿಬರುತ್ತಿದೆ.

**-ಪಿ.ಆರ್.ಕುಮಾರ್**, ಹರಿಹರ

**-ಕೆ. ವಿಶ್ವಾರಾಧ್ಯ**, ಸತ್ಯಂಪೇಟೆ

♦

ನಾನು ಪರ ಊರಿಗೆ ಹೋದಾಗ ಸಮಯ ಕಳೆಯಲೆಂದು 'ಬಿಸಿಲ ಬದುಕು' ಕೊಂಡೆ. ಆಕರ್ಷಕ ವಿಷಯಗಳ ಈ ಪತ್ರಿಕೆಯನ್ನು ನಮ್ಮೂರ ಜನತೆಗೆ ಒದಗಿಸಬೇಕೆಂದು ತೀರ್ಮಾನಿಸಿ ಪತ್ರಿಕೆಯ ಮಾರಾಟ ಏಜೆನ್ಸಿಯನ್ನು ಪಡೆದಿದ್ದೇನೆ.

**- ಚ. ಶ್ರೀನಿವಾಸಮೂರ್ತಿ**, ಶ್ರೀನಿವಾಸಪುರ

♦

'ಬಿಸಿಲ ಬದುಕು' ಓದಿ ಸಂತಸ ಜೋರಾಯ್ತು. ಈ ಓಲೆ ಬರೆದೆ.

**- ಡಾ. ಎ.ಎಸ್.ರಾಜಾಪುರ**, ಚಿಕ್ಕೋಡಿ

♦

'ಬಿಸಿಲ ಬದುಕು' ಪತ್ರಿಕೆಯಲ್ಲಿ ವಿದ್ಯಾರ್ಥಿಗಳಿಗೆ ತುಂಬಾ ಉಪಯುಕ್ತ ಮಾಹಿತಿ ಒದಗಿಸಿದ್ದೀರಿ. ಪ್ರತಿ ತಿಂಗಳು ಇನ್ನು ಹೆಚ್ಚಿನ ಮಾಹಿತಿ ಒದಗಿಸಲು ಕೇಳಿಕೊಳ್ಳುವೆ.

**- ರೇಖಾ ಎಂ. ನಾಯ್ಕ**, ಯಲ್ಲಾಪುರ

**ಅರ್ಧ ಲಕ್ಷ ಓದುಗರು !**

ಅಭಿನಂದನೆ - ಬಿಸಿಲ ಬದುಕು ಮಾಸಪತ್ರಿಕೆಯನ್ನು ರೂಪಿಸಿ ಐವತ್ತು ಸಾವಿರ ಓದುಗರಿಗೆ ಮುಟ್ಟಿಸುತ್ತಿರುವುದಕ್ಕೆ. ಗ್ರಾಮೀಣ ಪ್ರದೇಶದ ವಿದ್ಯಾವಂತ ಯುವ ಜನತೆಗೆ ಈ ಮಾಸಿಕ ತುಂಬಾ ಉಪಯುಕ್ತ.

**- ಬಾದಾಮಿ ಶಿವಲಿಂಗ**, ಕರ್ಚೇಡು

ತಮ್ಮ ಪತ್ರಿಕೆ ೫೦,೦೦೦ ಓದುಗರನ್ನು ಪಡೆದದ್ದು ಕೇಳಿ ನಮಗೆ ತುಂಬಾ ಸಂತೋಷವಾಯಿತು. 'ಬಿಸಿಲ ಬದುಕು' ಒಂದೊಂದೇ ಮೆಟ್ಟಿಲನ್ನು ಏರುತ್ತಾ ಕರ್ನಾಟಕದ ಉದ್ದಗಲಕ್ಕೆ ಹರಡಲಿ.

**- ಮಹೇಶ ಪಟ್ಟಣಶೆಟ್ಟಿ**, ಹತ್ತಿಮತ್ತೂರ

ಕೇವಲ ತನ್ನ ನಾಲ್ಕನೇ ಸಂಚಿಕೆಯಲ್ಲೇ ಪತ್ರಿಕೆ ಸ್ಪರ್ಧಾ ಲೋಕದಲ್ಲಿ ಜಯ ಸಾಧಿಸುತ್ತಿರುವುದು ಹೆಮ್ಮೆಯ ವಿಷಯ. ಕೆಲ ಹಳೆಯ ಪತ್ರಿಕೆಗಳಿಗೆ ಈ ಹೊಸ ಪತ್ರಿಕೆ 'ಮಾದರಿ'ಯೆಂದರೆ ಅತಿಶಯೋಕ್ತಿಯೇನಲ್ಲ!

**- ಉಮಾಶಂಕರ ಹಿರೇಮಠ**, ಯಲಬುರ್ಗಾ




ನಮ್ಮೂರು ಒಂದು ಹಳ್ಳಿ, ನಮ್ಮೂರಿಗೆ ನಿಮ್ಮ ಪತ್ರಿಕೆ ಬರುವುದಿಲ್ಲ. ನಾನು ಪ್ರತಿ ತಿಂಗಳು ೧೫ನೇ ತಾರೀಖಿಗೆ ಶಹಾಪುರಕ್ಕೆ ಹೋಗಿ 'ಬಿಸಿಲ ಬದುಕು' ತರುತ್ತೇನೆ. ನನ್ನ ಬಳಿ ಪತ್ರಿಕೆ ನೋಡಿದ ನನ್ನಿಬ್ಬರು ಗೆಳೆಯರು ತಮಗೂ ಪತ್ರಿಕೆ ಬೇಕೆಂದರು. ನಂತರ ಈ ಬಳಗಕ್ಕೆ ಇನ್ನೊಬ್ಬರು ಸೇರಿ ಈಗ ಒಟ್ಟು ೪ ಪ್ರತಿಗಳನ್ನು ಕೊಳ್ಳತೊಡಗಿದ್ದೇವೆ. ಮೊಗ್ಗಿನ ಹಂತದಲ್ಲೇ ಈ ಪತ್ರಿಕೆಗೆ ೫೦,೦೦೦ ಓದುಗರಿರುವಾಗ ಇನ್ನು ಒಂದು ವರ್ಷದಲ್ಲಿ ಈ ಸಂಖ್ಯೆ ಒಂದು ಲಕ್ಷ ದಾಟುವುದು ದಿಟ.

**- ನಿಂಬೆಣ್ಣ ಕೊತಲಪ್ಪಗೊಳ**, ಮಲ್ಲಾ (ಬಿ)

**ನಿರುದ್ಯೋಗಿಗಳಿಗೆ ಸಹಾಯಕ**

ನಮ್ಮಂತಹ ನಿರುದ್ಯೋಗಿ ಯುವಕರಿಗೆ ವಿದ್ಯೆ-ಉದ್ಯೋಗ ಅಂಕಣ ಸಹಾಯಕವಾಗಿದೆ. ಆದರೆ ಒಂದು ವಿಷಯ : ಅಂತಿಮ ದಿನಾಂಕ ಮುಗಿದುಹೋದ ಉದ್ಯೋಗ ಮಾಹಿತಿಯಿಂದ ಉಪಯೋಗವಿಲ್ಲ. ಆದ್ದರಿಂದ ಇನ್ನು ಮುಂದೆ ಇಂತಹವನ್ನು ಪ್ರಕಟಿಸಿ ನಿರಾಶೆಗೊಳಿಸಬೇಡಿ.

**- ವೀರಾರೆಡ್ಡಿ**, ಕೊಟ್ಟೂರು

**[ಪತ್ರಿಕೆ ಮಾರುಕಟ್ಟೆಗೆ ಬಂದಾಗ ಅಂತಿಮ ದಿನಾಂಕ ಮುಗಿದಿರದ ಮಾಹಿತಿ ಕೊಡಲು ಆದಷ್ಟು ಪ್ರಯತ್ನಿಸುತ್ತೇವೆ. ಆದರೆ ಕೆಲವೊಮ್ಮೆ ಅರ್ಜಿ ಸಲ್ಲಿಸಲು ಅಲ್ಲದಿದ್ದರೂ ವಿವಿಧ ಅವಕಾಶಗಳ ಪರಿಚಯವಿರಲೆಂಬ ಕಾರಣಕ್ಕೆ ಅನೇಕ ಮಾಹಿತಿ ಒದಗಿಸುತ್ತೇವೆ. ಈ ಮಾಹಿತಿ ಸಂದರ್ಭಾನುಸಾರ ಉಪಯೋಗಕ್ಕೆ ಬಂದೇ ಬರುತ್ತದೆ. - ಸಂ]**

ಅಕ್ಟೋಬರ್ ಸಂಚಿಕೆಯಲ್ಲಿ ಉಪಯುಕ್ತ ಲೇಖನಗಳು ಹಾಗೂ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಉಪಯೋಗವಾಗುವಂತಹ ವಿವರಗಳು ಇರುವುದನ್ನು ನೋಡಿ ಸಂತೋಷವಾಯ್ತು. ಜೊತೆಗೆ ಹುಬ್ಬಳ್ಳಿಯ ನಂದಿನಿ ಎಂಬ ಪ್ರತಿಭಾವಂತ ವಿದ್ಯಾರ್ಥಿನಿ ಐ.ಎಫ್.ಎಸ್.ಗೆ ಆಯ್ಕೆಯಾಗಿರುವ ವಿವರ ಓದಿ ಮತ್ತಷ್ಟು ಸಂತೋಷವಾಯಿತು.

**- ಡಾ. ಡಿ.ಎಂ. ನಂಜುಂಡಪ್ಪ**, ಬೆಂಗಳೂರು

**ಒಂದು ಸಲಹೆ**

ನಾನು ನಿಮಗಿಂತ ಕಿರಿಯ. ಆದರೂ ಈ ನನ್ನ ಪ್ರೀತಿಯ 'ಬಿಸಿಲ ಬದುಕು'ಮುನ್ನಡೆಯಲು ನನ್ನದೊಂದು ಚಿಕ್ಕ ಸಲಹೆ : ನೀವು ಅಥವಾ ನಿಮ್ಮ ತಂಡದವರು ಎಲ್ಲಾ ಶಾಲಾ ಕಾಲೇಜುಗಳಿಗೆ ಭೇಟಿ ನೀಡಿ ಈ ನಮ್ಮ ಪತ್ರಿಕೆ ಬಗ್ಗೆ ತಿಳಿಸಿ ಹೇಳಿ, ಅವರನ್ನು ಸ್ಥಳದಲ್ಲೇ ವಾರ್ಷಿಕ ಚಂದಾದಾರರನ್ನು ಏಕೆ ಮಾಡಿಕೊಳ್ಳಬಾರದು? ಇದಕ್ಕೆ ವಿದ್ಯಾರ್ಥಿಗಳ ಬೆಂಬಲ ಖಂಡಿತಾ ಇದೆ.

**- ಜಿ. ರುದ್ರೇಶ್**, ಜೋಡುಗಟ್ಟಾ

**ಬಹುಮಾನ ಕೊಡಿ**

ನಾನು ಮನೆ ಎಂದರೆ ಏನು ಎಂಬ ಸವಾಲಿಗೆ ಜವಾಬು ನೀಡಿದ್ದೇನೆ. ಇದಕ್ಕಿಂತ ಮುಂಚೆ ಮೂರು ಕ್ವಿಜ್‌ಗಳಿಗೂ ಪ್ರವೇಶಪತ್ರ ಕಳಿಸಿದ್ದೆ. ಈ ಪತ್ರಿಕೆಗಾಗಿ ನಮ್ಮ ಮನೆಯಲ್ಲಿ ಜಗಳ ಮಾಡಿ, ಅತ್ತು ಹಣ ಪಡೆಯುತ್ತೇನೆ. ಈ ಸಲ ಕೊನೆಯ ಪಕ್ಷ ಸಮಾಧಾನಕರ ಬಹುಮಾನವಾದರೂ ಬರದಿದ್ದರೆ ಇನ್ನು ಮುಂದೆ 'ಬಿಸಿಲ ಬದುಕು' ಪತ್ರಿಕೆಯನ್ನೇ ಓದುವುದಿಲ್ಲ. ಇದು ನನ್ನ ಕಡೆಯ ನಿರ್ಧಾರ. Please ನನ್ನ ಮನೋಧೈರ್ಯ ಹಾಳುಮಾಡಬೇಡಿ. ನಾನು ನಿಮ್ಮನ್ನು ನಂಬಿದ್ದೇನೆ.

**- ಬಿ. ಅಬ್ದುಲ್ ಮಕ್ಸೂದ್**

**[ವಿವಿಧ ಸ್ಪರ್ಧೆಗಳಿಗೆ ಬರುವ ಸರಿಯುತ್ತರಗಳ ಕೂಪನ್‌ಗಳನ್ನು ಕಲೆಹಾಕಿ ಲಾಟರಿ ಎತ್ತುವುದರ ಮೂಲಕ ಬಹುಮಾನಗಳನ್ನು ನಿರ್ಧರಿಸಲಾಗುತ್ತದೆ ಎಂಬುದನ್ನು ಗಮನಿಸಿ. - ಸಂ]**

**ಅಷ್ಟ ಭ್ರಷ್ಟಾಚಾರ್ಯರು**

ಎನ್.ಕೆ.ಕುಲಕರ್ಣಿಯರ 'ಅಷ್ಟ ಭ್ರಷ್ಟಾಚಾರ್ಯರು' ಲೇಖನ ಉತ್ಕೃಷ್ಟವಾಗಿತ್ತು.

**- ಪಿ. ಶ್ರೀನಿವಾಸಮೂರ್ತಿ**, ಹೊಸಪೇಟೆ

**ಓದುಗರ ಬೆಂಗಾವಲು**

ಬಿಸಿಲ ಬದುಕು ಬಗ್ಗೆ ಅಲ್ಲಲ್ಲಿ ಕೇಳಿದ್ದೆ. ಬಂದ ಮೂರು ಸಂಚಿಕೆ ನೋಡಿಲ್ಲ. ಅಕ್ಟೋಬರ್ ಸಂಚಿಕೆ ಸ್ಫೂರ್ತಿಯಿಂದ ನೋಡಿದೆ. ಏನಾದರೂ ತಪ್ಪು ಹುಡುಕೋಣ ಎಂದರೆ, ಸಂಪೂರ್ಣ ಮನ ತುಂಬಿತು. ಆದರೆ ಒಂದು ಮಾತು. ನಾಯಿ ಕೊಡೆಗಳಂತೆ ಹುಟ್ಟಿ, ಅಲ್ಪಾವಧಿಯಲ್ಲಿಯೇ ಸಾವು ಕಾಣುವ ಇಂದಿನ ಪತ್ರಿಕೆಯ ರಂಗದಲ್ಲಿ ಹೊಸ ಗಾಳಿಯೇ ಬೀಸಬೇಕು. ಇಟ್ಟ ದಿಟ್ಟ ಹೆಜ್ಜೆ ಹಿಂತೆಗೆಯದೆ, ಧೈರ್ಯದಿಂದ ಮುನ್ನುಗ್ಗಬೇಕು. ಓದುಗರೇ ನಿಮಗೆ

ಬೆಂಗಾವಲಾಗಿ ಇರುವಾಗ ಯಾಕೆ ಭಯ?

**- ಸ್ಫೂರ್ತಿ ಬೆಟ್ಟದೂರು,** ಕಪ್ಪಗಲ್

**Face is the Index of Mind**

ಲಿಂಗಸೂರ ಬಸ್ಟಾಂಡಿನಲ್ಲಿ ಬೇರೊಂದು ಪತ್ರಿಕೆಯನ್ನು ಕೊಳ್ಳಲು ಹೋದಾಗ ಆಕಸ್ಮಿಕವಾಗಿ ತಮ್ಮ ಪತ್ರಿಕೆಯ ಮುಖಪುಟ ಕಣ್ಣಿಗೆ ಗೋಚರಿಸಿದಾಗ Face is the Index of the Mind ಎನ್ನುವ ಹಾಗಾಯಿತು. ತಕ್ಷಣವೇ ಪತ್ರಿಕೆಯನ್ನು ಕೊಂಡುಕೊಂಡೆ. ಬಿಡದೆ ನಿರಂತರ ಓದಿದೆ. ಸ್ವಾರಸ್ಯಕರ, ಸಾಲಿಡ್ ವಿಷಯಗಳಿಂದ ಒಡಗೂಡಿದ ತಮ್ಮ ಪತ್ರಿಕೆ ವಿದ್ಯಾರ್ಥಿಗಳಿಗೆ ಉಪಯುಕ್ತವಾಗುವಂತಹ ಸ್ಪರ್ಧಾತ್ಮಕ ಪರೀಕ್ಷೆಗಳನ್ನು ಪರಿಚಯಿಸಿ ಕೊಡ್ತಾಯಿದೆ. ಉತ್ತಮ ಬದುಕನ್ನೂ ರೂಪಿಸಿಕೊಳ್ಳಲು ಸಹಾಯವಾಗುತ್ತದೆ. ಹೆಚ್ಚಿನ ಓದುಗರನ್ನು ಸಂಪಾದಿಸಲು ತಮ್ಮ ಪತ್ರಿಕೆ ಉತ್ತಮ ಪ್ರಯತ್ನ ಪಟ್ಟಿದೆ. ಪತ್ರಿಕೋದ್ಯಮದಲ್ಲಿ ನಿಷ್ಠುರತೆ ಪ್ರಾಮಾಣಿಕತೆಯಿಂದ ಪ್ರಚಾರಪಡಿಸಿದ ತಮ್ಮ ಪತ್ರಿಕೆಗೆ ಉತ್ತಮ ಯಶಸ್ಸು ದೊರೆಯಲಿ.

**- ಶರಣಪ್ಪ ಎಸ್.,** ಚಿಕ್ಕ ಹೆಸರೂರು

**ನಾನು ನಂಬಲೇ?**

ನಾನಾ ರೀತಿಯ ವಿಷಯಗಳನ್ನೊಳಗೊಂಡ ಈ ನಿಮ್ಮ ಪತ್ರಿಕೆಯಲ್ಲಿ ಎಲ್ಲಾ ಸೌಲಭ್ಯಗಳಿಂದ ವಂಚಿತರಾಗಿರುವ ಹಳ್ಳಿಯ ಮಕ್ಕಳು ಪ್ರಾಥಮಿಕ ಹಂತದಿಂದ ಕಾಲೇಜು ಹಂತದವರೆಗೆ ಓದುವ ರೀತಿ ಹಾಗೂ ಓದಿದ್ದನ್ನು ನೆನಪಿನಲ್ಲಿ ಇಟ್ಟುಕೊಳ್ಳುವ ಶಕ್ತಿಯನ್ನು ಕೊಡುವಂತಹ ಲೇಖನ ಪ್ರಕಟಿಸುವಿರೆಂದು ನಂಬಲೇ?

**- ಜಿ.ಸಿ. ಶಿವಣ್ಣ,** ತುಮಕೂರು

**ಕೋಚೆ ಅಂಕಣ**

ಪ್ರಸ್ತುತ ಸರ್ವಂತಾರ್ಯಾಮಿ ಪಿಡುಗಾಗಿರುವ ''ಭ್ರಷ್ಟಾಚಾರ''ದ ಬಗ್ಗೆ ಕೋಚೆಯವರು ತಮ್ಮ ವಿಶಿಷ್ಟ ಛಾಪಿನ ವಿಶ್ಲೇಷಣೆಯನ್ನು ಚೆನ್ನಾಗಿ ಮಾಡಿದ್ದಾರೆ. ಈ ಅಂಕಣ ಪತ್ರಿಕೆಗೆ ತುಂಬಾ ಮೆರುಗನ್ನು ತಂದುಕೊಟ್ಟಿದೆ.

**- ಯೋಗಾನಂದ,** ಶಿರಿಗೇರಿ

**ನನ್ನ ಮನಸ್ಸು ಗೆದ್ದು ಬಿಟ್ಟಿದೆ**

ವಿದ್ಯೆ-ಉದ್ಯೋಗ ಮಾಹಿತಿ ನೀಡುವುದರಿಂದ ನಮಗೆ ತುಂಬಾ ಸಂತೋಷವಾಗಿದೆ. ನಿಮ್ಮ ''ಬಿಸಿಲ ಬದುಕು'' ಮಾಸ ಪತ್ರಿಕೆ ವಾರ ಪತ್ರಿಕೆಯಾಗಲಿ ಎಂದು ದೇವರಲ್ಲಿ ಪ್ರಾರ್ಥಿಸುತ್ತೇನೆ.

**- ಖಾಜಾಮಿಯಾ,** ದೇವದುರ್ಗ

**ತೃಪ್ತಿಕೊಟ್ಟ ಪತ್ರಿಕೆ**

ನನ್ನ ಯಜಮಾನರಿಗೆ ಕನ್ನಡ ಪತ್ರಿಕೆಗಳನ್ನು ಕೊಂಡು ಓದುವ ಹವ್ಯಾಸ. ಮನೆಗೆ ನಾನಾ ಕನ್ನಡ ಪತ್ರಿಕೆ ತರುತ್ತಾರೆ. ಬಿಸಿಲ ಬದುಕು ಪತ್ರಿಕೆಯ ಎಲ್ಲ ಸಂಚಿಕೆಗಳು ನಮ್ಮ ಮನೆಯಲ್ಲಿವೆ. ನಿಜಕ್ಕೂ ಮನೆ ಮಂದಿ ಎಲ್ಲಾ ಮುಜುಗರ ಇಲ್ಲದೇ ಓದಲೇಬೇಕಾದ ವಿಭಿನ್ನ ಸುಂದರ ಸಮೃದ್ಧ ಮಾಹಿತಿ ನೀಡುವ ಪತ್ರಿಕೆ ಇದು.

**- ಕಸ್ತೂರಿ ಎಂ.ಕೆ.ಕೇಶವಮೂರ್ತಿ,** ಬೆಂಗಳೂರು

**ರಂಗೋಲಿ ಏಕಿಲ್ಲ?**

'ಬಿಸಿಲ ಬದುಕು' ನನ್ನ ಬಾಳಿನ ಸಂಗಾತಿ ಎಂದು ಹೇಳಬಹುದು. ಈ ಪತ್ರಿಕೆಯಲ್ಲಿ 'ರಂಗೋಲಿ' ಏಕೆ ಕೊಡಬಾರದು?

**- ಉಮಾ ದಿಗ್ಗಾವಿ,** ಕಂಪ್ಲಿ

**ಆದಾಯ ತೆರಿಗೆ ಅಧಿಕಾರಿ**

ಜಯರಾಮ ರಾಯ್‌ಪುರ ಅವರು ಬರೆದ 'ಆದಾಯ ತೆರಿಗೆ ಅಧಿಕಾರಿಯಾಗುವುದು ಹೇಗೆ?' ಲೇಖನದಿಂದ ಉಪಯುಕ್ತ ಮಾಹಿತಿ ದೊರೆಯಿತು. ಇಂಥ ಲೇಖನಗಳು ಇನ್ನಷ್ಟು ಪ್ರಕಟವಾಗಲಿ.

**- ಪರಶುರಾಮ್ ಅಡವಿ,** ಗೋಗೇರಿ

**ಅಸಂತೋಷವಾಯಿತು**

ನಾನು ಈ ಹಿಂದೆ ೧೨೦ ರೂ. ನೀಡಿ ವಾರ್ಷಿಕ ಚಂದಾದಾರನಾಗಿದ್ದೇನೆ. ಈಗ ವಿದ್ಯಾರ್ಥಿಗಳಿಗೆ ರಿಯಾಯಿತಿ ತೋರಿ ೯೦ ರೂಪಾಯಿಗೆ ವರ್ಷಪೂರ್ತಿ ಪತ್ರಿಕೆ ಕಳಿಸಲು ನಿರ್ಧರಿಸಿದ್ದೀರಿ. ಇದರಿಂದ ನನ್ನಂತಹ ಹಳೆಯ ಓದುಗರಿಗೆ ಅನ್ಯಾಯವಾಗುವುದಿಲ್ಲವೇ?

**- ಪುರುಷೋತ್ತಮ,** ಬೆಂಗಳೂರು

ಬಹಳ ತಿಳಿದವರೆಂದು ಬೀಗುವವರಿರಬಹುದು. 'ಬದುಕು' ಓದಿದ ಮೇಲೆ ಅವರವರ ಸಣ್ಣತನ ಅವರಿಗೇ ತಿಳಿಯುವುದು!

**- ಪರ್ವತರಾಜ ಪಾಟೀಲ,** ಬೆಳಗಾವಿ

**ಬಿಸಿಲ ಬದುಕು ಪ್ರಥಮ ಸಂಚಿಕೆ ಬಿಡುಗಡೆಯಾದಾಗ ನಮ್ಮೂರಿನ ಪ್ರಾಥಮಿಕ ಶಾಲೆಯಲ್ಲಿ ಒಬ್ಬರೇ ಶಿಕ್ಷಕರಿದ್ದರು. ಈ ಪತ್ರಿಕೆಯ 'ಏನಂತೀರಿ?' ಕಾಲಂಗೆ ಒಂದು ಪತ್ರ ಬರೆದೆ. ನಂತರ ಬಿಸಿಲ ಬದುಕು ನಾಲ್ಕನೆಯ ಸಂಚಿಕೆ ಬಿಡುಗಡೆಯಾದಾಗ ನಮ್ಮೂರಿನ ಶಾಲೆಗೆ ನಾಲ್ಕು ಜನ ಶಿಕ್ಷಕರನ್ನು ಸರ್ಕಾರ ನೇಮಿಸಿದೆ. ಬಿಸಿಲ ಬೇಗೆಯಲ್ಲಿ ತಂಗಾಳಿ ಬೀಸಿದ 'ಬದುಕು'ಗೆ ಹಾಗೂ ಸರ್ಕಾರಕ್ಕೆ ಧನ್ಯವಾದಗಳು.**

**- ಫಕ್ಕೀರೇಶ ಬ. ಅಕ್ಕಿ,** ಮಜ್ಜಿಗುಡ್ಡ

ನಿಜ ಹೇಳಬೇಕೆಂದರೆ ಮಾದಕ ಮುಖಪುಟದ ಮೋಹಕತೆಗೆ ಮಾರುಹೋಗಿ ಅನಿವಾರ್ಯವಾಗಿ ಈ ತಿಂಗಳ 'ಬದುಕು' ಕೊಂಡುಕೊಂಡೆ - ಇದೇ ಪ್ರಥಮ ಬಾರಿಗೆ. ಆದರೆ ಒಳಹೂರಣವೂ ಅಷ್ಟೇ ವಿಶಿಷ್ಟವಾಗಿದೆ.

**- ಕೆ.ಆರ್. ರಾಜನ್,** ಬೆಂಗಳೂರು

ಅಂದು ಪತ್ರಿಕಾ ರಂಗವನ್ನು ಪರಿಚಯಿಸಿದ ಕೇಶವಮೂರ್ತಿಯವರು ಇಂದು ಬಿಸಿಲ ಬದುಕು ಪತ್ರಿಕೆಯನ್ನು ಕೂಡ ನನಗೆ ಪರಿಚಯಿಸಿದರು. ಹತ್ತು ರೂಪಾಯಿಗೆ ಇಷ್ಟೊಂದು ವಿಷಯಗಳೇ? ಅಚ್ಚರಿಯಾಯಿತು..

**- ಮೇಕನಗದ್ದೆ ಎಂ.ಸಿ. ವಿಜಯಕುಮಾರ್,** ಮೂಡಿಗೆರೆ

ಪತ್ರಿಕೆಯು ನಮ್ಮ ಊರು ಕಾಡುಗುಡಿಯಲ್ಲಿ ಸಿಗುತ್ತಿಲ್ಲ. ಈ ನಿಮ್ಮ ಪತ್ರಿಕೆಗಾಗಿ ಬೆಂಗಳೂರಿಗೆ ಬರಬೇಕು. ಈ ಕಾರಣಕ್ಕಾಗಿ ನಾನೇ ಬಿಸಿಲ ಬದುಕು ಏಜೆಂಟನಾಗಲು ತೀರ್ಮಾನಿಸಿದ್ದೇನೆ.

**- ಎಸ್.ಕೆ. ಪ್ರಭುದೇವ್,** ಕಾಡುಗುಡಿ

**ಮೊದಲ ಪತ್ರಿಕೆ**

ತಮಗೆ ಪತ್ರ ಬರೆಯಲು ತಡವಾಯಿತು, ಕ್ಷಮಿಸಿ. ಹಿಂದುಳಿದ ಜನಾಂಗವಾದ ಕಂಜರಭಾಟರ ಲೇಖನವನ್ನು ಸೆಪ್ಟೆಂಬರ್ ತಿಂಗಳ ಮಾಸ ಪತ್ರಿಕೆಯಲ್ಲಿ ಪ್ರಕಟಿಸಿ ನಮ್ಮ ಜನಾಂಗಕ್ಕೆ ಉಪಕಾರ ಮಾಡಿದಂತಾಗಿದೆ. ಇಷ್ಟು ಫೋಟೋಗಳೊಂದಿಗೆ ಕಂಜರಭಾಟ ಜನಾಂಗದ ಇತಿಹಾಸವನ್ನು ಪ್ರಕಟಿಸಿದ ಮೊದಲನೆಯ ಪತ್ರಿಕೆ ''ಬಿಸಿಲ ಬದುಕು''. ನಮ್ಮ ಜನಾಂಗದ ಮಾಹಿತಿ ಪ್ರಕಟಿಸಿದಕ್ಕಾಗಿ ಅನಂತ ಅಭಿನಂದನೆಗಳು.

**- ಜಿ.ವಿ. ಬಾಗಡೆ,**
ಕಾರ್ಯದರ್ಶಿ, ಅಖಿಲ ಕರ್ನಾಟಕ ಕಂಜರಭಾಟ ಸಮಾಜ, ಗದಗ

♦

**ಉಚಿತದ ಮಹತ್ವ**

ನನ್ನ ತಂದೆಯವರಿಗೆ ಹಣಕೊಟ್ಟು ಪುಸ್ತಕ ಖರೀದಿಸುವುದೆಂದರೆ ತುಂಬಾ ಸಿಟ್ಟು. ಹೀಗಿರುವಾಗ ನಾನು ಒಮ್ಮೆ ಬಿಸಿಲ ಬದುಕು ಸಂಚಿಕೆಯನ್ನು ಖರೀದಿಸಿದೆ. ಆಗ ತಂದೆಯವರು ಇದಕ್ಕೆ ಎಷ್ಟು ಬೆಲೆ ಎಂದು ಗದರಿಸಿದರು. ಆಗ ಹತ್ತು ರೂಪಾಯಿ ಎಂದೆ. ತಕ್ಷಣ ಹಿಂದಿನ ಸಂಚಿಕೆಯೊಂದಿಗೆ ಪ್ರಕಟಗೊಂಡ ಕಂಪ್ಯೂಟರ್ ಪುಸ್ತಕವನ್ನು ತೋರಿಸಿ ಇದು ಉಚಿತ ಎಂದೆ. ಆಗ ಅವರು ಮುಗುಳ್ನಕ್ಕರು. ಪ್ರತಿಸಾರಿ ಒಂದು ಉಚಿತ ಮಾಹಿತಿ ಸಂಚಿಕೆ ಪ್ರಕಟಗೊಂಡರೆ ಉತ್ತಮ ಅನಿಸಿತು.

**- ಉಮಾದೇವಿ ಕೆ.,**
ಹೊಸನಗರ

# ಉದಯವಾಗದ ಚೆಲುವ ಕನ್ನಡನಾಡು!

**ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು ಎಂದು ಹಾಡಿದ ಕವಿಯ ಕನಸು ನನಸಾಗಿದೆಯೇ? ಮತ್ತೊಂದು ರಾಜ್ಯೋತ್ಸವ ಆಚರಿಸುತ್ತಿರುವ ಸಂದರ್ಭದಲ್ಲಿ ತಲೆಯೆತ್ತಿ ನಿಲ್ಲುವ ಈ ಪ್ರಶ್ನೆಗೆ ಉತ್ತರಿಸಲು ನಾವು ನಿಜಕ್ಕೂ ಶಕ್ತರೇ?**

**ಆರ್ ಅಂಕುಶವಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ**

ಕನ್ನಡದ ಆದಿಕವಿ ಪಂಪನು ತಾನಿರುವ ನಾಡಿನ ಬಗ್ಗೆ ತುಂಬಾ ಅಭಿಮಾನದಿಂದ ಮನದುಂಬಿ ಹೇಳಿರುವ ಮಾತಿದು. ಸೃಷ್ಟಿ ಸೌಂದರ್ಯದಿಂದ, ನೈಸರ್ಗಿಕ ಅನುಕೂಲತೆಗಳಿಂದ, ಅಮೂಲ್ಯವಾದ ಖನಿಜ ಸಂಪತ್ತಿನಿಂದ ಕಂಗೊಳಿಸುವ ಕನ್ನಡನಾಡು ಹೆಮ್ಮೆಪಡುವ ಭವ್ಯವಾದ ಸಾಂಸ್ಕೃತಿಕ ಪರಂಪರೆಯ ಬೀಡು. ಹೊಂದಿರುವ ನಾಡು. ಜಗತ್ತಿನ ಬಹುತೇಕ ಜನರ ಕಣ್ಮನ ಸೆಳೆದ ನಾಡು. ಯಾರು ನನ್ನ ಮೇಲೆ ಅಂಕುಶವಿಟ್ಟರೂ, ನಾನೆಂದಿಗೂ ಈ ನಾಡನ್ನು ಮರೆಯಲಾರೆ ಎಂದು ಕವಿ ಹೇಳಿರುವುದು ಔಚಿತ್ಯಪೂರ್ಣವಾಗಿದೆ.

ಕನ್ನಡದ ಆದಿಕವಿಯ ಅಭಿಮಾನದ ನಾಡು ಹಲವಾರು ಕಾರಣಗಳಿಂದ ನೆರೆಯ ರಾಜ್ಯಗಳಲ್ಲಿ ಹರಿದು ಹಂಚಿಹೋಗಿತ್ತು. ಹಂಚಿ ಹೋಗಿರುವ ನಾಡನ್ನು ಒಂದುಗೂಡಿಸುವ ಗುರಿಯೊಂದಿಗೆ ಹೋರಾಡಿದ ನಮ್ಮ ನಾಯಕರ ಹೋರಾಟದ ಫಲವಾಗಿ ೧೯೫೬ನೇ ನವೆಂಬರ್ ೧ರಂದು ನಮ್ಮ ರಾಜ್ಯ ಮೈಸೂರು ಎಂದು ನಾಮಕರಣವಾಯಿತು. ಸಮಸ್ತ ಕನ್ನಡಿಗರು ಅಪೇಕ್ಷಿಸಿದ್ದು ಕರ್ನಾಟಕ ರಾಜ್ಯ. ಆಗಿದ್ದು-ಮೈಸೂರು ರಾಜ್ಯ. ಕಾರಣ ಮತ್ತೊಮ್ಮೆ ನಾಡಿನ ನಾಯಕರು ಹೋರಾಡಿ ೧೯೭೩ರ ನವೆಂಬರ್ ೧ರಂದು ನಮ್ಮ ನಾಡಿಗೆ ನಮ್ಮವರು ಅಪೇಕ್ಷಿಸಿದ ಕರ್ನಾಟಕ ಎಂದು ಪುನರ್‌ನಾಮಕರಣ

○ ಕೆ.ಎ. ಬಳಿಗೇರ
ಅಧ್ಯಾಪಕರು
ಸ.ಮಾ.ಕ.ಹೆ. ಶಾಲೆ
ಬೆಳ್ಳಟ್ಟಿ, ತಾ. ಶಿರಹಟ್ಟಿ, ಜಿಲ್ಲೆ ಗದಗ

ಸಾಧ್ಯವಾಯಿತು. ಅತಿ ಸಂಭ್ರಮ ಸಡಗರದಿಂದ ಆ ದಿನವನ್ನು ರಾಜ್ಯೋತ್ಸವ ಅಂತ ನಾಡಿನ ತುಂಬಾ ಆಚರಿಸಿ, ನಮಗಿನ್ನಾವ ಸಮಸ್ಯೆಗಳಿಲ್ಲ ಎಂಬ ಭ್ರಮೆಗೊಳಗಾದೆವು.

ನಂತರ ಕೆಲವೇ ದಿನಗಳಲ್ಲಿ ನಮ್ಮ ಆಡಳಿತ ಭಾಷೆ ಕನ್ನಡವಾಗಬೇಕು, ಶಿಕ್ಷಣದ ಮಾಧ್ಯಮ ಕನ್ನಡವಾಗಬೇಕು ಎಂಬ ಬೇಡಿಕೆಗಳನ್ನು ಹೊತ್ತು ಪುನಃ ಹೋರಾಟಕ್ಕಿಳಿಯಬೇಕಾಯಿತು. ಆದರೆ ನಮ್ಮ ಬೇಡಿಕೆಗಳು ಇಂದಿನವರೆಗೂ ಈಡೇರದಿರುವುದು ಒಂದು ದುರಂತವೇ ಸರಿ. ಸರ್ಕಾರ ಈ ವಿಷಯವಾಗಿ ಮುನ್ನೂರಕ್ಕೂ ಹೆಚ್ಚು ಆದೇಶಗಳನ್ನು ಜಾರಿಗೊಳಿಸಿದ್ದರೂ ಯಾವುದೇ ಬದಲಾವಣೆಯಾಗದಿರುವದು ನಮ್ಮ ದುರ್ದೈವವೆನ್ನದೆ ಬೇರೆ ಮಾರ್ಗವಿಲ್ಲ. ಸ್ವಾತಂತ್ರ್ಯದ ಸುವರ್ಣ ಮಹೋತ್ಸವವನ್ನು ಆಚರಿಸುತ್ತಿರುವ ನಾವು ಆಡಳಿತ ಭಾಷೆ ಕನ್ನಡವನ್ನು ಜಾರಿಗೊಳಿಸುವಲ್ಲಿ ವಿಫಲರಾಗಿದ್ದೇವೆ ಎಂಬುದರತ್ತ ಗಮನಹರಿಸಿದಾಗ ನಮ್ಮ ಸಾಧನೆಗೆ ಈ ಕೆಳಗಿನ ಅಂಶಗಳು ಅಡ್ಡಿಯಾಗಿವೆ, ಆತಂಕವನ್ನೊಡ್ಡಿವೆ ಎಂಬುದು ಗೊತ್ತಾಗುವದು.

**ಆಂಗ್ಲಭಾಷೆಯ ಮೇಲೆ ನಮ್ಮವರ ಅತಿಯಾದ ವ್ಯಾಮೋಹ**

ಇಂಗ್ಲಿಷರು ಈ ದೇಶವನ್ನು ಬಿಟ್ಟು ಹೋಗಿ ಐವತ್ತು ವರ್ಷಗಳುರುಳಿದರೂ ಅವರು ಇಲ್ಲಿ ಬಿಟ್ಟು ಹೋದ ಭಾಷೆ,

ಸಂಸ್ಕೃತಿಯ ಮೇಲಿರುವ ವ್ಯಾಮೋಹ ಮಾತ್ರ ನಮ್ಮ ಮನಸ್ಸಿನಿಂದ ದೂರ ಹೋಗಿಲ್ಲ. ಇಂಗ್ಲಿಷರು ಈ ದೇಶದಿಂದ ಹೊರಹೋಗು ತ್ತಿರುವ ಸಮಯದಲ್ಲಿ ಓರ್ವ ಇಂಗ್ಲಿಷ್ ಮನುಷ್ಯ ಭಾರತೀಯರನ್ನು ಕುರಿತು, ''ಈ ದಿನ ನೀವು ರಾಜಕೀಯ ಸ್ವಾತಂತ್ರ್ಯ ಗಳಿಸಿ ನಮ್ಮನ್ನು ಈ ದೇಶದಿಂದ ಹೊರ ಹಾಕುತ್ತಿದ್ದೀರಿ. ಆದರೆ ನಾವು ಈ ದೇಶದಲ್ಲಿ ಪಾಶ್ಚಾತ್ಯ ಸಂಸ್ಕೃತಿಯನ್ನು ಬಿಟ್ಟು ಹೊರಟಿದ್ದೇವೆ ಎಂಬುದನ್ನು ಮಾತ್ರ ಮರೆಯಬೇಡಿ'' ಎಂದು ಹೇಳಿದ್ದನಂತೆ. ಅವರ ಸಂಸ್ಕೃತಿಯ ದಾಸರಾಗಿರುವುದರಿಂದಲೇ ಮಮ್ಮಿ ಡ್ಯಾಡಿ ಪದಗಳು ಕನ್ನಡದ ಪದಗಳೇನೋ ಎನ್ನುವಷ್ಟರ ಮಟ್ಟಿಗೆ ಸ್ಥಾನ ಪಡೆದಿವೆ.

ಬ್ರಿಟಿಷರು ನಮ್ಮನ್ನಾಳುವ ಕಾಲಕ್ಕೆ ೪ನೇ ತರಗತಿಯುವರೆಗೆ ಕಲಿಕೆಯ ಭಾಷೆ ಕನ್ನಡ ವಾಗಿತ್ತು. ಇಂದು ನಮ್ಮವರೇ ನಮ್ಮನ್ನಾಳುತ್ತಿರುವಾಗ ಎಲ್ಲಿ ನೋಡಿದರಲ್ಲಿ ಇಂಗ್ಲಿಷ್ ಮಾಧ್ಯಮದ ಶಿಶುವಿಹಾರಗಳು ನಾಯಿಕೊಡೆ ಗಳಂತೆ ತಲೆಯೆತ್ತಿ ಬಹುತೇಕ ಪಾಲಕರನ್ನು ಆಕರ್ಷಿಸುತ್ತಲಿವೆ. ಅವರು ಕೇಳಿದಷ್ಟು ದುಡ್ಡು ಕೊಟ್ಟು ಇಂಗ್ಲಿಷ್ ಮಾಧ್ಯಮದ ಶಾಲೆಗಳಿಗೆ ತಮ್ಮ ಮಕ್ಕಳನ್ನು ಕಳಿಸುತ್ತಲಿದ್ದಾರೆ, ಹೀಗೆ ಶಿಶುವಿಹಾರ ದಿಂದಲೇ ನಮ್ಮ ಮಕ್ಕಳು ಇಂಗ್ಲಿಷ್ ಕಲಿಯುವಂತಾದರೆ. ಅವರ ಮನೆಯಲ್ಲಿ ಎಲ್ಲವೂ ಇಂಗ್ಲಿಷ್‌ಮಯ. ಕನ್ನಡ ಮಾಧ್ಯಮದ ಸರ್ಕಾರಿ ಶಾಲೆಗಳು ಎಷ್ಟೇ ಉತ್ತಮವಾಗಿದ್ದರೂ ಅಲ್ಲಿ ಮಕ್ಕಳ ಸಂಖ್ಯೆ ಗಣನೀಯವಾಗಿ ಕಡಿಮೆಯಾಗುತ್ತಿರುವುದಕ್ಕೆ ಇಂಗ್ಲಿಷ್ ಭಾಷೆಯ ಮೇಲಿನ ವ್ಯಾಮೋಹವೇ ಕಾರಣವಾಗಿದೆ.

ನಮ್ಮ ಜನತೆ ಆಂಗ್ಲ ಭಾಷೆಗೆ ಎಷ್ಟು ಮಾರು ಹೋಗಿದ್ದಾರೆಂದರೆ, ತಮ್ಮ ಮದುವೆಯ ಮಮತೆಯ ಕರೆಯೋಲೆ ಗಳನ್ನು ಕೂಡಾ ಇಂಗ್ಲಿಷಿನಲ್ಲಿ ಅಚ್ಚು ಹಾಕಿಸುತ್ತಾರೆ. ವಧುವಿನ ಹೆಸರಿನ ಹಿಂದೆ ಚಿ.ಸೌ. (Chi Sow) ಎಂದು ಅಚ್ಚು ಹಾಕಿಸುತ್ತಾರೆ. ಇಂಗ್ಲಿಷ್ ನಿಘಂಟಿನಲ್ಲಿ ಸೌ (Sow) ಅನ್ನುವ ಅರ್ಥವನ್ನು ನೋಡಿ ದವರಾರೂ ಮತ್ತೊಮ್ಮೆ ಇಂಗ್ಲಿಷಿನಲ್ಲಿ ಈ ರೀತಿ ಅಚ್ಚು ಹಾಕಿಸುವದಿಲ್ಲ. ಅಷ್ಟು ಅಸಹ್ಯವಾಗಿದೆ ಅದರರ್ಥ. (ಇಂಗ್ಲಿಷಿನಲ್ಲಿ Sow ಎಂದರೆ ಹೆಣ್ಣು ಹಂದಿ!) ಹೀಗೆ ಭಾಷೆಯ ಅರ್ಥವನ್ನು ಅರಿಯದೇ ಅದರ ಮೇಲಿರುವ ಅತಿಯಾದ ಮಮತೆಯಿಂದ ನಮ್ಮ ಸರಳವಾಗಿರುವ, ಸುಂದರವಾಗಿರುವ ನುಡಿಯನ್ನು ಅಪಾಯದ ಅಂಚಿನತ್ತ ಒಯ್ಯುತ್ತಿರುವದು ವಿಷಾದನೀಯ.

**ನಮ್ಮ ನಾಡು-ನುಡಿ ಸಂಸ್ಕೃತಿಯಲ್ಲಿ ಅಡಕವಾದ ಮಹತ್ವವನ್ನು ಅರಿಯದಿರುವದು**

ಕಾವೇರಿಯಿಂದ ಗೋದಾವರಿಯವ ರೆಗೂ ಹಬ್ಬಿ, ಸೃಷ್ಟಿ-ಸೌಂದರ್ಯದಿಂದ ಕೂಡಿರುವ ನಮ್ಮ ನಾಡಿನಷ್ಟೆ ನಮ್ಮ ನುಡಿಯೂ ಕೂಡಾ ಸುಂದರ, ಸರಳ ಹಾಗೂ ಮಧುರವಾಗಿದೆ. ಅಂತೆಯೇ ಮಹಾಲಿಂಗರಂಗರು

**ಸುಲಿದ ಬಾಳೆಯ ಹಣ್ಣಿನಂದದಿ।**
**ಕಳೆದ ಸಿಗುರಿನ ಕಬ್ಬಿನಂದದಿ।**
**ಅಳಿದ ಉಷ್ಣದ ಹಾಲಿನಂದದಿ**
**ಸುಲಭವಾಗಿರ್ಪ॥**
**ಲಲಿತವಹ ಕನ್ನಡದ ನುಡಿಯಲಿ।**
**ತಿಳಿದು ತನ್ನೊಳು ತನ್ನ ಮುಕ್ತಿಯ।**
**ಗಳಿಸಿಕೊಂಡರೆ ಸಾಲದೇ**
**ಸಂಸ್ಕೃತದೊಳಿನ್ನೇನು॥**

ಎಂದು ವರ್ಣಿಸಿದ್ದು ಅರ್ಥಪೂರ್ಣ ವಾಗಿದೆ.



ನನ್ನನ್ನು ಬೇಗನೇ ಒಳಗೆ ಬಿಡಯ್ಯ... ನಾನು ಪರಸ್ಥಳದಿಂದ ಬಂದವನು

ನಮ್ಮ ಡಾಕ್ಟ್ರ ಹತ್ರ ಬರುವ ಎಲ್ಲರೂ ಬೇರೆ ಊರಿನವರೇ. ಈ ಊರಿನ ಜನರನ್ನು ಮೂರ್ಖರೆಂದು ತಿಳಿದಿದ್ದೀರಾ?

**ಕನ್ನಡದಲ್ಲಿಯೇ ಬಿನ್ನಹಗೈದೊಡೆ ಹರಿ, ವರಗಳ ಮಳೆ ಕರೆಯುವನು ಹರ ಮುನಿಯದೇ ತಾ ಪೊರೆಯುವನು** ಎಂಬ ಕುವೆಂಪುರವರ ಮಾತಿನಂತೆ ದೇವ-ದೇವತೆಗಳೂ ಕೂಡಾ ಸಂತೃಪ್ತರಾಗುವರು. ಅಂತಹ ವಿಶಿಷ್ಟ ಶಕ್ತಿ ನಮ್ಮ ಭಾಷೆಗಿದೆ. ಇಂತಹ ವಿಶಿಷ್ಟ ಶಕ್ತಿಯ ಸತ್ವವನ್ನು ಅರಿಯದೇ ಬೇರೆ ಭಾಷೆಗಳಿಗೆ ಮಾರು ಹೋಗಿ ನಮ್ಮ ತಾಯ್ನುಡಿಗೆ ನಾವೇ ಅವಮಾನ ಮಾಡುತ್ತಿರುವುದು ಶೋಚನೀಯ ಹಾಗೂ ಯೋಚನೀಯ.

**ನಾಡಿನ ಮೇಲೆ ಕನ್ನಡೇತರರ ನಿರಂತರ ಆಕ್ರಮಣ**

ಉತ್ತರ ಭಾರತದಲ್ಲಿರುವಂತೆ ಕೊಲೆ, ದರೋಡೆ, ಪ್ರವಾಹದ ಹಾವಳಿ; ಭೂಕಂಪನದ ಭಯ ಇತ್ಯಾದಿಗಳು ಕನ್ನಡನಾಡಿನಲ್ಲಿಲ್ಲ. ಇದೊಂದು ಜನಜೀವನಕ್ಕೆ ಸುರಕ್ಷಿತವಾದ ನಾಡು ಎಂಬ ಕಾರಣದಿಂದ ಪರರಾಜ್ಯದಿಂದ ಪ್ರತಿನಿತ್ಯ ವಲಸೆ ಬರುವವರ ಸಂಖ್ಯೆ ಹೆಚ್ಚಾಗುತ್ತಿದೆ. ಒಂದು ಅಂದಾಜಿನ ಪ್ರಕಾರ ತಮಿಳರ ಮೂರು ನೂರು ಕುಟುಂಬಗಳು ಪ್ರತಿ ದಿನ ಬೆಂಗಳೂರಿಗೆ, ನಾಲ್ಕು ನೂರು ಜನ ಆಂಧ್ರದವರು ಬಳ್ಳಾರಿಗೆ ವಲಸೆ ಬರುತ್ತಿದ್ದಾರೆ. ಇಲ್ಲಿಗೆ ಬಂದ ಕೆಲವೇ ದಿನಗಳಲ್ಲಿ ರೇಶನ್ ಕಾರ್ಡಿನಲ್ಲಿ, ಮತದಾರರ ಪಟ್ಟಿಯಲ್ಲಿ ತಮ್ಮ ಹೆಸರುಗಳನ್ನು ನೋಂದಾಯಿಸುತ್ತಿರುವುದು ಕಂಡುಬಂದಿದೆ. ಒಂದು ಕಾಲದಲ್ಲಿ ಕಾರ್ಖಾನೆಗಳ ಮಾಲಿಕರಾದ, ಭೂಮಿಯ ಒಡೆಯರಾದ ಕನ್ನಡಿಗರು ಅದೇ ಕಾರ್ಖಾನೆಯಲ್ಲಿ, ಭೂಮಿಯಲ್ಲಿ ಕೂಲಿಯಾಳಾಗಿ ದುಡಿಯುವಂತಹ ಪರಿಸ್ಥಿತಿಗೆ ಹೊರಗಿನಿಂದ ಬರುವವರಿಗೆ ರತ್ನಗಂಬಳಿ ಹಾಸಿ ಸ್ವಾಗತಿಸುವ ನಮ್ಮ ಔದಾರ್ಯವೇ ಕಾರಣವಾಗಿದೆ.

**ಕೈಲಾಸ**

ಕೈಲಾಸ ಎಲ್ಲಿದೆ?
ಎಂದರೆ
ಉತ್ತರಿಸಲು ಸಮರ್ಥನಾಗಿದ್ದೇನೆ?
ಹೇಗೆಂದರೆ
ಈಗ ಕಾಸಿಲ್ಲದೆ
ಕೈ'ಲಾಸ್' ಆಗಿದ್ದೇನೆ.

- ವಿಜಿ

ಪರರಾಜ್ಯದವರು ನಿರಂತರವಾಗಿ ನಮ್ಮ ನಾಡಿಗೆ ವಲಸೆ ಬಂದುದರಿಂದ ಈ ನಾಡಿನಲ್ಲಿ ಶುದ್ಧವಾದ ಕನ್ನಡವನ್ನು ಮಾತನಾಡುವ ಜಿಲ್ಲೆ ಒಂದೂ ಇಲ್ಲದಾಗಿದೆ. ಕನ್ನಡ ನಾಡಿನ ಹೆಮ್ಮೆಯ ರಾಜಧಾನಿ ಬೆಂಗಳೂರಿನಲ್ಲಿ ಕನ್ನಡ ಮಾತನಾಡುವವರ ಸಂಖ್ಯೆ ಕೇವಲ ಶೇಕಡಾ ಮೂವತ್ಮೂರರಷ್ಟು. ಅಂದಾಗ ನಾವು ನಮ್ಮ ನಾಡಿನಲ್ಲೇ ಪರಕೀಯರಾಗುತ್ತಿರುವುದು ದುರದೃಷ್ಟಕರ. ಕರ್ನಾಟಕದಲ್ಲೆ ನಮ್ಮ ನಾಡು-ನುಡಿ ಸಂಸ್ಕೃತಿಗೆ ಪ್ರಾಧಾನ್ಯ ಸಿಗದಿದ್ದರೆ, ಅದು ಬೇರೆ ಕಡೆ ಎಲ್ಲಿ ಸಿಗುತ್ತದೆ?

ಕಾರಣ ಪ್ರತಿ ವರುಷ, ಹರುಷದಿಂದ ಸಂಭ್ರಮ-ಸಡಗರದಿಂದ 'ನವೆಂಬರ್ ೧ನ್ನು' ರಾಜ್ಯೋತ್ಸವ ಅಂತ ಆಚರಿಸುತ್ತಿರುವ ನಾವು, ಪ್ರತಿಯೊಬ್ಬ ಕನ್ನಡಿಗರು ನಮ್ಮ ನಾಡು-ನುಡಿಯ ಮಹತ್ವವನ್ನು ಅರಿತುಕೊಂಡು ನಮ್ಮತನವನ್ನು ನಾವು ಮರೆಯದೇ ಉಳಿಸಿಕೊಳ್ಳಬೇಕಿದೆ. ಕಳೆದುಹೋದ ನಿನ್ನೆಗಳಿಗಿಂತ ಬರಲಿರುವ ನಾಳೆಯ ದಿನಗಳಲ್ಲಿ ಈ ನಾಡು ನಮ್ಮದು, ಈ ನುಡಿ ನಮ್ಮದು ಎಂಬ ಅಭಿಮಾನ ನಮ್ಮೆಲ್ಲರ ಹೃದಯ ಮಂದಿರದಲ್ಲಿ ಹೆಚ್ಚೆಚ್ಚು ಮೂಡಿದಾಗ ಮಾತ್ರ ನಮ್ಮ ನಾಡು-ನುಡಿ ಉಳಿಯಬಲ್ಲದು. ಇಲ್ಲದೇ ಹೋದರೆ ಒಬ್ಬ ಕವಿ ಹೇಳಿರುವಂತೆ :

**ಸ್ವಾತಂತ್ರ್ಯ ಯಾರಿಗೊ ಸಿಕ್ಕಿದೆಯಂತೆ**
**ಸಿಕ್ಕಿದವರಿಗೆ ದಕ್ಕಿದೆಯಂತೆ**
**ಅಡುಗೆ ಮನೆಯಲ್ಲಿ ಬೆಕ್ಕಿದೆಯಂತೆ**
**ಕೆನೆ ಮೊಸರನ್ನೆಲ್ಲಾ ನೆಕ್ಕಿದೆಯಂತೆ**

ಪರರಾಜ್ಯದವರು ಸಂಪನ್ಮೂಲಗಳೆಂಬ ಕೆನೆ ಮೊಸರನ್ನು ಬೆಕ್ಕಿನೋಪಾದಿಯಲ್ಲಿ ನೆಕ್ಕಿ ಉಳಿದ ಹುಳಿ ಮೊಸರನ್ನು ತಿನ್ನುವ ಪರಿಸ್ಥಿತಿ ಸಮಸ್ತ ಕನ್ನಡಿಗರಿಗೆ ಬರಬಹುದು. ಕಾರಣ ಕಾಲ ಮಿಂಚುವುದಕ್ಕಿಂತ ಮುಂಚಿತವಾಗಿ ಜಾಗೃತರಾಗಿ ಅಳಿದು ಹೋಗುತ್ತಿರುವ ನಾಡು-ನುಡಿಯನ್ನು ಉಳಿಸಿ-ಬೆಳೆಸಿ ಸಂರಕ್ಷಿಸುವ ಗುರುತರವಾದ ಜವಾಬ್ದಾರಿ ನಮ್ಮದಲ್ಲವೇ?

ಯಾವುದೇ ವ್ಯಾಪಾರಸ್ಥರು ಗ್ರಾಹಕರ ಮೇಲೆ ನೀವು ಇಂತಹ ವಸ್ತು ಪಡೆಯಲೇಬೇಕು ಎಂದು ಒತ್ತಡ ಹೇರುವಂತಿಲ್ಲ. ನೀವು ಕೊಳ್ಳುವ ವಸ್ತುವಿಗೆ ಅದರ ಮೇಲೆ ನಮೂದಿಸಿದ ಬೆಲೆಯನ್ನೇ ಅಂಗಡಿಯಾತ ತೆಗೆದುಕೊಳ್ಳಬೇಕು.

## ಬಳಕೆದಾರರ ಬೆಂಗಾವಲಿಗೆ ಗ್ರಾಹಕ ವೇದಿಕೆ

ಯಾವುದೇ ವಸ್ತು ಅಥವಾ ಸೇವೆಯನ್ನು ಶುಲ್ಕ ನೀಡಿ ಪಡೆದುಕೊಳ್ಳುವವನೇ ಗ್ರಾಹಕ ಎಂದು ಗ್ರಾಹಕರ ಹಿತರಕ್ಷಣಾ ಕಾಯ್ದೆಯಲ್ಲಿ ತಿಳಿಸಿದೆ. ಈ ರೀತಿಯ ಸೇವೆ ಅಥವಾ ವಸ್ತು ಪಡೆದು ಮೋಸ ಹೋದವರೆಲ್ಲಾ ಗ್ರಾಹಕರ ವೇದಿಕೆಯ ಮೆಟ್ಟಿಲು ಹತ್ತಬಹುದು.

# ಗ್ರಾಹಕರೇ, ನಿಮಗಿದು ಗೊತ್ತೇ?

○ ದೀಪಾ ರವೀಂದ್ರ

ಅಕ್ಕನ ಬಂಗಾರವಾದರೂ ಅಕ್ಕಸಾಲಿಗ ಅಕ್ಕಿಯಷ್ಟಾದರೂ ಕದಿಯದೇ ಬಿಡುವುದಿಲ್ಲ ಎಂಬ ಗಾದೆಯಂತೆ ಸದಾಕಾಲ ಗ್ರಾಹಕರು ವ್ಯಾಪಾರಿಗಳ ಮೋಸಕ್ಕೆ ಬಲಿಯಾಗುವುದು ಮುಂದುವರಿಯುತ್ತಲೇ ಇದೆ.

ಗೋಧಿ ಕೊಂಡರೆ ಮಾತ್ರ ಸೀಮೆಎಣ್ಣೆ ನೀಡುತ್ತೇನೆ ಎನ್ನುವ ರೇಷನ್ ಅಂಗಡಿಯಾತ, ಸ್ಟೌವ್ ಕೊಂಡರೆ ಮಾತ್ರ ಸಿಲಿಂಡರ್ ನೀಡುವುದಾಗಿ ಹೇಳುವ ಗ್ಯಾಸ್ ಏಜೆನ್ಸಿಗಳು, ಮೀಟರ್ ಸರಿ ಇಲ್ಲದಿದ್ದರೂ ಬೇಕಾಬಿಟ್ಟಿ ಬಿಲ್ ನೀಡುವ ಕೆ.ಇ.ಬಿ., ಮಾತನಾಡದೇ ಇದ್ದರೂ ಬಿಲ್ ವಸೂಲಿ ಮಾಡುವ ದೂರವಾಣಿ ಇಲಾಖೆ....

ಹೀಗೆ ಪ್ರತಿದಿನ ನಮ್ಮನ್ನು ದಬಾಯಿಸಿ ಬದುಕುವ ಹಲವಾರು ರೀತಿಗಳಿವೆ. ಆದರೆ ಬಹಳಷ್ಟು ವೇಳೆ ನಾವು ಇದನ್ನು ಪ್ರತಿಭಟಿಸುವುದೇ ಇಲ್ಲ. ಸೀಮೆಎಣ್ಣೆಯಂತೂ ಬೇಕೇಬೇಕಲ್ಲ ಎಂಬ ಕಾರಣಕ್ಕಾಗಿ ಕಲ್ಲುಮಣ್ಣು ಮಿಶ್ರಿತ ಗೋಧಿಯನ್ನು ಕೊಂಡು ತರುತ್ತೇವೆ. ನಿಜವಾಗಿಯೂ ಈ ರೀತಿಯ ಕಾಯ್ದೆ ಇದೆಯೇ ಎಂದು ಆಲೋಚಿಸುವುದಿಲ್ಲ. ಪ್ರತಿಭಟಿಸುವುದೂ ಇಲ್ಲ. ಯಾರಾದರೊಮ್ಮೆ ಪ್ರತಿಭಟಿಸಿದಾಗಲೇ ನಿಜವಾದ ವಿಷಯ ಹೊರ ಬೀಳುತ್ತದೆ.

ಯಾವುದೇ ವ್ಯಾಪಾರಸ್ಥರು ಗ್ರಾಹಕರ ಮೇಲೆ ನೀವು ಇಂತಹ ವಸ್ತು ಪಡೆಯಲೇಬೇಕು ಎಂದು ಒತ್ತಡ ಹೇರುವಂತಿಲ್ಲ. ನೀವು ಕೊಳ್ಳುವ ಗೊಬ್ಬರ, ಬೀಜ, ಸೋಪು, ಟೂತ್‌ಪೇಸ್ಟ್ ಅಥವಾ ಇನ್ನಾವುದೇ ವಸ್ತುವಾದರೂ ಅದರ ಮೇಲೆ ನಮೂದಿಸಿದ ಬೆಲೆಯನ್ನೇ ಅಂಗಡಿಯಾತ ತೆಗೆದುಕೊಳ್ಳಬೇಕು. ಆದರೆ ಕೆಲವೊಮ್ಮೆ ಹೆಚ್ಚಿಗೆ ಹಣವನ್ನು ಪಡೆಯಲಾಗುತ್ತದೆ. ಈ ರೀತಿ ಹೆಚ್ಚಿಗೆ ಹಣ ಪಡೆಯುವುದು ಅಪರಾಧ. ಅದನ್ನು ಪ್ರಶ್ನಿಸುವ ಹಕ್ಕು ಪ್ರತಿಯೊಬ್ಬ ನಾಗರಿಕನಿಗೂ ಇದೆ. ಆದರೆ ಬಹಳಷ್ಟು ಬಾರಿ ಹಣ ಹೆಚ್ಚು ಪಡೆಯುವುದು ಏಕೆ ಎಂದು ಪ್ರಶ್ನಿಸಿದರೆ ಒರಟು ಉತ್ತರ ಸಿಗುತ್ತದೆ. ಶೋಷಣೆ ಮುಂದುವರಿಯುತ್ತದೆ.

ಗ್ರಾಹಕರಿಗಾಗುವ ಇಂತಹ ಶೋಷಣೆ ತಡೆಯಲು ಕ್ರಮಕೈಗೊಳ್ಳಬೇಕು ಎಂದು ಸುಪ್ರೀಂಕೋರ್ಟ್ ೧೯೮೬ರಲ್ಲಿ ಕೇಂದ್ರ ಸರ್ಕಾರಕ್ಕೆ ಆದೇಶ ನೀಡಿದ್ದರ ಫಲವಾಗಿ ರಾಜ್ಯಮಟ್ಟದಲ್ಲಿ ಗ್ರಾಹಕರ ವ್ಯಾಜ್ಯ ಪರಿಹಾರ ಆಯೋಗ ಹುಟ್ಟಿಕೊಂಡಿತು. ಜಿಲ್ಲಾಮಟ್ಟದಲ್ಲಿ ಗ್ರಾಹಕರ ವೇದಿಕೆಗಳು ಅಸ್ತಿತ್ವಕ್ಕೆ ಬಂದವು. ಗ್ರಾಹಕರ ಹಿತರಕ್ಷಣಾ ಕಾಯ್ದೆಯನ್ನು ಜಾರಿಗೊಳಿಸುವ ಯತ್ನಗಳೂ ನಡೆದವು.

ಗ್ರಾಹಕರ ವೇದಿಕೆಗಳು ಅರೆ ನ್ಯಾಯಾಂಗ ವ್ಯವಸ್ಥೆ. ರಾಜ್ಯ ಗ್ರಾಹಕರ ಆಯೋಗಕ್ಕೆ ಹೈಕೋರ್ಟಿನ ನಿವೃತ್ತ ನ್ಯಾಯಾಧೀಶರು ಅಧ್ಯಕ್ಷರಾಗಿರುತ್ತಾರೆ. ಜಿಲ್ಲಾ ವೇದಿಕೆಗಳಿಗೆ ಜಿಲ್ಲಾ ಸೆಷನ್ಸ್ ನ್ಯಾಯಾಧೀಶರಾಗಿ ನಿವೃತ್ತರಾದವರು ಅಧ್ಯಕ್ಷರಾಗಿರುತ್ತಾರೆ.

ಯಾವುದೇ ರೀತಿಯ ಸೇವೆ ಅಥವಾ ವಸ್ತುವನ್ನು ಪಡೆದು ಮೋಸ ಹೋದವರು ಈ ವೇದಿಕೆಗಳ ಮೊರೆ ಹೋಗಬಹುದು. ವೇದಿಕೆಗಳಿಗೆ ಬಂದ ದೂರನ್ನು ೩ ತಿಂಗಳಲ್ಲಿ ಪರಿಹರಿಸಬೇಕೆಂದು ಕಾನೂನು ಇದೆ.

ನೀವು ಯಾರಿಂದ ಯಾವ ಕಾರಣಕ್ಕೆ ಮೋಸ ಹೋಗಿದ್ದೀರಿ. ಅದರ ಮೊತ್ತ ಎಷ್ಟು ಎಂಬ ವಿವರಗಳನ್ನೊಳಗೊಂಡು ಗ್ರಾಹಕರ ವೇದಿಕೆಯಲ್ಲಿ ಪ್ರಮಾಣಪತ್ರ ಸಲ್ಲಿಸಬೇಕು. ನಿಮಗೆ ಉಂಟಾದ ನಷ್ಟದ ವಿವರಗಳೂ ಅದರಲ್ಲಿರಬೇಕು. ಅದನ್ನು ಆಧಾರವನ್ನಾಗಿರಿಸಿಕೊಂಡು ಗ್ರಾಹಕ ವೇದಿಕೆಯವರು ಪ್ರತಿವಾದಿಗಳಿಗೆ ನೋಟಿಸ್ ಜಾರಿಗೊಳಿಸುತ್ತಾರೆ. ವಿಚಾರಣೆಯ ದಿನಾಂಕವನ್ನು ಗೊತ್ತು ಮಾಡುತ್ತಾರೆ. ನಿಮ್ಮ ಪರವಾಗಿ ವಕೀಲರು ಹಾಜರಾಗಬೇಕು ಎಂದೇನೂ ಇಲ್ಲ. ಸ್ವತಃ ನೀವೇ ವಾದ ಮಾಡಬಹುದು. ಪರಿಹಾರವನ್ನೂ ಪಡೆಯಬಹುದು.

ಜಿಲ್ಲಾ ಗ್ರಾಹಕ ವೇದಿಕೆಗಳಿಗೆ ೫ ಲಕ್ಷ ರೂಪಾಯಿವರೆಗಿನ ಪ್ರಕರಣಗಳನ್ನು ವಿಚಾರಣೆ ಮಾಡುವ ಅಧಿಕಾರವಿದೆ. ರಾಜ್ಯ ಗ್ರಾಹಕರ ಆಯೋಗಕ್ಕೆ ೫ ರಿಂದ ೨೦ ಲಕ್ಷ ರೂ. ವರೆಗಿನ ಪ್ರಕರಣಗಳನ್ನು ಇತ್ಯರ್ಥಗೊಳಿಸುವ ಅಧಿಕಾರ ವಿದೆ. ಜಿಲ್ಲಾ ವೇದಿಕೆಗಳು ನೀಡಿದ ತೀರ್ಪನ್ನು ರಾಜ್ಯ ಆಯೋಗದಲ್ಲಿ ಪ್ರಶ್ನಿಸಿ ಪರಿಹಾರ ಪಡೆದುಕೊಳ್ಳಬಹುದು.

ಯಾವುದೇ ವಸ್ತು ಅಥವಾ ಸೇವೆಯನ್ನು ಶುಲ್ಕ ನೀಡಿ ಪಡೆದುಕೊಳ್ಳುವವನೇ ಗ್ರಾಹಕ ಎಂದು ಗ್ರಾಹಕರ ಹಿತರಕ್ಷಣಾ ಕಾಯ್ದೆಯಲ್ಲಿ ತಿಳಿಸಿರುವುದರಿಂದ ಈ ರೀತಿಯ ಸೇವೆ ಅಥವಾ ವಸ್ತು ಪಡೆದು ಮೋಸ ಹೋದವರೆಲ್ಲಾ ಗ್ರಾಹಕರ ವೇದಿಕೆಯ ಮೆಟ್ಟಿಲು ಹತ್ತಬಹುದು. ಬಹಳ ಮುಖ್ಯವಾದದ್ದೆಂದರೆ ಗ್ರಾಹಕರ ವೇದಿಕೆಯ ಸೇವೆ ಸಂಪೂರ್ಣವಾಗಿ ಉಚಿತ ವಾಗಿರುತ್ತದೆ.

ಆದರೆ ಎಲ್ಲ ಸರ್ಕಾರಿ ಯೋಜನೆಗಳಂತೆ ಇದರಲ್ಲಿಯೂ ಹಲವಾರು ನ್ಯೂನ್ಯತೆಗಳಿವೆ. ಮೊದಲನೆಯದಾಗಿ ವೇದಿಕೆ ಅಥವಾ ಆಯೋಗದ ತೀರ್ಪನ್ನು ಜಾರಿಗೊಳಿಸದಿ ರುವವರ ವಿರುದ್ಧ ಕ್ರಮ ಕೈಗೊಳ್ಳುವ ಅಧಿಕಾರ ಇವುಗಳಿಗಿಲ್ಲ. ಈ ರೀತಿಯ ಪ್ರಸಂಗ ಬಂದಾಗ ಅವು ಪ್ರಕರಣಗಳನ್ನು ಸಿವಿಲ್ ನ್ಯಾಯಾಲಯಕ್ಕೆ ವರ್ಗ ಮಾಡಬಹುದಷ್ಟೆ.

ಕೇಂದ್ರ ಸರ್ಕಾರದ ವೆಚ್ಚ ಮತ್ತು ರಾಜ್ಯ ಸರ್ಕಾರಿ ಸಿಬ್ಬಂದಿ ನೆರವಿನಿಂದ ವೇದಿಕೆಗಳು

## ರಾಣೆಬೆನ್ನೂರು ಕೆ.ಇ.ಬಿ.ಯಿಂದ ಬಳಕೆದಾರರಿಗೆ ದಕ್ಷ ಸೇವೆ ನೀಡುವ ಭರವಸೆ

### ಪ್ರಕರಣದ ಹಿನ್ನೆಲೆ

ರಾಣೆಬೆನ್ನೂರಿನ ಶ್ರೀಮತಿ ಫ್ಯಾನ್ಸಿಬಾಯಿ ಪುಕರಾಜ ಜೈನ್ ಎಂಬವರು ತಾನು ಕಟ್ಟಿಸಿದ ಮನೆಗೆ ಯಾರೂ ಬಾಡಿಗೆದಾರರು ಬರದಿರುವ ಕಾರಣ ಸದ್ರಿ ಮನೆಯನ್ನು ಖಾಲಿ ಬಿಟ್ಟಿರುವುದಾಗಿ ಕೆ.ಇ.ಬಿ.ಗೆ ತಿಳಿಸಿದ್ದರು. ಆ ಮನೆಯಲ್ಲಿ ವಿದ್ಯುತ್ ಬಳಕೆಯಾಗು ತ್ತಿರಲಿಲ್ಲ. ಮೀಟರ್ ರೀಡರ್ ಬಂದು ನೋಡುವಾಗ ಮೀಟರು ಚಲಿಸುತ್ತಿರಲ್ಲಿ. ಹೀಗೆ ಚಲಿಸದಿರುವ ವಿದ್ಯುತ್ ಮೀಟರನ್ನು ತಪ್ಪಾಗಿ ಅರ್ಥೈಸಿಕೊಂಡ ಮೀಟರ್ ರೀಡರ್ ತನ್ನ ವರದಿಯಲ್ಲಿ ಮೀಟರ್ ಕೆಟ್ಟಿದೆ (Meter Not Recording) ಎಂದು ತಿಳಿಸಿದ್ದರು. ನಿಜವಾದ ಕಾರಣ ಗೊತ್ತಿದ್ದರೂ ಸಂಬಂಧಪಟ್ಟ ಶಾಖಾಧಿಕಾರಿಯವರು ಕಂದಾಯ ವಿಭಾಗಕ್ಕೆ ತಿಳಿಸದೇ ಇದ್ದುದರಿಂದ ಆಡಿಟ್ ಶಾರ್ಟ್‌ಕ್ಲೇಮಿಗೆ ಕಾರಣವಾಗಿ ಶ್ರೀಮತಿ ಫ್ಯಾನ್ಸಿ ಬಾಯಿಯವರಿಗೆ ರೂ. ೧೭೭೯ ಕ್ಕೆ ಬಿಲ್ ಬಂದಿತ್ತು. ಈ ಬಿಲ್ಲನ್ನು ಆಕ್ಷೇಪಿಸಿ ಶ್ರೀಮತಿ ಫ್ಯಾನ್ಸಿ ಬಾಯಿಯವರು ಕೆ.ಇ.ಬಿ.ಗೆ ೩ ಪತ್ರಗಳನ್ನು ಬರೆದಿದ್ದರೂ ಏನೂ ಫಲಕಾರಿಯಾಗಲಿಲ್ಲ. ದಿನಾಂಕ ೧೯-೭-೯೭ರಲ್ಲಿ ಇನ್ನೊಂದು ಜ್ಞಾಪನಪತ್ರ ಬರೆದು ಯಥಾಪ್ರತಿಯನ್ನು ಬಸ್ರೂರು ಬಳಕೆದಾರರ ವೇದಿಕೆಗೆ ಕಳುಹಿಸಿದ್ದರು. ಈ ಪತ್ರವನ್ನು ಅನುಸರಿಸಿ ವೇದಿಕೆಯು ಮಾನ್ಯ ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್ (ವಿ.) ರಾಣೆಬೆನ್ನೂರು ಇವರಿಗೆ ಒಂದು ಪತ್ರವನ್ನು ಬರೆಯಿತಲ್ಲದೆ ತನ್ನ ಪತ್ರಿಕೆಯ ೨೦-೮-೯೭ರ ಸಂಚಿಕೆಯಲ್ಲಿ ಶ್ರೀಮತಿ ಫ್ಯಾನ್ಸಿ ಬಾಯಿಯವರ ಪತ್ರವನ್ನು ಪ್ರಕಟಿಸಿತು.

ವೇದಿಕೆಯ ಪತ್ರಕ್ಕೆ ಉತ್ತರವಾಗಿ ರಾಣೆಬೆನ್ನೂರಿನ ಮಾನ್ಯ ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರರು ದಿನಾಂಕ ೧೮-೯-೯೭ರಲ್ಲಿ ಈ ಕೆಳಗಿನಂತೆ ಪತ್ರ ಬರೆದು ತಮ್ಮಿಂದ ಬಳಕೆದಾರರಿ ಗುಂಟಾದ ತಪ್ಪಿಗೆ ವಿಷಾದ ವ್ಯಕ್ತಪಡಿಸಿದ್ದಾರೆ ಮತ್ತು ಇನ್ನು ಮುಂದೆ ಬಳಕೆದಾರರಿಗೆ ದಕ್ಷ ಸೇವೆ ನೀಡುವ ಭರವಸೆಯನ್ನು ನೀಡಿದ್ದಾರೆ.

### ಪತ್ರದ ಪಾಠ

ನಮ್ಮ ಗ್ರಾಹಕರಾದ ಶ್ರೀಮತಿ ಫ್ಯಾನ್ಸಿಬಾಯಿ ಪುಕರಾಜ ಜೈನ ಇವರು ನಮ್ಮ ಕಚೇರಿಯ ಪತ್ರ ಸಂಖ್ಯೆ ೯೦೪೪/೨೫-೧೧-೯೪ಕ್ಕೆ ತಮ್ಮ ಮನೆಯು ಯೋಗ್ಯ ಬಾಡಿಗೆದಾರರು ಬರದೇ ಇದ್ದ ಕಾರಣ ಖಾಲಿಯೇ ಇದ್ದುದ್ದಾಗಿ ಆ ಸಮಯದಲ್ಲಿ ಮೀಟರ್ ಸರಿಯಾಗಿಯೇ ಇದ್ದು ವಿದ್ಯುತ್ ಬಳಕೆ ಇಲ್ಲದೆ ಹಾಗೆ ನಿಂತಿರುವುದನ್ನು ಕಂಡು ಮೀಟರ್ ರೀಡರ್ ಎಂ.ಎನ್.ಆರ್. ಎಂದು ತಪ್ಪು ಬರೆದಿರುವುದಾಗಿ ದಿನಾಂಕ ೩೦-೧೧-೯೪ರಂದು ತಿಳಿಸಿದ್ದರೆನ್ನಲಾದ ಪತ್ರವನ್ನು ಕಂದಾಯ ವಿಭಾಗಕ್ಕೆ ಒಪ್ಪಿಸದೇ ಇದ್ದುದು ಸದರಿ ಆಡಿಟಷಾರ್ಟ್ ಕ್ಲೇಮಿಗೆ ಕಾರಣವಾಗಿದೆ. ನಮ್ಮ ಮತ್ತು ನಿಮ್ಮ ಗ್ರಾಹಕರಿಗೆ ನಮ್ಮ ಮಂಡಳಿ ಯಲ್ಲಿಯೇ ಸಾಕಷ್ಟು ಮುಖ್ತ ವಿಚಾರ ವಿನಿಮಯಕ್ಕೆ ದಾರಿ ಮತ್ತು ಕಾಲಾವಕಾಶಗಳಿದ್ದಾಗ್ಯೂ, ಹಾಗೂ ನಮ್ಮ ಮೇಲಾಧಿಕಾರಿಗಳ ನಡುವೆ ವಿಚಾರ ವಿನಿಮಯಕ್ಕೆ ಹೆಚ್ಚಿಗೆ ಸಮಯವನ್ನು ಕೊಡದೆ ಏಕಾಯೇಕಿ ನಮ್ಮ ಗ್ರಾಹಕರು ಬಳಕೆದಾರರ ವೇದಿಕೆಗೆ ಅರ್ಜಿಯನ್ನು ಸಲ್ಲಿಸಿರುವು ದನ್ನು ಕಂಡು ತುಂಬ ವಿಷಾದನೀಯವೆನಿಸುತ್ತದೆ. ಆದಾಗ್ಯೂ ನಾವು ಅದಕ್ಕೆ ಮನ್ನಣೆಯನ್ನು ಕೊಟ್ಟು ಆದ ತಪ್ಪನ್ನು ಸರಿಪಡಿಸುವುದಾಗಿ ತಿಳಿಯಬಯಸುತ್ತೇವೆ.

ನಮ್ಮ ಗ್ರಾಹಕರು ದಿನಾಂಕ ೧೯-೭-೯೭ರಂದು ಮತ್ತು ಅದಕ್ಕೂ ಹಿಂದೆ ಬರೆಯಲಾದ ಎಲ್ಲಾ ಪತ್ರಗಳು ಬಂದಿದ್ದು ಅವುಗಳಲ್ಲಿನ ವಿಷಯವನ್ನು ಕುರಿತಂತೆ ಮತ್ತು ತಪ್ಪಾಗಿ ಆಕರಣೆ ಮಾಡಲಾದ ಆಡಿಟಷಾರ್ಟಕ್ಲೇಮ್ ರೂ. ೧೭೭೯ನ್ನು ಹಿಂತೆಗೆದುಕೊಳ್ಳುವ ವಿಷಯವನ್ನು ಕುರಿತಂತೆ ಈಗಾಗಲೇ ಸವಿಸ್ತಾರವಾಗಿ ನಮ್ಮ ಮೇಲಾಧಿಕಾರಿಗಳಿಗೆ ತಿಳಿಸಲಾಗಿದ್ದು ಅವರಿಂದ ಒಪ್ಪಿಗೆ ಬಂದ ನಂತರ ಸದರಿ ಮೊತ್ತವನ್ನು ಹಿಂತೆಗೆದುಕೊಂಡು ನಮ್ಮ ಖಾತೆಯಲ್ಲಿ ಹೊಂದಾಣಿಕೆ ಮಾಡಿಕೊಳ್ಳಲಾಗುವುದು. ಇದಕ್ಕೆ ಯಾವ ಸಂಶಯವನ್ನು ಪಡಬೇಕಾಗಿಲ್ಲ. ಈಗ ನಾವು ಗ್ರಾಹಕರ ಬಿಲ್ಲಿನಲ್ಲಿ ಸದರಿ ಆಡಿಟ್‌ಷಾರ್ಟ್‌ಕ್ಲೇಮನ್ನು ಬಾಕಿ ಎಂದು ಹಾಕಿ ಕಳಿಸುತ್ತಿರುವುದಿಲ್ಲ. ಈ ವಿಷಯವನ್ನು ತಮ್ಮ ಗ್ರಾಹಕರಿಂದ ಮನವರಿಕೆ ಮಾಡಿಕೊಳ್ಳಬಹುದು.

ಅದರ ನಂತರ, ನಿಮ್ಮ ಬಳಕೆದಾರರ ವೇದಿಕೆಯಂತೆಯೇ ನಮ್ಮ ಮಂಡಳಿಯು ಸಹಾ ಬಳಕೆದಾರರ ಹಕ್ಕು ಹಾಗೂ ಹಿತಾಸಕ್ತಿಗಳನ್ನು ರಕ್ಷಿಸುವುದರಲ್ಲಿ ಹಾಗೂ ಬಳಕೆದಾರರ ಅಗತ್ಯಗಳಿಗೆ ಬದ್ಧವಾಗಿರುವ ನ್ಯಾಯ ಮತ್ತು ದಕ್ಷ ಸೇವೆಯ ಸಾಧನೆಯತ್ತ ನಿಮ್ಮೊಂದಿಗೆ ಸದಾ ಸಹಕರಿಸುವುದಾಗಿ ತಿಳಿಯಬಯಸುತ್ತೇವೆ. ಇಲ್ಲಿಗೆ ಈ ವಿಷಯವನ್ನು ಮುಕ್ತಾಯಗೊಳಿಸುವಂತೆ ತಮ್ಮಲ್ಲಿ ವಿನಯಪೂರ್ವಕವಾಗಿ ಬೇಡಿಕೊಳ್ಳುವೆವು.

(ಸೌಜನ್ಯ: "ಬಳಕೆದಾರರ ಶಿಕ್ಷಣ" ಪಾಕ್ಷಿಕ ಪತ್ರಿಕೆ)

ನಡೆಯಬೇಕಾಗಿರುವುದರಿಂದ ಬಹುತೇಕ ಜಿಲ್ಲೆಗಳಲ್ಲಿ ಇವು ಅಂಗವಿಕಲ ವೇದಿಕೆಗಳಾಗಿವೆ. ವೇದಿಕೆಗೆ ಅಧ್ಯಕ್ಷರಲ್ಲದೆ ಇಬ್ಬರು ಸದಸ್ಯರಿರಬೇಕು. ಪ್ರಕರಣಗಳನ್ನು ಇತ್ಯರ್ಥ ಮಾಡಲು ಕನಿಷ್ಠ ಅಧ್ಯಕ್ಷರು ಮತ್ತು ಒಬ್ಬ ಸದಸ್ಯರಾದರೂ ಇರಬೇಕು. ಅಧ್ಯಕ್ಷರಿಲ್ಲದಿದ್ದರೆ ಸದಸ್ಯರಲ್ಲಿಯೇ ಹಿರಿಯರಾದವರು ಅಧ್ಯಕ್ಷ ಸ್ಥಾನದಲ್ಲಿ ಕುಳಿತು ಪರಿಹಾರ ವಿಚಾರಣೆ ಆರಂಭಿಸಬಹುದಾದರೂ ಆ ರೀತಿ ಬಹಳಷ್ಟು ಕಡೆ ನಡೆದಿಲ್ಲ. ಸಿಬ್ಬಂದಿ ಕೊರತೆಯಂತೂ ಎಲ್ಲ ವೇದಿಕೆಯನ್ನು ಕಾಡುತ್ತಿದೆ. ಗ್ರಾಹಕರ ಜಾಗೃತಿಗೆ ಸರ್ಕಾರಗಳು ನಿರೀಕ್ಷಿತ ಮಟ್ಟದಲ್ಲಿ ಕಾರ್ಯಕ್ರಮ ಹಮ್ಮಿಕೊಂಡಿಲ್ಲ. ಕೆಲವು ಜಿಲ್ಲೆಗಳಲ್ಲಿ ಸ್ವಯಂ ಸೇವಾ ಸಂಘಗಳೂ ಈ ಕಾರ್ಯದಲ್ಲಿ ವಿಫಲವಾಗಿವೆ.

ಇಷ್ಟೆಲ್ಲಾ ಹೇಳಿ ಆದ ನಂತರ ಈಗ ರಾಜ್ಯದ ಗ್ರಾಹಕರ ವೇದಿಕೆಗಳ ಸ್ಥಿತಿಗತಿಯ ಬಗ್ಗೆ ಕೊಂಚ ಗಮನಹರಿಸೋಣ. ಮೊದಲನೆಯದಾಗಿ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯ ಪರಿಹಾರ ಆಯೋಗ.

## ರಾಜ್ಯ ಆಯೋಗ

ಗ್ರಾಹಕರ ಹಿತರಕ್ಷಣಾ ಕಾಯ್ದೆಯನ್ವಯ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯ ಪರಿಹಾರ ಆಯೋಗ ೧೯೮೯ರಲ್ಲಿ ಅಸ್ತಿತ್ವಕ್ಕೆ ಬಂತು. ಬೆಂಗಳೂರು ಹೈಗ್ರೌಂಡ್ ಬಳಿ ಇರುವ ಬಸವ ಭವನದಲ್ಲಿ ಇದರ ಕಾರ್ಯಾಲಯವಿದೆ.

### ಬಸ್ರೂರು ಬಳಕೆದಾರರ ವೇದಿಕೆ

ದಕ್ಷಿಣ ಕನ್ನಡದ ಪುಟ್ಟ ಹಳ್ಳಿಯಾದ ಬಸ್ರೂರಿನಿಂದ ಕಾರ್ಯನಿರ್ವಹಿಸುತ್ತಿರುವ ಈ ಬಳಕೆದಾರರ ವೇದಿಕೆ ತನ್ನ ದಕ್ಷತೆಯಿಂದ ಇಡೀ ರಾಜ್ಯದ ಗಮನ ಸೆಳೆದಿದೆ. ಬಳಕೆದಾರರಿಗೆ ಮಾರ್ಗದರ್ಶನ ನೀಡುವುದರ ಜೊತೆಗೆ ಈ ವೇದಿಕೆ 'ಬಳಕೆದಾರರ ಶಿಕ್ಷಣ' ಎಂಬ ಪಾಕ್ಷಿಕ ಪತ್ರಿಕೆಯನ್ನೂ ಹೊರತರುತ್ತಿದೆ. ಇದರ ವಾರ್ಷಿಕ ಚಂದಾ ರೂ. ೨೫/-. ಹೆಚ್ಚಿನ ವಿವರಗಳಿಗೆ ಸಂಪರ್ಕಿಸಿ.

ಸಂಚಾಲಕರು
ಬಳಕೆದಾರರ ವೇದಿಕೆ (ರಿ)
ಬಸ್ರೂರು - ೫೭೬ ೨೧೧
ದ.ಕ.

ಹೈಕೋರ್ಟಿನ ನಿವೃತ್ತ ನ್ಯಾಯಾಧೀಶ ನ್ಯಾಯಮೂರ್ತಿ ಜಗನ್ನಾಥ್ ಹೆಗಡೆ ಆಯೋಗದ ಅಧ್ಯಕ್ಷರು. ನಿವೃತ್ತ ಜಿಲ್ಲಾ ನ್ಯಾಯಾಧೀಶ ಕುಮಾರಗೌಡ ಮತ್ತು ನಿವೃತ್ತ ಪ್ರಾಧ್ಯಾಪಕಿ ಕಮಲಮ್ಮ ಸದಸ್ಯರು. ಸಿವಿಲ್ ನ್ಯಾಯಾಧೀಶರಾಗಿರುವ ಬಿ. ಶ್ರೀರಾಮರೆಡ್ಡಿ ಆಡಳಿತಾಧಿಕಾರಿ. ಆಯೋಗದಲ್ಲಿ ಕೆಲಸ ಮಾಡುವ ಸಿಬ್ಬಂದಿಯಲ್ಲಿ ಬಹುತೇಕ ಮಂದಿ ಎರವಲು ಸೇವೆಯವರಾದ್ದರಿಂದ ಆಯೋಗದ ಕಾರ್ಯ ಮಂದಗತಿಯಿಂದಲೇ ಸಾಗಿದೆ.

ಜಿಲ್ಲಾ ಗ್ರಾಹಕರ ವೇದಿಕೆಗಳ ತೀರ್ಪನ್ನು ಪ್ರಶ್ನಿಸಿ ಆಯೋಗಕ್ಕೆ ಮೇಲ್ಮನವಿ ಸಲ್ಲಿಸುವ ಅವಕಾಶವಿರುವುದರಿಂದ ಇಲ್ಲಿಗೆ ಬಹುತೇಕ ಮೇಲ್ಮನವಿಗಳೇ ಬರುತ್ತವೆ. ಪ್ರತಿ ತಿಂಗಳೂ ೨೦ ರಿಂದ ೨೫ ದೂರುಗಳು ಬಂದರೆ ೮೦ ರಿಂದ ೧೦೦ ಮೇಲ್ಮನವಿಗಳು ಬರುತ್ತವೆ. ೧೯೮೯ ರಿಂದ ೧೯೯೭ರ ಜೂನ್ ವೇಳೆಗೆ ೧೪೫೧ ನೇರ ದೂರುಗಳು ಮತ್ತು ೩೮೮೯ ಮೇಲ್ಮನವಿಗಳು ಇಲ್ಲಿ ದಾಖಲಾಗಿವೆ. ಅವುಗಳಲ್ಲಿ ೧೧೩೦ ದೂರುಗಳು ಹಾಗೂ ೨೪೮೩ ಮೇಲ್ಮನವಿಗಳನ್ನು ಇತ್ಯರ್ಥ ಮಾಡಲಾಗಿದೆ. ೩೨೧ ದೂರು ಮತ್ತು ೧೩೨೬ ಮೇಲ್ಮನವಿಗಳು ಇತ್ಯರ್ಥವಾಗಬೇಕಿದೆ. ಬಹುತೇಕ ಪ್ರಕರಣಗಳು ಗ್ರಾಹಕರ ಪರವಾಗಿ ಇತ್ಯರ್ಥವಾಗಿವೆ ಎನ್ನುವುದು ಗಮನಾರ್ಹ.

## ಬೆಂಗಳೂರು

ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆಗೆ ಸಂಬಂಧಿಸಿದಂತೆ ಮೂರು ವೇದಿಕೆಗಳಿವೆ. ಬೆಂಗಳೂರು ಪ್ರಧಾನ ಗ್ರಾಹಕರ ವೇದಿಕೆ ಕಾವೇರಿ ಭವನದಲ್ಲಿದೆ. ಹೆಚ್ಚುವರಿ ವೇದಿಕೆ - ೧ ಮತ್ತು ಹೆಚ್ಚುವರಿ ವೇದಿಕೆ - ೨ ಸ್ವಾತಿ ಕಟ್ಟಡದಲ್ಲಿವೆ. ೧೯೮೯ರಲ್ಲಿ ಅಸ್ತಿತ್ವಕ್ಕೆ ಬಂದ ಈ ವೇದಿಕೆಗಳಿಗೆ ಈಗಲೂ ಸಿಬ್ಬಂದಿಯ ಕೊರತೆ ಇದೆ. ಹೆಚ್ಚುವರಿ - ೧ ವೇದಿಕೆಯಲ್ಲಿ ೧,೩೭೪ ಹಾಗೂ ಹೆಚ್ಚುವರಿ - ೨ ವೇದಿಕೆಯಲ್ಲಿ ೩,೫೦೦ ಪ್ರಕರಣಗಳು ಇತ್ಯರ್ಥವಾಗದೇ ಉಳಿದಿವೆ.

## ಹಾಸನ

ರವೀಂದ್ರನಗರದ ಬಾಡಿಗೆ ಕಟ್ಟಡದಲ್ಲಿ ಕಚೇರಿ ಇದೆ. ನ್ಯಾಯಾಧೀಶ ಎನ್.ಆರ್. ಗೂಡವಾಲ ಅಧ್ಯಕ್ಷರು. ಸದ್ಯಕ್ಕೆ ಸದಸ್ಯರಿಲ್ಲ. ಸಿಬ್ಬಂದಿ ಕೊರತೆ ಮಾಮೂಲಿನಂತೆ ಇದೆ.

ನೀವೆಲ್ಲ ನಮ್ಮಂತಹ ಸಣ್ಣ ಸಣ್ಣ ಕಳ್ಳರ ಹಿಂದೆ ಬರುವುದು ಬಂದಿಸೋದಕ್ಕೆ. ಆದರೆ ದೊಡ್ಡ ಕಳ್ಳರ ಹಿಂದೆ ಹೋಗುವುದು ರಕ್ಷಣೆ ಕೊಡುವುದಕ್ಕೆ ಮಾತ್ರ.

ಗಂಗರಾಮಯ್ಯ ಆಡಳಿತಾಧಿಕಾರಿ. ಆರಂಭವಾದಾಗಿನಿಂದ ಈವರೆಗೆ ೮೯೦ ದೂರುಗಳು ಬಂದಿವೆ. ಅವುಗಳಲ್ಲಿ ೭೭೩ ಇತ್ಯರ್ಥವಾಗಿವೆ. ೧೯೯೭ರ ಏಪ್ರಿಲ್ ವೇಳೆಗೆ ೧೧೭ ಪ್ರಕರಣಗಳು ಹಾಗೇ ಉಳಿದಿವೆ. ಏಪ್ರಿಲ್ ನಂತರ ೧೮೮ ದೂರುಗಳು ದಾಖಲಾಗಿವೆ.

## ಕಾರವಾರ

೧೯೯೭ರ ವರೆಗೆ ಬೆಳಗಾವಿ ವಿಭಾಗದಡಿಯಲ್ಲಿದ್ದ ಇಲ್ಲಿನ ವೇದಿಕೆ ೧೯೯೨ರ ಫೆಬ್ರವರಿಯಲ್ಲಿ ಸ್ವತಂತ್ರವಾಗಿ ವಿಚಾರಣೆ ಆರಂಭಿಸಿತು. ವಿ.ಜಿ.ಮಹಾಜನ ಅಧ್ಯಕ್ಷರು. ೨೬೪ ಪ್ರಕರಣಗಳು ಇತ್ಯರ್ಥವಾಗದೇ ಬಾಕಿ ಉಳಿದಿವೆ.

## ಚಿತ್ರದುರ್ಗ

೧೯೯೧ರ ನವೆಂಬರ್ ೮ ರಂದು ಕಾರ್ಯಾರಂಭ ಮಾಡಿತು. ಈವರೆಗೆ ೧೧೦೨ ದೂರುಗಳು ದಾಖಲಾಗಿವೆ. ೯೦೧ ಇತ್ಯರ್ಥವಾಗಿವೆ. ೨೪೩ ಗ್ರಾಹಕರ ಪರವಾಗಿದೆ. ೪೮೯ ಪ್ರಕರಣಗಳು ತಾಂತ್ರಿಕ ಕಾರಣಗಳಿಗಾಗಿ ವಜಾ ಆಗಿವೆ. ೨೦೧ ದೂರುಗಳು ಬಾಕಿ ಇವೆ. ಎಚ್.ಆರ್.ನಾರಾಯಣರಾವ್ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

## ಮಂಡ್ಯ

ಎಂ.ಪಿ.ಜಕಾತಿ ಅಧ್ಯಕ್ಷರು. ೧೯೯೧ರಲ್ಲಿ ಆರಂಭ. ಈವರೆಗೆ ಬಂದ ೬೬೦ ದೂರುಗಳಲ್ಲಿ ೬೦೨ ದೂರುಗಳು ವಿಲೇವಾರಿ ಆಗಿದೆ. ೫೮ ಪ್ರಕರಣಗಳು ಬಾಕಿ ಇವೆ.

## ಶಿವಮೊಗ್ಗ

೧೯೯೧ರಲ್ಲಿ ಆರಂಭವಾದ ಈ ವೇದಿಕೆಗೆ ಈಗ ಡಿ.ಎ.ಲಟ್ಟೆ ಅಧ್ಯಕ್ಷರಾಗಿದ್ದಾರೆ. ಆರಂಭವಾದಾಗಿನಿಂದ ೯೧೧ ದೂರುಗಳು ಬಂದಿದ್ದು ೭೫೦ ದೂರುಗಳು ಇತ್ಯರ್ಥವಾಗಿವೆ.

## ಕೋಲಾರ

ಇದು ಅತ್ಯಂತ ಹೀನಾಯ ಸ್ಥಿತಿಯಲ್ಲಿರುವ ವೇದಿಕೆ. ಅಧ್ಯಕ್ಷರಿದ್ದರೂ ಸದಸ್ಯರಿಲ್ಲ. ಸಿಬ್ಬಂದಿ ಕೊರತೆಯಂತೂ ತೀವ್ರವಾಗಿಯೇ ಇದೆ. ಈಗ ಬಿ.ಸಿ.ಸಿದ್ದಪ್ಪ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾರಾದರೂ ಗ್ರಾಹಕರ ಜಾಗೃತಿ ಕೊರತೆಯಿಂದ ವೇದಿಕೆ ಕುಂಟುತ್ತ ಸಾಗಿದೆ.

## ತುಮಕೂರು

ಸದ್ಯಕ್ಕೆ ಇಲ್ಲಿಯ ವೇದಿಕೆಗೆ ಅಧ್ಯಕ್ಷರಿಲ್ಲ. ೧೯೯೨ ರಿಂದ ೧,೭೨೭ ದೂರು ದಾಖಲಾಗಿ ೧೪೦೪ ಇತ್ಯರ್ಥವಾಗಿವೆ. ೧೯೯೬ರಲ್ಲಿ ಇನ್ನೂ ೨೨೮ ದೂರುಗಳು ದಾಖಲಾಗಿದ್ದರಿಂದ ೨೬೮ ಪ್ರಕರಣಗಳು ವಿಚಾರಣೆಯಾಗದೇ ಹಾಗೇ ಉಳಿದಿವೆ.

## ರಾಯಚೂರು

೧೯೯೧ರಲ್ಲಿ ಅಸ್ತಿತ್ವಕ್ಕೆ ಬಂದರೂ ವಿಚಾರಣೆ ಆರಂಭಿಸಿದ್ದು ೧೯೯೨ರಲ್ಲಿ. ಜಿಲ್ಲಾ ಸಿವಿಲ್ ನ್ಯಾಯಾಲಯದ ಕಟ್ಟಡದಲ್ಲಿಯೇ ಗ್ರಾಹಕರ ವೇದಿಕೆ ಕಚೇರಿ ಇದೆ. ಜಿಲ್ಲಾ ಸೆಷನ್ಸ್ ನ್ಯಾಯಾಧೀಶ ಶಂಕರ್ ಮುರಗದ್ ಅಧ್ಯಕ್ಷರಾಗಿದ್ದಾರೆ. ೧೯೯೨ ರಿಂದ ೬೭೮ ದೂರು ದಾಖಲಾಗಿದೆ. ೨೩೮ ಗ್ರಾಹಕರ ಪರ ಇತ್ಯರ್ಥವಾಗಿದ್ದು ೧೧೭ ಪ್ರಕರಣ ಬಾಕಿ ಇವೆ.

## ಬಳ್ಳಾರಿ

೧೯೯೧ರವರೆಗೆ ಕಲ್ಬುರ್ಗಿ ವಿಭಾಗದ ಅಡಿಯಲ್ಲಿದ್ದ ವೇದಿಕೆ ೧೯೯೨ರಲ್ಲಿ ಸ್ವತಂತ್ರವಾಗಿ ಕಾರ್ಯಾರಂಭ ಮಾಡಿತು. ಜಿಲ್ಲಾಧಿಕಾರಿ ಕಚೇರಿ ಆವರಣದಲ್ಲಿರುವ ಕಂದಾಯ ಕಚೇರಿ ಪಕ್ಕದಲ್ಲಿ ವೇದಿಕೆಯ ಕಚೇರಿ ಇದೆ. ಈವರೆಗೆ ೬೫೬ ದೂರು ಬಂದಿವೆ. ೫೮೪ ಪ್ರಕರಣ ಇತ್ಯರ್ಥವಾಗಿವೆ. ೭೨ ಬಾಕಿ ಇವೆ. ಸದ್ಯ ರಾಮರಾವ್ ಕುಲಕರ್ಣಿ ಅವರು ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

## ಬೆಳಗಾವಿ

ಎನ್.ಎಸ್.ಸಂಗೊಳ್ಳಿ ವೇದಿಕೆಯ ಅಧ್ಯಕ್ಷರಾಗಿದ್ದಾರೆ. ೧೯೯೫ರವರೆಗೆ ೧,೫೩೫ ದೂರುಗಳು ದಾಖಲಾಗಿ ೧,೧೫೩ ಇತ್ಯರ್ಥವಾಗಿವೆ. ೫೧೬ ಪ್ರಕರಣಗಳಲ್ಲಿ ಗ್ರಾಹಕರ ಪರ ತೀರ್ಪು ಬಂದಿದೆ. ೧೯೯೬ರಲ್ಲಿ ೨೮೩ ದೂರು ಬಂದಿದ್ದವು. ಈಗ ೨೫೫ ಪ್ರಕರಣಗಳು ವಿಚಾರಣೆಗೆ ಕಾದು ಕುಳಿತಿವೆ.



**ಅನುಭವ**

ಬಿಸಿಹಾಲು ಕುಡಿದು
ತುಟಿ ಸುಟ್ಟುಕೊಂಡವ
ಮಜ್ಜಿಗೆಯನ್ನು
ಊದಿ ಕುಡಿದ!

– ಶ್ರೀಶೈಲ ಭಾವಿಕಟ್ಟಿ

## ಮೈಸೂರು

ಅಧ್ಯಕ್ಷರಿಲ್ಲದೆಯೂ ಕಲಾಪಗಳನ್ನು ನಡೆಸಿ ಪ್ರಕರಣ ಇತ್ಯರ್ಥಗೊಳಿಸಿದ ಮೊದಲ ವೇದಿಕೆ ಇದು. ೧೯೮೯ರಲ್ಲಿ ಅಸ್ತಿತ್ವಕ್ಕೆ ಬಂದರೂ ೧೯೯೧ರಲ್ಲಿ ಕಾರ್ಯಾರಂಭ ಮಾಡಿತು. ಮಂಡ್ಯ, ಹಾಸನ, ಚಿಕ್ಕಮಗಳೂರು, ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳೂ ಮೊದಲು ಇದರ ವ್ಯಾಪ್ತಿಯಲ್ಲೇ ಇದ್ದವು. ಈಗ ಎಲ್ಲವೂ ಪ್ರತ್ಯೇಕಗೊಂಡಿವೆ.

ದಾಖಲಾದ ೨,೩೮೯ ದೂರುಗಳ ಪೈಕಿ ೧,೪೪೧ ಇತ್ಯರ್ಥವಾಗಿವೆ. ಅವುಗಳಲ್ಲಿ ೮೧೨ ಗ್ರಾಹಕರ ಪರವಾಗಿವೆ. ೮೪೩ ಪ್ರಕರಣ ಬಾಕಿ ಇವೆ.

## ಕಲ್ಬುರ್ಗಿ

ಎಸ್.ಅಕ್ಬಾಲ್ ಅಹ್ಮದ್ ಅಧ್ಯಕ್ಷರು ೧೯೮೯ರಲ್ಲಿ ಆರಂಭವಾದ ಈ ವೇದಿಕೆ ರಾಜ್ಯದಲ್ಲಿಯೇ ಅತ್ಯುತ್ತಮ ಎನ್ನುವ ರೀತಿಯಲ್ಲಿ ಕೆಲಸ ಮಾಡಿದೆ. ಜಿಲ್ಲಾ ಕೇಂದ್ರದಲ್ಲಿ ವ್ಯಾಜ್ಯಗಳನ್ನು ಪರಿಹಾರ ಮಾಡುವುದಲ್ಲದೆ



ತಾಲ್ಲೂಕಿಗೂ ಭೇಟಿ ನೀಡಿ ವ್ಯಾಜ್ಯ ಪರಿಹಾರ ಮಾಡಿದ ಕೀರ್ತಿ ಈ ವೇದಿಕೆಯದ್ದು. ಸಿಬ್ಬಂದಿ ಕೊರತೆಯೂ ಈ ವೇದಿಕೆಯನ್ನು ಕಾಡುತ್ತಿಲ್ಲ.

**ದಕ್ಷಿಣ ಕನ್ನಡ**

೧೯೯೦ರ ನವೆಂಬರ್‌ನಲ್ಲಿ ಆರಂಭವಾದ ಈ ವೇದಿಕೆ ಮಹಾನಗರಪಾಲಿಕೆ ಕಟ್ಟಡದಲ್ಲಿದೆ. ಕೆ.ಆರ್.ಭಟ್ ಅಧ್ಯಕ್ಷರು. ೧೯೯೦ ರಿಂದ ೩೧೦೦ ಪ್ರಕರಣ ದಾಖಲಾಗಿವೆ. ೨೧೨೮ ದೂರು ಇತ್ಯರ್ಥವಾಗಿವೆ.

**ಬೀದರ**

೧೯೯೧ರ ಡಿಸೆಂಬರ್ ೧೭ರಂದು ಆರಂಭವಾದ ಈ ವೇದಿಕೆಗೆ ಬಸಣ್ಣ ಮಣ್ಣೂರೆ ಈಗಿನ ಅಧ್ಯಕ್ಷರು. ಈವರೆಗೆ ೪೬೬ ಪ್ರಕರಣ ಇತ್ಯರ್ಥವಾಗಿವೆ.

**ಧಾರವಾಡ**

೧೯೯೦ರಲ್ಲಿ ಆರಂಭ. ಎಚ್.ಎಸ್. ಪಾಟೀಲ್ ಹಾಲಿ ಅಧ್ಯಕ್ಷರು. ಈ ವರ್ಷದ ಮೇ ವೇಳೆಗೆ ೨೨೩೭ ಪ್ರಕರಣಗಳು ದಾಖಲಾಗಿವೆ. ೧೯೭೨ ಪ್ರಕರಣಗಳು ಇತ್ಯರ್ಥವಾಗಿವೆ. ೪೩೬ ಗ್ರಾಹಕರ ಪರ ತೀರ್ಪು ಬಂದಿದೆ. ೧೩೭೧ ದೂರುಗಳನ್ನು ತಾಂತ್ರಿಕ ಕಾರಣಗಳಿಗಾಗಿ ವಜಾ ಮಾಡಲಾಗಿದೆ. ೩೪೨ ದೂರುಗಳು ಬಾಕಿ ಇವೆ.

**ಚಿಕ್ಕಮಗಳೂರು**

೧೯೯೧ ಡಿಸೆಂಬರ್ ೨೪ರಂದು ಆರಂಭವಾದ ವೇದಿಕೆ ವಿಜಯಪುರ ರಸ್ತೆಯಲ್ಲಿದೆ. ಬಿ.ಶಂಕರ ನಾರಾಯಣ ಭಟ್ ಅವರು ವೇದಿಕೆಗೆ ಅಧ್ಯಕ್ಷರು. ೧೬೯ ಪ್ರಕರಣ ಬಾಕಿ ಇವೆ.

ಒಟ್ಟಿನಲ್ಲಿ ಬಹುತೇಕ ಎಲ್ಲ ವೇದಿಕೆಗಳಲ್ಲಿಯೂ ಸಿಬ್ಬಂದಿ ಕೊರತೆ ಇದೆ. ಗ್ರಾಹಕರನ್ನು ಜಾಗೃತಿಗೊಳಿಸುವ ಸ್ವಯಂಸೇವಾ ಸಂಸ್ಥೆಗಳೂ ಸಕ್ರಿಯವಾಗಿಲ್ಲದಿರುವುದು ಗ್ರಾಹಕರ ಚಳವಳಿ ಸೊರಗಲು ಕಾರಣವಾಗಿದೆ. ಸರ್ಕಾರ ಈ ನಿಟ್ಟಿನಲ್ಲಿ ಕಾರ್ಯಕ್ರಮ ರೂಪಿಸಬೇಕು ನಿಜ. ಆದರೆ ನಮ್ಮ ಹಕ್ಕನ್ನು ಚಲಾಯಿಸಲು ನಾವೇ ಮುಂದಾಗಬೇಕು.

●

# ಗ್ರಾಮೀಣಾಭಿವೃದ್ಧಿ ಮಂತ್ರಿ ಎಂ. ಪಿ. ಪ್ರಕಾಶರ 'ಕುಟುಂಬ ಕಲ್ಯಾಣ' ನೀತಿ!



ಪಕ್ಷದಲ್ಲಿನ ವಿವಿಧ ಗುಂಪುಗಳು ಪರಸ್ಪರ ಕೆಸರು ಎರೆಚಾಡುವುದನ್ನು ಆನಂದಿಸುತ್ತ, ಒಳಗೊಳಗೇ ಪ್ರೋತ್ಸಾಹಿಸುತ್ತ ಸಮಯ ಸಿಕ್ಕರೆ ಮುಖ್ಯಮಂತ್ರಿ ಪದವಿ ದಕ್ಕಿಸಿಕೊಳ್ಳಲು ಹೊಂಚು ಹಾಕಿರುವ ಈ ಮಂತ್ರಿ ತನ್ನ ಇಂಥ ಕುತಂತ್ರಗಳ ಕಾರಣದಿಂದಲೇ ಎಲ್ಲರಿಂದ ತಿರಸ್ಕರಿಸಲ್ಪಟ್ಟರೆ ಅಚ್ಚರಿ ಇಲ್ಲ.

**ಕ**ರ್ನಾಟಕದ ಪ್ರಸಕ್ತ ರಾಜಕೀಯ ರಂಗದಲ್ಲಿ ಗ್ರಾಮೀಣಾಭಿವೃದ್ಧಿ ಮಂತ್ರಿ ಎಂ.ಪಿ. ಪ್ರಕಾಶರಂತಹ ಇನ್ನೊಬ್ಬ ವ್ಯಕ್ತಿ ಸಿಗಲಾರರು. ಇವರು ಒಂದೆಡೆ ಜಾತಿ ಸಂಘಟನೆಗಳಲ್ಲಿ ಜಗದ್ಗುರುಗಳ ಕಾಲಿಗೆ ಎರಗುತ್ತ ಇನ್ನೊಂದೆಡೆ ವಿಚಾರವಾದಿ ಸೆಮಿನಾರುಗಳಲ್ಲಿ ತಾಸುಗಟ್ಟಲೆ ವಾದ ಮಂಡಿಸಿ ಸೈ ಎನ್ನಿಸಿಕೊಳ್ಳಬಲ್ಲರು. ಜನತಾದಳದ ಹಲವು ಗುಂಪುಗಳ ನಾಯಕರನ್ನು ಏಕಕಾಲಕ್ಕೆ ಓಲೈಸುತ್ತ ಸಂದರ್ಭಾನುಸಾರ ಸದ್ದಿಲ್ಲದೆ ಬತ್ತಿ ಇಡುವ ಕಾಯಕದಲ್ಲೂ ಈ ಸಮಾಜವಾದಿ ಮಂತ್ರಿಯದು ಎತ್ತಿದ ಕೈ. ಅಂತೆಯೇ ಅವರು ಹೆಗಡೆ, ಪಟೇಲ, ಗೌಡ ಹೀಗೆ ವಿಭಿನ್ನ ಹಿತಾಸಕ್ತಿಯ ರಾಜಕಾರಣಿಗಳೊಂದಿಗೆ ಅಂತರಂಗದ ಸಂಪರ್ಕವಿರಿಸಿಕೊಂಡು ರಾಜಕೀಯ ಚದುರಂಗದಾಟದಲ್ಲಿ ನಾಜೂಕಿನ ಹೆಜ್ಜೆ ಇರಿಸಬಲ್ಲರು. ಈ ಶರಣ ಮಂತ್ರಿಯ ದುರಂತವೆಂದರೆ ರಾಜ್ಯದ ಬಹುತೇಕ ನಾಯಕರು ಪ್ರಕಾಶರ ಈ ನಯವಂಚಕತನವನ್ನು ಅರಿತಿರುವುದು. ಪಕ್ಷದಲ್ಲಿನ ವಿವಿಧ ಗುಂಪುಗಳು ಪರಸ್ಪರ ಕೆಸರು ಎರೆಚಾಡುವುದನ್ನು ಆನಂದಿಸುತ್ತ, ಒಳಗೊಳಗೇ ಪ್ರೋತ್ಸಾಹಿಸುತ್ತ ಸಮಯ ಸಿಕ್ಕರೆ ಮುಖ್ಯಮಂತ್ರಿ ಪದವಿ ದಕ್ಕಿಸಿಕೊಳ್ಳಲು ಹೊಂಚು ಹಾಕಿರುವ ಈ ಮಂತ್ರಿ ತನ್ನ ಇಂಥ ಕುತಂತ್ರಗಳ ಕಾರಣದಿಂದಲೇ ಎಲ್ಲರಿಂದ ತಿರಸ್ಕರಿಸಲ್ಪಟ್ಟರೆ ಅಚ್ಚರಿ ಇಲ್ಲ.

### ಬಣ್ಣದ ಮಾತು ಕಾಣದ ಕೃತ್ಯ

ಇವರ ಉಸ್ತುವಾರಿಯಲ್ಲಿರುವ ಬಳ್ಳಾರಿ ಜಿಲ್ಲೆಯ ಆಗುಹೋಗುಗಳನ್ನು ಗಮನಿಸಿದರೆ ಪ್ರಕಾಶರು ಎಷ್ಟು ಬಲಿಷ್ಠರು ಮತ್ತು ಎಷ್ಟು ಏಕಾಂಗಿ ಎನ್ನುವುದು ಸ್ಪಷ್ಟವಾಗುತ್ತದೆ. ರಾಜ್ಯ ಸಂಪುಟದಲ್ಲಿ ಮೂರನೇ ಸ್ಥಾನದಲ್ಲಿರುವ ಈ ವ್ಯಕ್ತಿಯನ್ನು ಮನಸ್ಸಾಕ್ಷಿಯಾಗಿ ಬೆಂಬಲಿಸುವ ಒಬ್ಬನೇ ಒಬ್ಬ ಶಾಸಕನೂ ಬಳ್ಳಾರಿ ಜಿಲ್ಲೆಯಲ್ಲಿ ಸಿಗುವುದಿಲ್ಲ. ಆದಾಗ್ಯೂ ಆಗದವರನ್ನು ಬಣ್ಣದ ಮಾತು ಹಾಗೂ ಕಾಣದ ಕೃತ್ಯಗಳಿಂದ ಮಟ್ಟ ಹಾಕುವುದರಲ್ಲಿ ಇವರು ನಿಸ್ಸೀಮರು. ಇದಕ್ಕೆ ಇತ್ತೀಚಿನ ನಿದರ್ಶನವೆಂದರೆ ಅಲ್ಪಸಂಖ್ಯಾತ ಜನಾಂಗದ ಕ್ರಿಯಾಶೀಲ ರಾಜಕಾರಣಿ ಎನ್.ಎಂ.ನಬಿ ಮೂಲೆಗುಂಪಾಗಿರುವುದು.

ಆಯ್ದ ಪತ್ರಕರ್ತರನ್ನು ಒಳಗೆ ಹಾಕಿಕೊಂಡು ಭಾರಿ ಆದರ್ಶವಾದಿ ರಾಜಕಾರಣಿ-ಯಂತೆ ಪ್ರಚಾರ ಗಿಟ್ಟಿಸಿಕೊಳ್ಳುವ ಪ್ರಕಾಶರ ವರ್ತನೆ ಕಣ್ಣು ಮುಚ್ಚಿ ಹಾಲು ಕುಡಿಯುವ ಬೆಕ್ಕಿನಂತಿದೆ.

ಇವರು ತಮ್ಮ ನೆನಪಿನ ಶಕ್ತಿ ಬಳಸಿ ಕಾಣಲು ಬರುವ ಪ್ರತಿಯೊಬ್ಬರನ್ನೂ ಹೆಸರಿನಿಂದ ಕರೆದು ಹೆಗಲ ಮೇಲೆ ಕೈ ಹಾಕಿದರೆಂದರೆ ಅಮಾಯಕ ಅಭಿಮಾನಿಗಳು ರೋಮಾಂಚನಗೊಳ್ಳುತ್ತಾರೆ. ಇಂಥ ಜನರ ಹಿಂಡು ತಮ್ಮನ್ನು ಸದಾ ಸುತ್ತುವರಿದಿರಬೇಕೆಂಬುದು ಮಂತ್ರಿಯ ಇರಾದೆ. ಅಂತೆಯೇ ಹಲವು ಕೆಲಸಕಾರ್ಯಗಳಿಗಾಗಿ ಈ ಜನಪ್ರತಿನಿಧಿಯನ್ನು ಭೇಟಿಯಾಗುವ ಕ್ಷೇತ್ರದ ಜನತೆಗೆ, ಪಕ್ಷದ ಕಾರ್ಯಕರ್ತರಿಗೆ ಎಡತಾಕುವ ಕೆಲಸ ತಪ್ಪಿದ್ದಲ್ಲ. ಪ್ರವಾಸ ಕಾಲದಲ್ಲಿ ಕಂಡಾಗ, ''ಬೆಂಗಳೂರಿಗೆ ಬಾರಪಾ ಮಾಡಿಸಿಕೊಡ್ತೇನೆ... ನಮ್ಮ ಹುಡುಗನಾದ ನಿನಗೇ ಮಾಡದಿದ್ದರೆ ಹೇಗೆ?'' ಮುಂತಾಗಿ ಬುರುಡೆ ಬಿಡುವುದು, ಹಳ್ಳಿಗಾಡಿನ ಆ ಕಾರ್ಯಕರ್ತ ಸಾಲಸೋಲ ಮಾಡಿ ಬೆಂಗಳೂರಿಗೆ ಬಂದು ಮಂತ್ರಿಯನ್ನು ಭೇಟಿಯಾದರೆ ಮನೆ, ವಿಧಾನಸೌಧ ಎಂದು ಎಡತಾಕಿಸಿ, 'ಊರಿಗೆ ಬಂದಾಗ ಕಾಣು, ಅಲ್ಲೇ

ಹೇಳಿ ಮಾಡಿಸಿಬಿಡ್ತೀನಿ' ಎಂದು ಮೂಗಿಗೆ ತುಪ್ಪ ಒರೆಸುವ ಕಲೆ ಪ್ರಕಾಶರಿಗೆ ಕರಗತ. ಅವರ ಈ ಬುದ್ಧಿ ಜಿಲ್ಲೆಯಲ್ಲಿ, ಪಕ್ಷದ ಕಾರ್ಯಕರ್ತರ ವಲಯದಲ್ಲಿ ಬಹು ದೊಡ್ಡ ಜೋಕ್ ಆಗಿರುವುದು ಸುಳ್ಳಲ್ಲ. ಹಾಗಾಗಿ ಎದುರಿಗೆ ಸಿಕ್ಕಾಗ ಸಲಾಂ ಚೆಲ್ಲಿ ಬೆನ್ನ ಹಿಂದೆ ಕ್ಯಾಕರಿಸಿ ಉಗುಳುವ ಅಪಾರ ಅಭಿಮಾನಿ ವೃಂದವನ್ನು ಪಡೆದ ಶ್ರೇಯಸ್ಸು ಪ್ರಕಾಶರಿಗೆ ಸಲ್ಲುತ್ತದೆ.

## ಎಂ.ಪಿ. ಪ್ರಕಾಶರೇ,

### ಈ ಪ್ರಶ್ನೆಗಳಿಗೆ ಉತ್ತರಿಸುವ ತಾಕತ್ತು ನಿಮಗಿದೆಯೇ?

೧. ದಲಿತರ ಹೆಸರಿನಲ್ಲಿ ಶಿಕ್ಷಣ ಸಂಸ್ಥೆ ಹುಟ್ಟುಹಾಕಿ ಸರ್ಕಾರಕ್ಕೆ ಕೋಟ್ಯಾಂತರ ಹಣ ವಂಚಿಸಿರುವ ಎಸ್.ಎಂ.ದಕ್ಷಿಣಾಮೂರ್ತಿ ವಿರುದ್ಧ ಇಲಾಖಾ ವಿಚಾರಣೆಗಳೆಂಬ ಕಪಟ ನಾಟಕ ಬಿಟ್ಟು ಪ್ರಾಮಾಣಿಕ ಕ್ರಮ ಕೈಗೊಳ್ಳಲು ನಿಮ್ಮಿಂದ ಸಾಧ್ಯವೇ?

೨. ದಕ್ಷಿಣಾಮೂರ್ತಿಯ ಭ್ರಷ್ಟ ವ್ಯವಹಾರಗಳಲ್ಲಿ ಶಾಮೀಲಾಗಿರುವ ಶಿಕ್ಷಣ ಇಲಾಖೆಯ ಸಿಬ್ಬಂದಿ ವಿರುದ್ಧ ಕ್ರಮಕೈಗೊಳ್ಳದಿರುವ ಗುಟ್ಟೇನು?

೩. ದಕ್ಷಿಣಾಮೂರ್ತಿಯಿಂದ ಸರ್ಕಾರಕ್ಕೆ ವಂಚನೆಯಾಗಿರುವ ಬಗ್ಗೆ ನಮ್ಮ ಸಂಘವು ೧೯೮೮ ರಿಂದ ಸಲ್ಲಿಸುತ್ತಿರುವ ಸಾಕ್ಷ್ಯಾಧಾರ ದಾಖಲೆಗಳ ತುಕವೇ ಸುಮಾರು ೭೦ ಕೆ.ಜಿ.ಯಷ್ಟಿದೆ! ಇದು ನಿಮ್ಮ ಕಣ್ಣಿಗೆ ಬಿದ್ದಿಲ್ಲವೇ? ಇದು ನಿಮ್ಮ ಮೌಲ್ಯಾಧಾರಿತ ರಾಜಕೀಯವೇ?

**- ಸಿರಿಗೇರಿ ಪನ್ನಾರಾಜ್**, ಗೌರವ ಅಧ್ಯಕ್ಷರು, ಶ್ರೀ ಸಿದ್ಧೇಶ್ವರ ಶಿಕ್ಷಕರ ಸಂಘ, ಬಳ್ಳಾರಿ

**[ರಾಜಕಾರಣಿ, ಅಧಿಕಾರಿ, ಖಾಸಗಿ ಶಿಕ್ಷಣ ಸಂಸ್ಥೆ ಒಡೆಯರಿಂದ ಗಬ್ಬೆದ್ದು ಹೋಗಿರುವ ಬಳ್ಳಾರಿ ಜಿಲ್ಲೆಯ ಶಿಕ್ಷಣ ಕ್ಷೇತ್ರದ ಅಕ್ರಮಗಳನ್ನು ಪ್ರತಿಭಟಿಸಿ ೨೦-೧೧-೯೭ರಂದು ಬಳ್ಳಾರಿಯಲ್ಲಿ ಬೃಹತ್ ಪ್ರಮಾಮದ ಪಿಕೇಟಿಂಗ್ ನಡೆಯಲಿದೆ.]**

### 'ಕುಟುಂಬ ಕಲ್ಯಾಣ'

ಪಕ್ಷದ ಕಾರ್ಯಕರ್ತರು, ಮತದಾರರು, ಗ್ರಾಮೀಣ ಭಾಗದ ಮರಿ ರಾಜಕಾರಣಿಗಳು ಹೊತ್ತು ತರುವ ನೈಜ ಸಮಸ್ಯೆಗಳನ್ನು ಪರಿಹರಿಸುವ, ಬಂದವರಿಗೆ ನೆರವಾಗುವ ಒಳ್ಳೆಯತನ ಪ್ರಕಾಶರಿಗೆ ಇಲ್ಲದಿರಬಹುದು. ಆದರೆ ಅವರು ತಮ್ಮ ಕುಟುಂಬದವರಿಗೆ ಆಪ್ತೇಷ್ಟರಿಗೆ ಬೇಕುಬೇಕಾದುದನ್ನು ಮಾಡಿ ಕೊಡುವುದರಲ್ಲಿ ಮಾತ್ರ ಬಹಳ ಕಟ್ಟುನಿಟ್ಟು. ಜೆ.ಎಚ್.ಪಟೇಲರ ಸರ್ಕಾರದಲ್ಲಿ ಎಂ.ಪಿ. ಪ್ರಕಾಶರು ಲೆಕ್ಕಕ್ಕೆ ಮಾತ್ರ ಗ್ರಾಮೀಣಾಭಿವೃದ್ಧಿ ಸಚಿವರು. ಆದರೆ ವಾಸ್ತವದಲ್ಲಿ ಅವರಿಗೆ ''ಕುಟುಂಬ ಕಲ್ಯಾಣ''ದಲ್ಲೇ ಅಪಾರ ಆಸಕ್ತಿ! ಪಾಪ! ಅವರ ಈ ಗುಣವೂ ಸ್ವಂತದ್ದಲ್ಲ. 'ಮ್ಯಾಡಂ' ರುದ್ರಮ್ಮನವರ ಕಾರ್ಯಕ್ಷಮತೆಯಿಂದಾಗಿ 'ಸಾಹೇಬರು' ಆಯಕಟ್ಟಿನ ವಿಷಯಗಳಲ್ಲಿ ಅಸಹಾಯಕರು. ಬರಿ ಹೂಂ ಗುಟ್ಟಿ ಸಹಿ ಹಾಕುವ ಸರದಾರರು.

ಗ್ರೆನೈಟ್ ಹಗರಣದಲ್ಲಿ ಹೆಸರು ಸಿಲುಕಿಸಿಕೊಂಡಿರುವ ಮಗ ರವಿ ಮತ್ತು 'ಮ್ಯಾಡಂ' ಅವರ ಪ್ರಭಾವದ ಪರಿಚಯವಿದ್ದವರ್‍ಯಾರೂ ಸಾಹೇಬರ ಮಾತಿಗೆ ಮರುಳಾಗುವ ಮೂರ್ಖತನ ತೋರುವುದಿಲ್ಲ. ನೇರವಾಗಿ ಅಡುಗೆ ಮನೆ ನಂಟು ಬೆಳೆಸುತ್ತಾರೆ. ಅಮ್ಮ - ಮಗನ ವ್ಯವಹಾರ ಜ್ಞಾನ ಎಷ್ಟು ಬೆಳೆದಿದೆಯೆಂದರೆ ಇತ್ತೀಚೆಗೆ ಪ್ರಕಾಶರ ಪರಮಾಪ್ತರಾದ ಆಪ್ತ ಕಾರ್ಯದರ್ಶಿ ಕೊಟ್ರಪ್ಪನವರೇ ಕುಟುಂಬದವರ ಹಸ್ತಕ್ಷೇಪಕ್ಕೆ ಬೇಸತ್ತು ರಾಜೀನಾಮೆ ಸಲ್ಲಿಸಿದ್ದರಂತೆ. ಯಥಾ ಪ್ರಕಾರ ಸಾಹೇಬರ ಖಾಜಿ ನ್ಯಾಯದಿಂದ ಸಂಬಂಧಗಳು ತೇಪೆ ಹಾಕಿಕೊಂಡಿವೆ. ಇನ್ನೊಮ್ಮೆ ಚುನಾವಣೆಗೆ ನಿಂತರೆ ಗೆಲ್ಲುವುದಿಲ್ಲ ಎಂಬುದನ್ನು ಖಾತ್ರಿಪಡಿಸಿಕೊಂಡಿರುವ ಪ್ರಕಾಶ್ ಮುಂದಿನ ಬಾರಿ ಮಗನನ್ನೋ, ಮಡದಿಯನ್ನೋ ಕಣಕ್ಕೆ ಇಳಿಸುತ್ತಾರೆಂಬ ವದಂತಿ ಹಡಗಲಿ ಕ್ಷೇತ್ರದಲ್ಲಿ ಜನಜನಿತವಾಗಿದೆ.

ಇತ್ತೀಚೆಗೆ ಜಿಲ್ಲೆಯ ಪ್ರತಿಷ್ಠಿತ ವೀರಶೈವ ವಿದ್ಯಾವರ್ಧಕ ಸಂಘದ ಚುನಾವಣೆಯಲ್ಲಿ ಪ್ರಕಾಶರ ಸಹೋದರ ಮಣ್ಣು ಮುಕ್ಕಿದ್ದಾಗಿದೆ. ಬೆಂಗಳೂರಿನ ಕೆಲಸ ಕಾರ್ಯಗಳನ್ನೆಲ್ಲಾ ಬದಿಗೊತ್ತಿ ಚುನಾವಣಾ ಸಮಯಕ್ಕೆ ಬಳ್ಳಾರಿಗೆ ಹಾಜರಾಗಿ ಎಷ್ಟೆಲ್ಲಾ ಲಾಬಿ ನಡೆಸಿದರೂ ಇವರಿಂದ ಸಹೋದರನ ಸೋಲನ್ನು ತಪ್ಪಿಸಲಾಗಲಿಲ್ಲ. ಇದು ಪ್ರಕಾಶರ ರಾಜಕೀಯ ಭವಿಷ್ಯದ ಸೂಚನೆಯೂ ಹೌದು.

ಒಂದು ವರದಿಯಂತೆ ಲಂಡನ್‌ಗೆ ತೆರಳಲಿರುವ ಮಾಯಾರಾವ್ ಅವರ ನೃತ್ಯ ತಂಡದಲ್ಲಿ ಪ್ರಕಾಶರ ಮಗಳು ಸುಮಾ ಸೇರಿದ್ದಾರೆ. ಈ ತಂಡಕ್ಕೆ ಈಗಾಗಲೇ ೪ ಲಕ್ಷ ರೂಪಾಯಿ ಮುಂಗಡ ಸಂಭಾವನೆ ದೊರೆತಿದೆ. ಇಂಥ ಸೌಭಾಗ್ಯ ಯಾವ ಸಾಮಾನ್ಯ ನೃತ್ಯ ಕಲಾವಿದರಿಗೆ ತಾನೇ ಸಿಕ್ಕೀತು?

ಹಂಪಿ ವಿ.ವಿ.ದಲ್ಲಿ ಪ್ರತಿಭಾವಂತ ವಿದ್ಯಾರ್ಥಿಯೊಬ್ಬನಿಗೆ ದಕ್ಕಬೇಕಿದ್ದ ಎಂ.ಫಿಲ್ ಸೀಟನ್ನು ಪ್ರಕಾಶರು ಚಂದ್ರಶೇಖರ ಕಂಬಾರರ ಮೇಲೆ ಪ್ರಭಾವ ಬೀರಿ ತಮ್ಮ ಮಗಳಿಗೆ ದೊರಕಿಸಿಕೊಟ್ಟಿದ್ದು ಈಗ ಹಳೆಯ ಸುದ್ದಿಯಾಗಿದೆ.

**ಜೆ.ಎಚ್.ಪಟೇಲರ ಸರ್ಕಾರದಲ್ಲಿ ಎಂ.ಪಿ. ಪ್ರಕಾಶರು ಲೆಕ್ಕಕ್ಕೆ ಮಾತ್ರ ಗ್ರಾಮೀಣಾಭಿವೃದ್ಧಿ ಸಚಿವರು. ಆದರೆ ವಾಸ್ತವದಲ್ಲಿ ಅವರಿಗೆ ''ಕುಟುಂಬ ಕಲ್ಯಾಣ''ದಲ್ಲೇ ಅಪಾರ ಆಸಕ್ತಿ!**

### ಜಿಂದಲ್ ನಂಟು

ಪ್ರಕಾಶರ 'ಕುಟುಂಬ ಕಲ್ಯಾಣ' ಯೋಜನೆಯು ಆಪ್ತೇಷ್ಟರ ಕುಟುಂಬ ಕಲ್ಯಾಣಕ್ಕೂ ವಿಸ್ತರಣೆಗೊಂಡಿದೆ. ಮಂತ್ರಿಗಳ ಆಪ್ತ ಕಾರ್ಯದರ್ಶಿ ಕೊಟ್ರಪ್ಪನವರು ತಮ್ಮ ಮಗಳಿಗೆ ಜಿಂದಲ್ ವಿಜಯನಗರ ಉಕ್ಕು ಕಂಪನಿಯಲ್ಲಿ ನೌಕರಿ ಕೊಡಿಸುವಲ್ಲಿ ಯಶಸ್ವಿಯಾಗಿದ್ದಾರೆ. ಪ್ರಖರ ಪ್ರಾಮಾಣಿಕತೆ, ತುಸು ಜಾತಿ ಪ್ರೇಮಕ್ಕೆ ಹೆಸರಾದ ಕೊಟ್ರಪ್ಪನವರು ಕೂಡಾ ಗ್ರಾಮೀಣಾಭಿವೃದ್ಧಿ ಮಂತ್ರಿಗಳ 'ಮನೆ ವಾತಾವರಣ'ಕ್ಕೆ ಬಲಿಯಾಗಿರುವುದು ದುರಂತ.

ಜಿಂದಲ್ ಕಂಪನಿಯಲ್ಲಿ ತಮ್ಮವರನ್ನು

# ಒಡ್ಡೋಲಗದ ಒಂದು ಸಂಭಾಷಣೆ

**ಮಂತ್ರಿ** ಎಂ.ಪಿ. ಪ್ರಕಾಶರು ತಮ್ಮ ಅಧಿಕೃತ ನಿವಾಸದಲ್ಲಿ ಒಡ್ಡೋಲಗ ನಡೆಸುತ್ತಿರುತ್ತಾರೆ. ಆಪ್ತ ಸಹಾಯಕನೊಬ್ಬ ಕಾರ್ಡ್‌ಲೆಸ್ ಟೆಲಿಫೋನ್ ಹಿಡಿದು ಧಾವಿಸಿ ಬರುತ್ತಾನೆ. ಬೆಳಗಿನ ಜಾವ ಬರುವ ಬಹುಪಾಲು ದೂರವಾಣಿ ಕರೆಗಳಿಗೆಲ್ಲಾ ''ಸಾಹೇಬರು ಸ್ನಾನದ ಕೋಣೆಯಲ್ಲಿದ್ದಾರೆ'' ಎಂದು ಹಾದಿ ತಪ್ಪಿಸುವ ಆಪ್ತ ಸಹಾಯಕರು ಅಷ್ಟೊಂದು ಅವಸರದಲ್ಲಿ ಬಂದು ಸಾಹೇಬರಿಗೆ ರಿಸೀವರ್ ಕೊಟ್ಟಾಗ ಅಲ್ಲಿ ನೆರೆದವರಿಗೆ ಅಚ್ಚರಿ. ಅದ್ಯಾವ ವಿ.ಐ.ಪಿ.ಯ ಕರೆಯೋ ಎಂಬ ಕುತೂಹಲ. ಸಂಭಾಷಣೆ ಶುರುವಾಗುತ್ತದೆ.

''ಮಗುವಿನ ಹೆಸರೇನು?''

''......................''

''ಏಳನೇ ತರಗತಿ ಸೀಟಾ? ಯಾರಿಗೆ ಹೇಳಬೇಕು?''

''......................''

''ನಾನು ಈಗ್ಲೆ ಶಿವಾನಂದ ಕೌಜಲಗಿಯವರ ಹತ್ತಿರ ಮಾತಾಡ್ತೀನಿ. ನೀವು ಬೆಳಗಾವಿಯಲ್ಲಿ ಅವರನ್ನು ಕಾಣ್ರಿ''.

''......................''

ಆಪ್ತ ಸಹಾಯಕ ತುಂಬಾ ಚುರುಕು. ತಕ್ಷಣ ಕೌಜಲಗಿಯವರ ಸಂಪರ್ಕ ಕಲ್ಪಿಸಿ ಸಾಹೇಬರ ಕೈಗೆ ರಿಸೀವರ್ ನೀಡುತ್ತಾನೆ. ರಾಜ್ಯ ಸಂಪುಟದಲ್ಲಿ ನಂಬರ್ ಥ್ರೀ ಸ್ಥಾನ ಪಡೆದ ಸಚಿವರು ಕೇವಲ ಏಳನೇ ತರಗತಿ ಸೀಟಿಗೆ ಆಸ್ಥೆ ವಹಿಸಿದ್ದನ್ನು ಕಂಡು ಒಡ್ಡೋಲಗದಲ್ಲಿ ನೆರೆದವರೆಲ್ಲಾ ಹೌಹಾರುತ್ತಾರೆ. ಆ ಕರೆ ಬಂದದ್ದು ಪ್ರಕಾಶರು ಇತ್ತೀಚೆಗೆ ತಮ್ಮ ಮಗಳನ್ನು ಮದುವೆ ಮಾಡಿಕೊಟ್ಟ ಬೈಲಹೊಂಗಲದಿಂದ. ಬೀಗರ ಕಡೆಯವರಿಗೆ ಅಷ್ಟೂ ನೆರವಾಗದಿದ್ದರೆ ಹೇಗೆ?

---

ತುಂಬುವುದರಲ್ಲಿ ಯಶಸ್ವಿಯಾಗಿರುವ ಅಧಿಕಾರಸ್ಥರಲ್ಲಿ ಪ್ರಕಾಶರಿಗೆ ಅಗ್ರಸ್ಥಾನ ಲಭಿಸುತ್ತದೆ. ಈ ಕಂಪನಿಯ ಸಾರ್ವಜನಿಕ ಸಂಪರ್ಕಾಧಿಕಾರಿಯೊಬ್ಬರು ಖಾಸಗಿಯಾಗಿ ಒಪ್ಪಿಕೊಳ್ಳುವಂತೆ ಮಂತ್ರಿ ಪ್ರಕಾಶರ ಶಿಫಾರಸುಗಳಿಗಾಗಿ ಕಂಪನಿಯಲ್ಲಿ ಒಂದು ಪ್ರತ್ಯೇಕ ಫೈಲನ್ನೇ ಮೀಸಲಿಟ್ಟಿದ್ದಾರಂತೆ! ಈ ಅಧಿಕಾರಿ ಲೋಕಾಭಿರಾಮವಾಗಿ ಹರಟುತ್ತ ಸೂಟಕೇಸು ಹಸ್ತಾಂತರಗಳ ಬಗ್ಗೆ ಹಲವಾರು ಕತೆಗಳನ್ನು ಬಿಚ್ಚುತ್ತಾರೆ. ಅವರೇನಾದರೂ ಬಹಿರಂಗವಾಗಿ ಬಾಂಬು ಸಿಡಿಸಲು ಮುಂದಾದರೆ..... ಸೋಗಲಾಡಿ ನಾಯಕರ ಮುಖವಾಡ ಬಯಲಾಗಿ ಜನರೆದುರು ಇನ್ನಷ್ಟು ಬೆತ್ತಲಾದಾರು!

ಹೆಸರು ಮತ್ತು ಹಣ ಎರಡನ್ನೂ ಏಕಪ್ರಕಾರವಾಗಿ ಗಳಿಸಬಲ್ಲ ಪ್ರಕಾಶರ ಬಗ್ಗೆ ಜಿಲ್ಲೆಯಲ್ಲಿ ಪ್ರಚಲಿತವಿರುವ ಕತೆಗಳು, ಉಪಕತೆಗಳು ಒಂದೆರಡಲ್ಲ. ಈ ಸಮಾಜವಾದಿ ಸಚಿವರ ದರ್ಪ ದೌಲತ್ತುಗಳನ್ನು ಅಳೆಯಲು ಅವರು ಮಾಡಿದ ತಮ್ಮ ಮಕ್ಕಳ ಮದುವೆಗಳ ಆರ್ಭಟವನ್ನು ಅವಲೋಕಿಸಿದರೆ ಸಾಕು. ಈ ಕುರಿತ ಒಂದು ಸಣ್ಣ ಸ್ಯಾಂಪಲ್ಲು : ಇತ್ತೀಚೆಗೆ ತಮ್ಮ ಮಗಳ ಮದುವೆ ಸಂದರ್ಭದಲ್ಲಿ ಈ ತತ್ವನಿಷ್ಠ ರಾಜಕಾರಣಿ ಬಟ್ಟೆ ಹೊಲಿಸಲೇ ೫೦,೦೦೦ ರೂಪಾಯಿ ಹೊಲಿಗೆಯವನ ಬಿಲ್ ಖರ್ಚು ಮಾಡಿದ್ದಾರೆ! ಇದರ ಮೇಲೆ ಇವರ ಆರ್ಥಿಕ ಸಾಮರ್ಥ್ಯವನ್ನು ಅಂದಾಜು ಗಟ್ಟಬಹುದಾಗಿದೆ.

## ಮುಖದಲ್ಲಿ ನಗೆ ಮನದಲ್ಲಿ ಹಗೆ

ಪ್ರಕಾಶರ 'ಕುಟುಂಬ ಕಲ್ಯಾಣ' ಕಾರ್ಯಕ್ರಮ ಇಷ್ಟಕ್ಕೆ ನಿಲ್ಲುವುದಿಲ್ಲ. ಅವರಿಗೆ ಇತ್ತೀಚೆಗೆ ತಮ್ಮ ತಂದೆಯ ಬಗ್ಗೆ ಅಭಿಮಾನ ಉಕ್ಕಿ ಭೋರ್ಗರೆಯತೊಡಗಿದೆ. ಇತಿಹಾಸದಲ್ಲಿ ಹೂತುಹೋದ ಅಪ್ಪ ಮ.ಮ.ಪಾಟೀಲರ 'ಸಾಧನೆ'ಗಳನ್ನು ತಾವೇ ಹಣ ಹಾಕಿ ಗದಗಿನ ಮಠದ ಲಾಂಛನದಲ್ಲಿ ಪ್ರಕಾಶಿಸಲು ಮುಂದಾಗಿದ್ದಾರೆ!

ಬಳ್ಳಾರಿ ಜಿಲ್ಲೆಯ ಅಪರೂಪದ ರಾಜಕಾರಣಿಯಾಗಿದ್ದ ಕೆ.ಚನ್ನಬಸವನಗೌಡರ ಬಗ್ಗೆ ಎಂದೋ ಬರಬೇಕಿದ್ದ ಗ್ರಂಥಕ್ಕೆ ಪ್ರಕಾಶರು ಪರೋಕ್ಷವಾಗಿ ತಡೆ ಹಾಕಿದ್ದನ್ನು ಈ ಪ್ರಸಂಗದ ಒಳಹೊರಗು ಬಲ್ಲ ಹಿರಿಯರು ಇಂದಿಗೂ ನೆನೆಯುತ್ತಾರೆ. ಚನ್ನಬಸವನಗೌಡರ ಸಾಧನೆ, ವರ್ಚಸ್ಸಿನ ಮುಂದೆ ಏನೂ ಅಲ್ಲದ ಮ.ಮ. ಪಾಟೀಲರನ್ನು ದಾಖಲಿಸ ಹೊರಟ ಪ್ರಕಾಶರ ಕ್ರಮ ಜನರ ಕಣ್ಣಲ್ಲಿ ಅಪಹಾಸ್ಯಕ್ಕೆ ಗುರಿಯಾಗಿದೆ.

ಹಾಗೆಯೇ ಅಭಿಮಾನಿಗಳ ಹೆಸರಿನಲ್ಲಿ ತಮ್ಮ 'ಸಂಕಲ್ಪ-ಸಾಧನೆ'ಗಳ ಬಗ್ಗೆ ಪುಸ್ತಕ ಪ್ರಕಟಿಸುವುದು, ಇಂಥ ಕಾರ್ಯಕ್ಕೆ ಹುರುಕಡ್ಲಿ ಶಿವಕುಮಾರರಂಥ ಸೂಕ್ಷ್ಮಮತಿಗಳನ್ನೇ ಬಳಸಿಕೊಳ್ಳುವುದು ಪ್ರಕಾಶರ ಚಾಣಾಕ್ಷತನಕ್ಕೆ ನಿದರ್ಶನ.

ಮುಖದಲ್ಲಿ ಸದಾ ನಗೆ ಅಂಟಿಸಿಕೊಂಡ, ಮನದಲ್ಲಿ ಹಗೆ ತುಂಬಿಕೊಂಡಿರುವ ಎಂ.ಪಿ.ಪ್ರಕಾಶರ ಸ್ವಭಾವ ಇಂದು ಸಾಮಾನ್ಯ ಕಾರ್ಯಕರ್ತರಿಂದ ಹಿಡಿದು ರಾಜ್ಯ ನಾಯಕರ ತನಕ ಜಗಜ್ಜಾಹೀರಾಗಿದೆ. ಇದರಿಂದಾಗಿಯೇ ಅವರ ಭವಿಷ್ಯದ ರಾಜಕೀಯ ಡೋಲಾಯಮಾನ ಸ್ಥಿತಿ ತಲುಪಿರುವುದು.

## ಅದಕ್ಷರಿಗೆ ಪ್ರೋತ್ಸಾಹ ದುಷ್ಟರಿಗೆ ರಕ್ಷಣೆ!

ಎಂ.ಪಿ. ಪ್ರಕಾಶರ ವಿಶ್ವಾಸಕ್ಕೆ ಪಾತ್ರರಾಗಬೇಕಾದರೆ ಕೋಲೆ ಬಸವನಂತೆ ತಲೆ ಹಾಕುವ ಪೆದ್ದುತನವಿರಬೇಕು ಇಲ್ಲವೇ ಹಣಕಾಸು ವ್ಯವಹಾರ ಕುದುರಿಸಬಲ್ಲ ಚಾಣಾಕ್ಷತೆ ಇರಬೇಕು. ಈ ಮಾತಿಗೆ ಸಾಕ್ಷಿಯಾಗಿ ಈ ಮಂತ್ರಿ ಪ್ರೋತ್ಸಾಹಿಸುತ್ತಿರುವ ವ್ಯಕ್ತಿಗಳ ಪಟ್ಟಿಯನ್ನು ಪರಿಶೀಲಿಸಬಹುದು. ಭೂ ಸೇನಾ ನಿಗಮದ ಅಧ್ಯಕ್ಷ ಬಾವಿ ಬೆಟ್ಟಪ್ಪ, ಬಳ್ಳಾರಿ ಜಿಲ್ಲಾ ಪಂಚಾಯಿತಿ ಅಧ್ಯಕ್ಷ ಚಿಗಟೇರಿ ವೀರಣ್ಣ ಎಷ್ಟು ಅದಕ್ಷರು ಎಂದು ಬಿಡಿಸಿ ಹೇಳಬೇಕಿಲ್ಲ. ಸಚಿವರ ಮಾನಸ ಪುತ್ರನೆಂದೇ ಬಣ್ಣಿಸಲ್ಪಡುವ ಹೊಸಪೇಟೆಯ ಅಯ್ಯಾಳಿ ತಿಮ್ಮಪ್ಪನ ಕಾರುಬಾರು ಜಗಜ್ಜಾಹೀರಾಗಿದೆ. ಇನ್ನು ಜಿಲ್ಲೆಯ ಶಿಕ್ಷಣ ಕ್ಷೇತ್ರವನ್ನು ತನ್ನ ಅಕ್ರಮಗಳಿಂದ ಗಲೀಜೆಬ್ಬಿಸಿರುವ ದಕ್ಷಿಣಾಮೂರ್ತಿಗೆ ಎಂ.ಪಿ. ಪ್ರಕಾಶರಂತಹ ಪ್ರಭಾವಿ ಮಂತ್ರಿಯ ಕೃಪಾಕಟಾಕ್ಷವಿರದಿದ್ದರೆ ಈ ಕುಳ ಇಷ್ಟೊಂದು ಕೊಬ್ಬಲು ಸಾಧ್ಯವಿರಲಿಲ್ಲವೆಂಬುದು ಬಹಿರಂಗ ಸತ್ಯ. ಮಂತ್ರಿಗಳ ನೆರವಿನ ಋಣ ತೀರಿಸಲೋ ಎಂಬಂತೆ ಎಸ್.ಎಂ. ದಕ್ಷಿಣಾಮೂರ್ತಿ ಇಟಗಿಯ ಕಾಲೇಜೊಂದಕ್ಕೆ ಪ್ರಕಾಶರ ತಂದೆಯ ಹೆಸರನ್ನು (ಮ.ಮ.ಪಾಟೀಲ ಪ.ಪೂ. ಕಾಲೇಜು) ಇಟ್ಟು ಕೃತಾರ್ಥರಾಗಿದ್ದಾರೆ. ಹಲವಾರು ಹಗರಣಗಳಿಗೆ ಬೆನ್ನೆಲುಬು ಎಂದು ಭಾವಿಸಲಾದ ಹಡಗಲಿಯಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಯಾಗಿದ್ದ ಎಚ್.ಎಂ.ಮುಕ್ತಿನಾಥ, ಬಳ್ಳಾರಿ ಜಿಲ್ಲೆಯ ಶಿಕ್ಷಣ ಕ್ಷೇತ್ರದ ಭಕ್ಷಕ ಎಸ್.ಎಂ. ದಕ್ಷಿಣಾಮೂರ್ತಿ ಹಾಗೂ ಜಿಲ್ಲೆಯ ಉಸ್ತುವಾರಿ ಸಚಿವ ಎಂ.ಪಿ.ಪ್ರಕಾಶ್ ಮೂವರೂ ಒಂದೇ ಜಾತಿಗೆ ಸೇರಿರುವುದು ತೀರಾ ಆಕಸ್ಮಿಕ ಎಂದು ಭಾವಿಸಬೇಕೇ? ●

## ಕಷ್ಟಸಮಾಲೋಚನೆ



○ ಉಷಾ ನವರತ್ನರಾಮ್

## ಮೊಡವೆ ಹಾವಳಿ

ನಾನು ಇಪ್ಪತ್ತು ವರ್ಷದ ಯುವತಿ. ನನಗೆ ಆಗಾಗ ಮುಖದಲ್ಲಿ ಪಿಂಪಲ್ಸ್ ಬರುವುದರಿಂದ ಮುಖದಲ್ಲಿ ಕಲೆಗಳು ಹಾಗೆಯೇ ಉಳಿಯುತ್ತವೆ. ಇದಕ್ಕೆ ನಾನು ಕಡಲೆ ಹಿಟ್ಟಿನಿಂದ ಪ್ರತಿದಿನ ಮುಖ ತೊಳೆಯುತ್ತೇನೆ. ಆದರೂ ಈ ಕಲೆಗಳು ಹೋಗುವುದಿಲ್ಲ. ಇದಕ್ಕೆ ಸೂಕ್ತವಾದ ಸಲಹೆ ನೀಡುವಿರೆಂದು ನಂಬಿದ್ದೇನೆ. ಹಾಗೆಯೇ ಮುಖದಲ್ಲಿ ತುಂಬ ಕೂದಲು ಬೆಳೆಯುತ್ತಿವೆ.

ನಾನು ದ್ವಿತೀಯ ಬಿ.ಎ.ಯಲ್ಲಿ ಓದುತ್ತಿದ್ದೇನೆ. ಆದರೆ ಓದುವಾಗ ಕಣ್ಣಲ್ಲಿ ನೀರು ಬರುವುದು ಹಾಗೂ ಕಣ್ಣು ತುಂಬ ಉರಿಯುತ್ತದೆ. ತಲೆಗೆ ಸಾಕಷ್ಟು ಎಣ್ಣೆಯನ್ನು ಬಳಸುತ್ತೇನೆ. ತುಂಬ ನಿಶ್ಶಕ್ತಿ. ಕಾರಣ ನಾನು ಹಾಲು ಕುಡಿಯುವುದಿಲ್ಲ ಸಸ್ಯಾಹಾರಿಯಾಗಿದ್ದೇನೆ. ಇದಕ್ಕೆ ಯಾವ ವಿಟಮಿನ್ ಇರುವ ಆಹಾರ ಬಳಸಬೇಕು ಅಥವಾ ಟಾನಿಕ್ ಉಪಯೋಗಿಸಬೇಕು ಎಂದು ತಿಳಿಸುವುದರ ಮೂಲಕ ನನ್ನ ಸಮಸ್ಯೆಗಳಿಗೆ ಬಿಸಿಲ ಬದುಕು ಮಾಸ ಪತ್ರಿಕೆಯಲ್ಲಿ ಪರಿಹಾರ ಸೂಚಿಸಿ.

– **ಎಂ.ಬಿ. ಹೇಮಲತ**, ನಿಡುವಾಳೆ ಮರ್ಕಲ್

**ಸಲಹೆ**

ಹದಿಹರೆಯದಲ್ಲಿ ಮುಖದಲ್ಲಿ ಮೊಡವೆಗಳು ಬರುವುದು ಸಾಮಾನ್ಯ. ಇಪ್ಪತ್ತೈದು, ಮೂವತ್ತು ವರ್ಷವಾಗುವವರೆಗೂ ಹಲವರಿಗೆ ಬರುತ್ತವೆ. ಇದಕ್ಕೆ ಕಾರಣ ದೇಹದಲ್ಲಿ ಉತ್ಪತ್ತಿಯಾಗುವ ಹಾರ್ಮೋನ್‌ಗಳು. ಇದರ ಕಲೆಗಳು ಹಾಗೇ ಉಳಿಯಲು ಕಾರಣವೆಂದರೆ ಅವುಗಳಿಗೆ ಸರಿಯಾಗಿ ಚಿಕಿತ್ಸೆ ಮಾಡದಿರುವುದು. ಮೊಡವೆಗಳು ಬಾರದಂತೆ ತಡೆಯಲು ಮುನ್ನೆಚ್ಚರಿಕೆ ತೆಗೆದುಕೊಳ್ಳುವುದು ಮೊದಲ ಹೆಜ್ಜೆ. ಹೆಚ್ಚಾಗಿ ಎಣ್ಣೆ ಚರ್ಮ ಇರುವವರಿಗೆ ಮೊಡವೆಗಳ ಕಾಟ ಹೆಚ್ಚು. ಆದ್ದರಿಂದ ಮುಖವನ್ನು ಆದಷ್ಟು ಎಣ್ಣೆಯಾಗದಂತೆ ಶುಷ್ಕ ಹಾಗೂ ಶುಭ್ರವಾಗಿಡಬೇಕು. ಯಾವ ಅಲಂಕಾರ ಸಾಧನಗಳನ್ನು ಬಳಸಬಾರದು. ಪ್ರತಿ ದಿನ ಮುಖವನ್ನು ಕಡಲೇಹಿಟ್ಟಿನಿಂದ ತೊಳೆದು ಮುಖವನ್ನು ಒರೆಸಿಕೊಳ್ಳದೇ ಹಾಗೇ ಆರಲು ಬಿಡಬೇಕು. ಒಂದು ವೇಳೆ ಮೊಡವೆಗಳು ಬಂದರೆ ಅದನ್ನು ಉಗುರಿನಿಂದ ಚಿವುಟಬಾರದು. ಈಚೀಚಿಗೆ ಬಹಳಷ್ಟು ಮೊಡವೆ ನಿವಾರಕ ಆಯಿಂಟ್‌ಮೆಂಟ್‌ಗಳು ಬಂದಿವೆ. ಅದನ್ನು ಬಳಸಿ. ಮೊಡವೆಯ ಕಲೆಗಳು ಮಾಯವಾಗಲು ಪ್ರತಿ ದಿನ ಸೌತೇಕಾಯಿಯ ತಿರುಳನ್ನು ಎಳೆನೀರಿನಲ್ಲಿ ಕಲಿಸಿ ಮುಖಕ್ಕೆ ಹಚ್ಚಿ ಅರ್ಧ ಗಂಟೆಯ ನಂತರ ತೊಳೆದುಕೊಳ್ಳಿ, ಮುಖಕ್ಕೆ ಅರಿಷಿಣ, ಗಂಧದ ಪುಡಿಯ ಲೇಪನದಿಂದಲೂ ಕಲೆಗಳು ಮಾಯವಾಗುತ್ತವೆ.

ಕಣ್ಣಿನಲ್ಲಿ ನೀರು ಬರುವುದನ್ನು ತಲೆಗೆ ಎಣ್ಣೆ ಹಚ್ಚುವುದರಿಂದ ನಿವಾರಿಸಲಾಗದು. ಮೊದಲು ತಜ್ಞ ವೈದ್ಯರಲ್ಲಿ ಪರೀಕ್ಷಿಸಿಕೊಳ್ಳಿ, ಕಣ್ಣಿಗೆ ಸಾಕಷ್ಟು ರೆಸ್ಟ್ ಕೊಡಿ. ಸರಿಯಾದ ಬೆಳಕಲ್ಲಿ ಕುಳಿತು ಓದಿ. ಹಾಲಿನಲ್ಲಿ ಕ್ಯಾಲ್ಷಿಯಂ ಇರುವುದರಿಂದ ಅದು ಅಗತ್ಯ. ದಿನಕ್ಕೆ ಎರಡು ಲೋಟ ಹಾಲನ್ನಾದರೂ ಕುಡಿಯಿರಿ. ಸಸ್ಯಾಹಾರಿಯಾಗಿರುವುದು ಬಹಳ ಸಂತಸ – ಇದರಲ್ಲೂ ಮಾಂಸಾಹಾರಕ್ಕಿಂತ ಹೆಚ್ಚು ವಿಟಮಿನ್‌ಗಳು, ಖನಿಜ ಪದಾರ್ಥಗಳೂ, ಪಿಷ್ಟವೂ ಇರುವುದು. ಯಾವ ಟಾನಿಕ್ಕೂ ಬೇಡ. ಯಥೇಚ್ಛವಾಗಿ ಹಾಲು, ಮೊಸರು, ತುಪ್ಪ, ತರಕಾರಿ, ಹಸೀ ತರಕಾರಿಗಳನ್ನು ಬಳಸಿ. ಚೆನ್ನಾಗಿ ಗಾಳಿ ಸೇವನೆ ಮಾಡಿ, ಸಾಕಷ್ಟು ವ್ಯಾಯಾಮ ಮಾಡಿ. ಯಾವ ಅನಾರೋಗ್ಯ, ಸುಸ್ತು ಇಲ್ಲದಿದ್ದರೆ ಸಣ್ಣಗಿರುವುದು ತುಂಬಾ ಮೇಲು – ಇದು ಅನೇಕ ಕಾಯಿಲೆಗಳನ್ನು ದೂರ ಇಡುತ್ತದೆ. ಚೆನ್ನಾಗಿ ನಿದ್ರೆ ಮಾಡಿ. ವೃಥಾ ಇಲ್ಲಸಲ್ಲದಕ್ಕೆ ಯೋಚಿಸುವುದನ್ನು ಬಿಡಿ. ಆಂಗ್ಲ ಭಾಷೆಯಲ್ಲಿ ಒಂದು ಉಕ್ತಿ ಇದೆ. ಲಾಫ್ ಅಂಡ್ ಗ್ರೋ ಫ್ಯಾಟ್ – ನಕ್ಕು ದಪ್ಪವಾಗು-ಅಂದರೆ ಮನಸ್ಸು ಉಲ್ಲಾಸವಾಗಿದ್ದಷ್ಟೂ ತೂಕ ಬೇಗ ಹೆಚ್ಚುತ್ತದೆ.

## ನಿರುದ್ಯೋಗ

ಎಸ್.ಎಸ್.ಎಲ್.ಸಿ. ಪಾಸ್ ಆಗಿ ಐ.ಟಿ.ಐ. ಫೇಲ್ ಆಗಿರುವ ನಾನು ಹಳ್ಳಿಯ ಬಡ ಕುಟುಂಬಕ್ಕೆ ಸೇರಿದವನು. ಮನೆಯಲ್ಲಿ ಜೀವನ ಕಷ್ಟವಾದ್ದರಿಂದ ಅನಿವಾರ್ಯವಾಗಿ ಊರು ಬಿಡಬೇಕಾಯ್ತು. ಬೆಂಗಳೂರು, ಮೈಸೂರುಗಳಲ್ಲಿ ಕೆಲಸ ಮಾಡಿದೆ. ಈಗ ನೌಕರಿ ಇಲ್ಲದೆ ಬವಣೆ ಪಡುತ್ತಿದ್ದೇನೆ. ಹಣವೇ ಮುಖ್ಯವಾದ ಈ ಪ್ರಪಂಚದಲ್ಲಿ ಪ್ರಾಮಾಣಿಕತೆಗೆ ಬೆಲೆ ಇಲ್ಲ. ಬೆಂಗಳೂರು-ಮೈಸೂರು ನಗರಗಳಲ್ಲಿ ಕೆಲಸ ಸಿಕ್ಕರೂ ರೂಮಿಗೆ ೪-೫ ಸಾವಿರ ರೂಪಾಯಿ ಠೇವಣಿ ಕಟ್ಟಲು ನನ್ನಿಂದ ಸಾಧ್ಯವಿಲ್ಲ. ನೌಕರಿ ಕೊಡಿಸಿರೆಂದು ನಿಮ್ಮನ್ನು ಕೇಳುತ್ತಿಲ್ಲ. ನನ್ನಂತಹವನ ಸಮಸ್ಯೆಗಳಿಗೆ ಪರಿಹಾರವೇನು?

**ಹೆಸರು ಊರು ಬೇಡ**

**ಸಲಹೆ**

ನಿಮ್ಮ ಸಮಸ್ಯೆ ನಿಮ್ಮೊಬ್ಬರದೇ ಅಲ್ಲ. ಇದು ಲಕ್ಷಾಂತರ ಯುವಕರ ಸಮಸ್ಯೆ. ಓದಿದ್ದರೆ ಕೆಲಸವಿಲ್ಲ-ಕೆಲಸವಿದ್ದರೆ ಇರಲು ಮನೆಯಿಲ್ಲ, ನೆಲೆಯಿಲ್ಲ. ಸತ್ಯ ನಿಷ್ಠೆಗೆ ನಿಯತ್ತಿಗೆ ಕಾಸಿನ ಬೆಲೆಯಿಲ್ಲ. ಇದು ಕಲಿಗಾಲ! ಆದರೆ ಎಂದಿಗೂ ಎದೆಗುಂದದಿರಿ. ಎಂದಿಗೂ ಸತ್ಯಕ್ಕೇ, ಧರ್ಮಕ್ಕೇ ಜಯ. ನೀವು ಐ.ಟಿ.ಐ. ಟ್ರೈನಿಂಗ್ ಪಡೆದವರಾದ್ದರಿಂದ ನೀವು ನಿಮ್ಮದೇ ಆದ ಸ್ವಂತ ಸಣ್ಣ ಉದ್ದಿಮೆಯನ್ನೇಕೆ ಪ್ರಾರಂಭಿಸಬಾರದು? ನಿಮ್ಮ ಹುಟ್ಟೂರಿನಲ್ಲೇ ಏನಾದರೊಂದು ಪ್ರಾರಂಭಿಸಬಹುದು. ಸರ್ಕಾರದಲ್ಲಿ ಸ್ವಂತ ಉದ್ದಿಮೆಗಳಿಗೆ ಬೇಕಾದಷ್ಟು ಸೌಲಭ್ಯಗಳಿವೆ. ಬಿಸಿಲ ಬದುಕುನಲ್ಲಿಯೇ ಅನೇಕ ಸಲಹೆಗಳು ಬರುತ್ತವೆ, ಗಮನಿಸಿ.

## ಅಣ್ಣನನ್ನೇ ಪ್ರೀತಿಸಿದ್ದೆ!

ನಮ್ಮ ತಂದೆ ಇಬ್ಬರು ಹೆಂಡಂದಿರನ್ನು ಮಾಡಿಕೊಂಡು ಜಗಳವಾಡಿ ದೂರ ವಾಸಿಸುತ್ತಿದ್ದರು.

ನಾನು ಕಾಲೇಜಿನಲ್ಲಿ ಒಬ್ಬನನ್ನು ಪ್ರೀತಿಸಿದೆ. ಅವರ ತಂದೆ ನಮ್ಮ ತಂದೆಯೇ ಆಗಿದ್ದರು. ನನ್ನ ಪ್ರಿಯಕರ ನಮ್ಮ ತಂದೆಯವರ ಮೊದಲನೇ ಹೆಂಡತಿ ಮಗ. ಇದನ್ನು ತಿಳಿದು ತುಂಬಾ ದುಃಖವಾಯಿತು.

ನಾವೆಲ್ಲರೂ ಸೇರಿ ೨ ಕುಟುಂಬಗಳನ್ನು ಒಂದು ಸೇರಿಸಿ ಸಂತೋಷವಾಗಿದ್ದೇವೆ. ಆದರೆ ಗೊತ್ತಿಲ್ಲದೆ ನಡೆದ ದುರಂತದಿಂದ ನಾನು ಆ ಅಣ್ಣ ಹೊರಬರದವರಾಗಿದ್ದೇವೆ. ಅವನು ತುಂಬಾ ಮಾನಸಿಕವಾಗಿ ನರಳುತ್ತಿದ್ದಾನೆ. ನನ್ನನ್ನು ಬೇರೆಯವರು ನೋಡಲಿಕ್ಕೆ ಬಂದರೆ ರೇಗುತ್ತಾನೆ, ನಿರಾಸಕ್ತನಾಗಿದ್ದಾನೆ.

ನಮ್ಮ ಮನೆಗೆ ಅವನೊಬ್ಬನೇ ಗಂಡು ಮಗು. ಅದನ್ನು ಅರಿತ ನಮ್ಮ ಮನೆಯವರೆಲ್ಲಾ ಚಿಂತೆಗೀಡಾಗಿದ್ದಾರೆ. ಈ ವಿಷಯವನ್ನು ತಿಳಿಸಲಾಗದೇ

*ನುಂಗಲಾರದೇ ನಾನು ಮಾನಸಿಕವಾಗಿ ನರಳುತ್ತಿರುವೆ. ನಮ್ಮ ಮನೆಗೆ ಮರಳಿ ಬಂದ ಈ ಸಂತೋಷ ಶಾಶ್ವತವಾಗಿರುವಂತೆ ಪರಿಹಾರ ಸೂಚಿಸಿರಿ. ಇಲ್ಲದಿದ್ದರೆ ಇದಕ್ಕೆ ನನ್ನ ಸಾವೇ ಪರಿಹಾರ.*

*- ಸರಸ್ವತಿ, ಬೆಳಗಾಂ*

**ಸಲಹೆ**

ನೀವು ಇಂತಹ ಸಂದಿಗ್ಧಕ್ಕೆ ಸಿಲುಕಿರುವುದು ಬಹಳ ವಿಷಾದನೀಯವಾದುದು. ಪ್ರೀತಿ ಎನ್ನುವ ಭಾವನೆ ಏಕಮುಖವಾದುದಲ್ಲ. ನಿಮ್ಮ ಪ್ರಿಯಕರ ನಿಮಗೆ ಸ್ವಂತ ಅಣ್ಣನೇ ಆಗಿರುವರೆಂದು ಖಚಿತವಾದ ಮೇಲೂ ನೀವು ಅವರೊಂದಿಗೆ ಅನ್ಯಭಾವನೆ ಬೆಳಸಿಕೊಳ್ಳುವುದರಲ್ಲಿ ಏನೂ ಅರ್ಥವಿಲ್ಲ! ಅವನು ನಿಮ್ಮ ತಂದೆಯವರ ಮೊದಲ ಹೆಂಡತಿಯ ಮಗನೇ ಆದರೂ ನಿಮಗೆ ಸಂಬಂಧದ ಪ್ರಕಾರ ಅಣ್ಣನಲ್ಲದೇ ಪ್ರಿಯಕರನಾಗಲು ಸಾಧ್ಯವೇ ಇಲ್ಲ. ಈ ಕಟು ಸತ್ಯವನ್ನು ನೀವು ಹಾಗೂ ನಿಮ್ಮ ಅಣ್ಣ ಮೊದಲು ದೃಢಮಾಡಿಕೊಂಡು ಮನಸ್ಸು ಗಟ್ಟಿ ಮಾಡಿಕೊಳ್ಳಿ. ನಿಮಗೆ ಆ ವ್ಯಕ್ತಿಯ ಬಗ್ಗೆ ಅಷ್ಟು ಒಳ್ಳೆಯ ಭಾವನೆಯಿದ್ದಲ್ಲಿ ಅಂಥ ಅಣ್ಣನನ್ನು ಪಡೆದಿದ್ದಕ್ಕಾಗಿ ಸಂತೋಷಪಟ್ಟು ನಿಮ್ಮ ದೃಷ್ಟಿಕೋನವನ್ನು ಬದಲಾಯಿಸಿಕೊಳ್ಳಿ. ಈ ಪ್ರಕರಣ ಗೊತ್ತಿಲ್ಲದಂತೆ ನಡೆದ ದುರಂತವೆಂದು ನೀವೇ ಒಪ್ಪಿಕೊಂಡ ಮೇಲೆ ನಡೆದದ್ದೆಲ್ಲಾ ಮರೆತುಬಿಡುವುದೇ ಲೇಸು. ನೀವೆಲ್ಲರೂ ಒಟ್ಟಾಗಿ ಸಂತೋಷದಿಂದಿರುವ ವಾತಾವರಣವನ್ನು ಕಲುಷಿತಗೊಳಿಸುವ ಪ್ರಯತ್ನ ನೀವಿಬ್ಬರೂ ಮಾಡಬೇಡಿ!

ನೀವು ಕೆಲಸದಲ್ಲಿದ್ದೀರೋ ಅಥವಾ ಮನೆಯಲ್ಲಿ ಇರುವಿರೋ ಸರಿಯಾಗಿ ಮಾಹಿತಿ ನೀಡಿಲ್ಲ. ನೀವು ನಿಮ್ಮ ಮನಸ್ಸನ್ನು ಯಾವುದಾದರೂ ಹವ್ಯಾಸದಲ್ಲಿ ತೊಡಗಿಸಿಕೊಳ್ಳಿ, ಹೆಚ್ಚು ಹೊತ್ತು ಇತರ ಗೆಳತಿಯರೊಡನೆ, ಬಂಧು ಬಳಗದವರೊಡನೆ ಬೆರೆತು ಮಾತನಾಡಿ ವಿಶಾಲ ಮನೋಭಾವ ರೂಢಿಸಿಕೊಳ್ಳಿ, ಹಾಗೆ ನೀವು ನಾಲ್ಕಾರು ಜನರೊಡನೆ ಕಲೆತರೆ ಮುಂದೆ ನಿಮಗೆ ತಕ್ಕ ಜೀವನ ಸಂಗಾತಿ ದೊರೆಯುವ ಸಾಧ್ಯತೆಯಿದೆ.

ಈ ವಿಷಯದಲ್ಲಿ ನಿಮ್ಮ ಅಣ್ಣ ಮಾನಸಿಕವಾಗಿ ನರಳುತ್ತಿದ್ದರೆ ಅವರನ್ನು ತಜ್ಞ ವೈದ್ಯರ ಬಳಿ ಕರೆದೊಯ್ಯುವುದು ಉತ್ತಮ. ಮನುಷ್ಯ ಸಂಘಜೀವಿ. ನಿಮ್ಮ ಜೀವನದಲ್ಲಿ ನೀವಿನ್ನೂ ಹಲವು ವ್ಯಕ್ತಿಗಳನ್ನು ಭೇಟಿಯಾಗುವ ಅವಕಾಶಗಳಿವೆ. ಅವುಗಳನ್ನು ನೀವಾಗಿಯೇ ಕಲ್ಪಿಸಿಕೊಳ್ಳಿ, ಕಳೆದುಹೋದ ಘಟನೆಗಳನ್ನು ನೆನೆದು ಕೊರಗುವುದರಿಂದ ನಿಮಗೆ ಯಾವ ಪ್ರಯೋಜನವೂ ಆಗುವುದಿಲ್ಲ.

ನಮ್ಮ ಹಿಂದೂ ಕಾನೂನು ಮಲ ಅಣ್ಣ ತಂಗಿಯರಿಗಾಗಲಿ, ಸ್ವಂತ ಅಣ್ಣ-ತಂಗಿಯರಿಗಾಗಲಿ ವಿವಾಹವಾಗಲು ಸಮ್ಮತಿಸುವುದಿಲ್ಲ. ಇದು ಕಾನೂನುಬಾಹಿರ ಸಂಬಂಧವಾಗುತ್ತದೆ. ಇದನ್ನು 'INCEST' ಎನ್ನುತ್ತಾರೆ. ಇಂಥ ಸಂಬಂಧದಿಂದ ನಿಮಗಾಗಲಿ, ನಿಮ್ಮ ಅಣ್ಣನಿಗಾಗಲಿ ಯಾವ ಬಗೆಯ ಸುಖ, ಸಂತೋಷ ಸಿಗುವುದಿಲ್ಲ. ಅತಿಯಾದ ಭಾವುಕತೆ ಬಿಟ್ಟು ವಾಸ್ತವವನ್ನು ಧೈರ್ಯವಾಗಿ ಎದುರಿಸಿ. ಆದಷ್ಟು ಶೀಘ್ರದಲ್ಲೇ ನಿಮಗೆ ಅನುರೂಪವಾದ ವ್ಯಕ್ತಿಯನ್ನು ಆರಿಸಿ ಮದುವೆಯಾಗಿಬಿಡಿ. ನಿಮ್ಮ ಅಣ್ಣನ ಕೋಪ, ರೇಗುವಿಕೆಯನ್ನು ಲೆಕ್ಕಿಸಬೇಡಿ. ನೀವು ವಿವಾಹಿತರಾದ ಮೇಲೆ ಕ್ರಮೇಣ ನಿಮ್ಮ ಅಣ್ಣ ಪರಿಸ್ಥಿತಿಗೆ ಹೊಂದಿಕೊಳ್ಳುತ್ತಾರೆ. ಅವರಿಗೂ ತಕ್ಕ ಸಂಗಾತಿ ದೊರಕಿದರೆ ಮುಂದೆ ನಿಮ್ಮಿಬ್ಬರ ನಡುವೆ ಯಾವ ಸಮಸ್ಯೆಯೂ ಇರುವುದಿಲ್ಲ.

## ಆತ್ಮಹತ್ಯೆ ಮಾಡಿಕೊಳ್ಳಬೇಕೆಂದಿರುವೆ

*ನಾನು ಇಪ್ಪತ್ಮೂರು ವರ್ಷದ ಯುವಕ, ಚಿಕ್ಕಂದಿನಿಂದಲೂ ಸಾಹಿತ್ಯ ಹಾಗೂ ಕಥೆ ಬರೆಯುವ ಹುಚ್ಚು. ನಾನು ಮೂರು ಸಿನಿಮಾ ಕಥೆಗಳನ್ನು ಬರೆದಿರುವೆ ಮತ್ತು ಬೆಂಗಳೂರಿಗೆ ಹೋಗಿ ನಿರ್ದೇಶಕರಿಗೆ ಭೇಟಿಯಾಗಿ ಕಥೆ ಕೊಡಲು ಹೋದೆ, ಆದರೆ ಯಾರೂ ಸಹಾಯ ಮಾಡದೇ ಹೊರಗೆ ತಳ್ಳಿಬಿಟ್ಟರು. ಒಳಗಿನ ವಿಷಯನರಿಯದೇ, ನನ್ನನ್ನು ಅಪಹಾಸ್ಯ ಮಾಡಿದರು. ಇಷ್ಟೇ ಅಲ್ಲ, ನಮ್ಮ ಊರಲ್ಲಿನ ಜನರೂ ಕೂಡ ಅಪಹಾಸ್ಯ ಮಾಡುತ್ತಿದ್ದಾರೆ. ನನಗೆ ಅವಮಾನವಾಗಿ ಪ್ರಾಣಹತ್ಯೆ ಮಾಡಿಕೊಳ್ಳಬೇಕೆಂದಿರುವೆ. ಇದಕ್ಕೆ ತಮ್ಮ ಸಲಹೆ ಏನು ತಾಯಿಯವರೆ?*

**- ನೊಂದ ಕಲಾವಿದ**

**ಸಲಹೆ**

ಈಸಬೇಕು, ಇದ್ದು ಜಯಿಸಬೇಕು ಎಂಬ ನಾಣ್ಣುಡಿಯಿದೆ. ಅನೇಕ ದಿಗ್ಗಜ ಸಾಹಿತಿಗಳಿಗೆ ಮೊದ ಮೊದಲು ಎಷ್ಟೋ ನಿರಾಸೆಗಳಾಗಿರುತ್ತವೆ. ನಿಮ್ಮ ಕಥೆ, ಚಿತ್ರಕಥೆ, ನಿಮಗೆ ಸರಿ ಹೋಗಬಹುದು. ಆದರೆ ಲಕ್ಷಾಂತರ ರೂಪಾಯಿ ಸುರಿದು ಚಿತ್ರ ತಯಾರಿಸುವ ನಿರ್ಮಾಪಕರಿಗೆ, ನಿರ್ದೇಶಕರಿಗೆ ಹಿಡಿಸಬೇಕಲ್ಲ! ನಾನು ಬರೆದ ಕಥೆ ಉತ್ತಮವಾದುದು, ನಾನು ಉತ್ತಮ ಸಾಹಿತಿ ಎಂದು ನಿಮ್ಮನ್ನು ನೀವೇ ತೋರಿಸಿಕೊಂಡಲ್ಲಿ ಅಪಹಾಸ್ಯವಾಗುವುದರಲ್ಲಿ ಸಂಶಯವಿಲ್ಲ. ನಿಮ್ಮ ಕೃತಿಯನ್ನು ಓದುಗರು ಪ್ರಶಂಸಿಸಬೇಕು. ಮೆಚ್ಚಬೇಕು. ಆತ್ಮಹತ್ಯೆಗೆ ತೊಡಗುವ ಮುನ್ನ ನಿಮ್ಮ ಕನ್ನಡದ ಪದ ಬಳಕೆಯನ್ನು ಉತ್ತಮಗೊಳಿಸಿ ಕೊಳ್ಳಿ. (ಉದಾ : ಪ್ರಾಣಹತ್ಯೆ ಮಾಡಿಕೊಳ್ಳಬೇಕೆಂದಿರುವೆ, ಕಲಾವಿದ). ಆತ್ಮಹತ್ಯೆ ಮಾಡಿಕೊಳ್ಳುವುದು ಹೇಡಿತನ. ನಿಮ್ಮ ಬರವಣಿಗೆ, ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಲು ಯತ್ನಿಸಿ.

## ಪ್ರೀತಿಗೆ ತೊದಲು ಮಾತು ಅಡ್ಡಿ

*ನಾನು ಒಂದು ಹುಡುಗಿಯನ್ನು ಪ್ರೀತಿಸುತ್ತಿದ್ದೇನೆ. ಅವಳೂ ನನ್ನನ್ನು ಪ್ರೀತಿಸುತ್ತಾಳೆ ಆದರೆ ನನಗೆ ಮಾತನಾಡುವುದಕ್ಕೆ ಸ್ವಲ್ಪ ತೊದಲು. ಇದಕ್ಕೆ ಅವರ ಮನೆಯವರು ಒಪ್ಪುವುದಿಲ್ಲ. ಹುಡುಗಿ ಹೆದರುತ್ತಾಳೆ. ನಾನು ಏನು ಮಾಡಬೇಕು ಬೇಗ ತಿಳಿಸಿ.*

**ಸಲಹೆ**

ಧೈರ್ಯವಿಲ್ಲದವರು ಪ್ರೀತಿಸಬಾರದು. ನಿಮ್ಮ ಮಾತು ತೊದಲಾದರೇನು, ಅವರ ಮನೆಯವರು ಒಪ್ಪದಿದ್ದರೇನು? ನಿಮ್ಮ ಪ್ರೀತಿಗೆ ಅವುಗಳು ಅಡ್ಡಿಯಾಗುವುದಿಲ್ಲ. ನೀವು ನಿಮ್ಮ ಸ್ವಂತ ವ್ಯಕ್ತಿತ್ವ ಮತ್ತು ಸ್ವಾಭಿಮಾನ ಬೆಳೆಸಿಕೊಳ್ಳಿ, ತೊದಲು ಮಾತಿಗೆ ಈಗ ಅನೇಕ ತಜ್ಞ ಸಂಸ್ಥೆಗಳಿವೆ. ಅವುಗಳನ್ನು ಸಂಪರ್ಕಿಸಿ ತೊದಲನ್ನು ಸರಿಪಡಿಸಿಕೊಳ್ಳಿ.

### ಉಷಾ ನವರತ್ನರಾಮ್ ಅವರೊಡನೆ

# ಆಪ್ತ ಸಮಾಲೋಚನೆ

ನಿಮ್ಮ ಯಾವುದೇ ವೈಯಕ್ತಿಕ ಸಮಸ್ಯೆ, ಸಾಮಾಜಿಕ-ಕೌಟುಂಬಿಕಬಿಕ್ಕಟ್ಟು ಕುರಿತು ಚುಟುಕಾಗಿ, ನಿರ್ದಿಷ್ಟವಾಗಿ ಬರೆದು ಕಳಿಸಿ. ಇದು ಕೇವಲ ಹೆಂಗಸರಿಗೇ ಮೀಸಲಾದ ಅಂಕಣವಲ್ಲ. ಈ ವಿಭಾಗಕ್ಕೆ ಗಂಡಸರೂ ತಮ್ಮ ಸಮಸ್ಯೆಗಳನ್ನು ಬರೆದು ಕಳಿಸಬಹುದು. ಅನುಭವೀ ಬರಹಗಾರ್ತಿ ಉಷಾ ನವರತ್ನರಾಮ್ ಅವರು ನಿಮ್ಮ ಪ್ರಶ್ನೆಗಳಿಗೆ, ಸಮಸ್ಯೆಗಳಿಗೆ ಪರಿಹಾರ ಸೂಚಿಸುತ್ತಾರೆ. ಪತ್ರದಲ್ಲಿ ನಿಮ್ಮ ಹೆಸರು, ವಿಳಾಸ ನಮೂದಿಸುವ ಅಗತ್ಯವಿಲ್ಲ.

*ವಿಳಾಸ:*

**ಬಿಸಿಲ ಬದುಕು ಮಾಸ ಪತ್ರಿಕೆ**
**ಆಪ್ತ ಸಮಾಲೋಚನೆ ವಿಭಾಗ,** ಅಂಚೆ ಪೆಟ್ಟಿಗೆ ೭೯೫೧
ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯



# ಹೆಣ್ಣಿನ ಆರೋಗ್ಯ ಮತ್ತು ಸೌಂದರ್ಯ

○ ಡಾ. ಆರತಿ ವೆಂಕಟೇಶ್

ಅನಾದಿ ಕಾಲದಿಂದಲೂ ಹೆಣ್ಣು ಮತ್ತು ಸೌಂದರ್ಯ ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ಹೆಣ್ಣಿನ ಸೌಂದರ್ಯದಿಂದ ಮಹಾಯುದ್ಧಗಳೇ ಜರುಗಿವೆಯೆಂದು ಪುರಾಣಗಳಲ್ಲೂ ಕೇಳಿದ್ದೇವೆ. ಜನಪ್ರಿಯ ಕವಿಗಳಿಗೂ, ಸಾಹಿತಿಗಳಿಗೂ ಹೆಚ್ಚಿನ ಚೆಲುವೇ ಸ್ಫೂರ್ತಿ! ಸೌಂದರ್ಯ ಎಂಬುದು ಹೆಣ್ಣಿನ ಅತ್ಯಂತ ಹೆಮ್ಮೆಯ ಆಯುಧ! ಆದರೆ ಅದನ್ನು ಜೀವನಪರ್ಯಂತ ಕಾಪಾಡಿಕೊಂಡು ಬರುವುದೂ ಒಂದು ಕಲೆ.

ಸೌಂದರ್ಯ ಎಂದರೇನು? ಕೇವಲ ಮುಖಕ್ಕೆ ಬಣ್ಣ ತೀಡುವುದು ಸೌಂದರ್ಯವಲ್ಲ. ಬೆಲೆ ಬಾಳುವ ಬಟ್ಟೆಗಳು ದೇಹವನ್ನು ಅಲಂಕರಿಸಿದ ಮಾತ್ರಕ್ಕೆ ಅದು ನೈಜ ಚೆಲುವಲ್ಲ. ಮಾರುಕಟ್ಟೆಗಳಲ್ಲಿ ಲಭ್ಯವಾಗಿರುವ ಸೌಂದರ್ಯ ಸಾಧನಗಳನ್ನು ಖರೀದಿಸಿ ದೇವರು ಕೊಟ್ಟ ಸಹಜ ರೂಪಕ್ಕೆ ಕೃತಕತೆಯ ಹೊದಿಕೆ ಹೊದೆಸುವುದೂ ನಿಜವಾದ ಸೌಂದರ್ಯವತಿಯ ಕೌಶಲ್ಯವಲ್ಲ. ಸೌಂದರ್ಯವೆಂಬುದು ನಿಮ್ಮ ವ್ಯಕ್ತಿತ್ವದೊಡನೆ ಹಾಸುಹೊಕ್ಕಾಗಿರಬೇಕು.

೧. ಬೇರೆಯವರ ವ್ಯಕ್ತಿತ್ವವನ್ನು ಪರಾಮರ್ಶಿಸುವುದು ನಿಮ್ಮ ಮುಖ್ಯ ಗುಣದಲ್ಲಿ ಒಂದಾಗಿರಬೇಕು. ಮನುಷ್ಯ ಎಂದ ಮೇಲೆ ಎಲ್ಲರೂ ತಪ್ಪು ಮಾಡುವವರೇ. ಹಾಗೇ ಸ್ವಭಾವದಲ್ಲಿ ಒಳ್ಳೆಯ ಅಂಶ, ಕೆಟ್ಟ ಅಂಶ ಇರುವುದೂ ಸಹಜ. ಅವರವರ ಕೆಟ್ಟ ಗುಣಗಳನ್ನು ಒಳ್ಳೆಯ ಗುಣಗಳೊಡನೆ ಸಮತೋಲನ ಮಾಡಿ ನೋಡಿದರೆ ಈ ಪ್ರಪಂಚದಲ್ಲಿ ಖಂಡಿತ 'ಕೆಟ್ಟವರು' ಎನ್ನುವವರು ಯಾರೂ ಇರುವುದಿಲ್ಲ! ಸನ್ನಿವೇಶಕ್ಕೆ ತಕ್ಕಂತೆ ಮನುಷ್ಯರು ಪ್ರತಿಕ್ರಿಯೆ ತೋರಿಸುತ್ತಾರೆ, ಅಷ್ಟೆ.

**ಈ ಎಂಟು ಅಣಿ ಮುತ್ತುಗಳನ್ನು ನಿಮ್ಮ ವ್ಯಕ್ತಿತ್ವದೊಡನೆ ಪೋಣಿಸಿ ಹಾರವಾಗಿ ಧರಿಸಿದರೆ ನಿಮ್ಮ ಸೌಂದರ್ಯಕ್ಕೆ ವಿಶೇಷ ಸೊಬಗು ಬರುವುದರಲ್ಲಿ ಸಂದೇಹವೇ ಇಲ್ಲ!**

೨. ಬದುಕಿನಲ್ಲಿ ಆತ್ಮವಿಶ್ವಾಸ ಹೊಂದಿರುವುದು ವ್ಯಕ್ತಿತ್ವಕ್ಕೆ ಶೋಭೆ ತರುತ್ತದೆ. ಅದು ಕೇವಲ ನಿಮ್ಮ ಬಾಹ್ಯ ಸೌಂದರ್ಯದಲ್ಲಿ ಸೀಮಿತವಾಗಿರಬಾರದು. ನಿಮ್ಮ ಓದಿನಲ್ಲಿ, ಕೆಲಸದಲ್ಲಿಯೂ ಆತ್ಮವಿಶ್ವಾಸ ಬೆರೆತಿರಬೇಕು. ಎಂಥ ಕಠಿಣ ಪರಿಸ್ಥಿತಿಯಲ್ಲೂ ಕುಗ್ಗದೇ ಅದನ್ನು ಧೈರ್ಯವಾಗಿ ಎದುರಿಸುವ ಚೈತನ್ಯವಿರಬೇಕು.

೩. ದೇಹ ಮತ್ತು ಮನಸ್ಸನ್ನು ಯಾವಾಗಲೂ ಸ್ವಚ್ಛವಾಗಿಟ್ಟುಕೊಳ್ಳಬೇಕು. ಭವ್ಯವಾಗಿ ಅಲಂಕರಿಸಿಕೊಂಡು ನಿಮ್ಮ ಶರೀರದಿಂದ ದುರ್ವಾಸನೆ ಹೊಮ್ಮಿದರೆ ಅದಕ್ಕಿಂತ ಸೌಂದರ್ಯಹೀನವಾದುದು ಯಾವುದಿದೆ? ದೇಹದ ಪ್ರತಿಯೊಂದು ಸಣ್ಣ ತಪ್ಪನ್ನು ಪರಿಶೀಲಿಸಿ ಅದನ್ನು ಸರಿಪಡಿಸಿಕೊಳ್ಳಬೇಕು. ಹಾಗೇ ನಿಮ್ಮ ಮನಸ್ಸಿನ ಭಾವನೆಗಳನ್ನು ಆದಷ್ಟು ಹತೋಟಿಯಲ್ಲಿಟ್ಟುಕೊಂಡರೆ ನಿಮ್ಮ ವ್ಯಕ್ತಿತ್ವಕ್ಕೆ ಮೆರುಗು ನೀಡುತ್ತದೆ. ಇದನ್ನು ಪಾಲಿಸಲು ಮೊದಮೊದಲು ಕಠಿಣವೆನಿಸುವುದು ನಿಜ. ಆದರೆ ಅಭ್ಯಾಸವಾದಂತೆ

ಅದು ನಿಮ್ಮ ದಿನಚರಿಯಲ್ಲಿ ಸೇರಿಹೋಗುತ್ತದೆ.

೪. ಜೀವನದ ಪ್ರತಿ ಹಂತದಲ್ಲೂ ಮನಸ್ಸನ್ನು ಉಲ್ಲಾಸ, ಸಂತೋಷದಿಂದ ಇಟ್ಟುಕೊಳ್ಳುವುದು ಅನೇಕ ಮಹಿಳೆಯರ ಆರೋಗ್ಯ ಹಾಗೂ ಸೌಂದರ್ಯದ ಗುಟ್ಟು. ಬದುಕಿನಲ್ಲಿ ಸುಖ, ದುಃಖ ಎಲ್ಲರಿಗೂ ಇರುತ್ತದೆ. ಆದರೆ ಸುಖಜೀವನದ ಮೌಲ್ಯ ಅರಿತವರು ದುಃಖಕ್ಕೆ ಶರಣಾಗುವುದಿಲ್ಲ. ಕಷ್ಟ, ತೊಂದರೆಗಳನ್ನು ಬದುಕಿನಲ್ಲಿ ಒಂದಾಗಿ ಸ್ವೀಕರಿಸುತ್ತಾ ಪ್ರಸನ್ನ ಚಿತ್ತರಾಗಿ ಬಾಳುವುದು ಆರೋಗ್ಯಕ್ಕೂ, ಸೌಂದರ್ಯಕ್ಕೂ ಒಳ್ಳೆಯದು.

೫. ನಿಮ್ಮ ಸೌಂದರ್ಯ ಮತ್ತು ಆರೋಗ್ಯಕ್ಕೆ ನೇರ ನಡಿಗೆಯೂ ತುಂಬ ಮುಖ್ಯ. ಬೆನ್ನು ಗೂನು ಮಾಡಿ ನಡೆಯುವುದರಿಂದ ದೇಹದ ಶ್ವಾಸಕೋಶಗಳು ಕಡಿಮೆ ಪ್ರಮಾಣದ ಆಮ್ಲಜನಕ ಪಡೆಯುತ್ತದೆ. ಇದರಂದ ಜೀರ್ಣಶಕ್ತಿಯೂ ಕುಂದುತ್ತದೆ. ನೇರ ನಡಿಗೆಯಿಂದ ಮುಖಕಾಂತಿ ವೃದ್ಧಿಯಾಗುತ್ತದೆ. ಆತ್ಮವಿಶ್ವಾಸವೂ ಹೆಚ್ಚಾಗುತ್ತದೆ.

೬. ಸೌಂದರ್ಯ ಮತ್ತು ಬುದ್ಧಿವಂತಿಕೆ ಎರಡೂ ಕಲೆತಿರುವುದಿಲ್ಲ ಎಂಬ ಮಾತಿದೆ. ಅದನ್ನು ನೀವೇಕೆ ಸವಾಲಾಗಿ ಸ್ವೀಕರಿಸ ಬಾರದು? ಪ್ರತಿದಿನ ಸುದ್ದಿ ಪತ್ರಿಕೆಗಳನ್ನು ಓದಿ, ವಾರ್ತೆಗಳನ್ನು ಕೇಳಿದರೆ ನಮ್ಮ ದೇಶದಲ್ಲಿ, ಜನ ಸಾಮಾನ್ಯರಲ್ಲಿ ನಡೆಯುವ ಘಟನೆಗಳ ಬಗ್ಗೆ ಮಾಹಿತಿ ಸಂಗ್ರಹಿಸಬಹುದು. ಸೌಂದರ್ಯ ದೊಡನೆ ಸಾಮಾನ್ಯ ಜ್ಞಾನವನ್ನೂ ಬೆಳೆಸಿ ಕೊಂಡರೆ ನಿಮ್ಮ ವ್ಯಕ್ತಿತ್ವಕ್ಕೆ ಮೆರುಗು ನೀಡಿದಂತಾಗುವುದಿಲ್ಲವೇ?

೭. ಹೆಂಗಸರಿಗೆ ದೇಹ ಹಾಗೂ ಮನಸ್ಸಿನ ವಿಶ್ರಾಂತಿ ಅತ್ಯಗತ್ಯ. ಸ್ವಾಭಾವಿಕವಾಗಿ ಹೆಂಗಸರು ಗಂಡಸರಿಗಿಂತ ಹೆಚ್ಚಾಗಿ ಚಿಂತೆ ಹಚ್ಚಿಕೊಂಡು ಕೊರಗುವುದು ಜಾಸ್ತಿ. ಇದರಿಂದ ಮುಖಕಾಂತಿ ಹಾಳಾಗುವುದಲ್ಲದೇ ವಯಸ್ಸಿಗೆ ಮುಂಚೆಯೇ ಸುಕ್ಕುಗಳು ತಲೆದೋರುತ್ತವೆ. ಪರೋಕ್ಷವಾಗಿ ದೇಹದ ಆರೋಗ್ಯದ ಮೇಲೂ ಪರಿಣಾಮ ಬೀರುವ ಸಾಧ್ಯತೆಯಿದೆ. ರಾತ್ರಿ ೭-೮ ಗಂಟೆಗಳ ಕಾಲ ಸುಖ ನಿದ್ರೆ ಮಾಡುವುದರಿಂದ ದೇಹದ ನರಗಳೆಲ್ಲಾ ಸಡಿಲವಾಗಿ ಹೃದಯದ ಮೇಲಿನ ಒತ್ತಡವೂ ಕಡಿಮೆಯಾಗುತ್ತದೆ. ಆರಾಮವಾಗಿ ಉಸಿರನ್ನು ಹೊರಗೆ ಬಿಡುತ್ತಾ, ಮೈ ಸಡಿಲ ಬಿಟ್ಟು ಮಲಗುವುದರಿಂದ ಕೋಪ ಸೆಡವು, ನರಗಳ ದೌರ್ಬಲ್ಯ, ಮನೋವ್ಯಥೆ (depression) ಮುಂತಾದ ಸಮಸ್ಯೆಗಳು ನಿಮ್ಮನ್ನು ಕಾಡುವುದಿಲ್ಲ.

೮. ಬಾಯಿ ಬಿಟ್ಟರೆ ಬಣ್ಣಗೇಡು ಎಂಬ ವ್ಯಂಗ್ಯ ನುಡಿಯನ್ನು ನೀವು ಕೇಳಿರಬಹು ದಲ್ಲವೇ? ನೀವು ಮಾತ್ರ ಆ ಗುಂಪಿನಲ್ಲಿ ಸೇರ ದಂತೆ ಎಚ್ಚರಿಕೆ ವಹಿಸಿ! ಕೆಲವರು ನೋಡಲು ಅಂದವಾಗಿ ಕಂಡರೂ ಅವರು ಮಾತನಾಡಲು ಪ್ರಾರಂಭಿಸಿದರೆ ಕಿವಿಮುಚ್ಚಿಕೊಳ್ಳುವಷ್ಟು ಬೇಸರವಾಗುತ್ತದೆ. ಮಾತನಾಡುವಾಗ ನಿಮ್ಮ ದನಿಯನ್ನು ಅನಗತ್ಯವಾಗಿ ಏರಿಸಬೇಡಿ. ಅರ್ಥ ವಿಲ್ಲದ ಕಾಡು ಹರಟೆ ಹೊಡೆಯದೇ ಸಂದ ರ್ಭಕ್ಕೆ ತಕ್ಕಂತೆ ಮೆಲುದನಿಯಲ್ಲಿ ಮಾತಾಡಿ ಹೆಚ್ಚು ಸ್ನೇಹಿತರನ್ನು ಸಂಪಾದಿಸಿ.

ಈ ಎಂಟು ಅಣಿ ಮುತ್ತುಗಳನ್ನು ನಿಮ್ಮ ವ್ಯಕ್ತಿತ್ವದೊಡನೆ ಪೋಣಿಸಿ ಹಾರವಾಗಿ ಧರಿಸಿದರೆ ನಿಮ್ಮ ಸೌಂದರ್ಯಕ್ಕೆ ವಿಶೇಷ ಸೊಬಗು ಬರುವುದರಲ್ಲಿ ಸಂದೇಹವೇ ಇಲ್ಲ!

ಆರೋಗ್ಯವಿಲ್ಲದ ಸೌಂದರ್ಯ ಎಂದಿಗೂ ಶೋಭಿಸದು. ಅನಿರ್ದಿಷ್ಟ ಆಹಾರ ಸೇವನೆಯಿಂದಾಗಿ ಕಾಂತಿಹೀನ ಚರ್ಮ, ನಿಸ್ತೇಜ ಕಣ್ಣುಗಳು, ಕೂದಲುದುರುವಿಕೆ ಮುಂತಾದ ತೊಂದರೆಗಳು ತಲೆದೋರುತ್ತದೆ.

ಆರೋಗ್ಯ ಮತ್ತು ಸೌಂದರ್ಯವನ್ನು ಕಾಪಾಡಿಕೊಳ್ಳಬೇಕಾದರೆ ನಿಮ್ಮ ದಿನನಿತ್ಯ ಆಹಾರದಲ್ಲಿ ಅನ್ನಾಂಗಗಳು ತಕ್ಕ ಪ್ರಮಾಣದಲ್ಲಿ ಬೆರೆತಿರಬೇಕು.

## ಅನ್ನಾಂಗ ಎ

ಇದು ಕಣ್ಣುಗಳನ್ನು, ಚರ್ಮವನ್ನು ಕಾಂತಿಯುತವಾಗಿಡಲು ಬಹಳ ಸಹಕಾರಿ ಯಾಗುತ್ತದೆ. ಇದರ ನಿಯಮಿತ ಸೇವನೆಯಿಂದ ರಾತ್ರಿ ಕುರುಡನ್ನು ನಿವಾರಿಸಬಹುದು. ಕ್ಯಾರೆಟ್, ಬೀಟ್‌ರೂಟ್ ಹಾಗೂ ಎಲ್ಲ ಬಗೆಯ ಹಸಿರು ತರಕಾರಿಗಳಲ್ಲಿ ಈ ಅನ್ನಾಂಗವು ಯಥೇಚ್ಛವಾಗಿ ದೊರೆಯುತ್ತದೆ. ಪ್ರತಿದಿನ ಬೆಳಿಗ್ಗೆ ಒಂದು ಲೋಟ ಕ್ಯಾರೆಟ್ ರಸ ಸೇವಿಸಿದರೆ ಕಣ್ಣಿನ ಕಾಂತಿ ವೃದ್ಧಿಸುತ್ತದೆ. ವಾರಕ್ಕೆರಡು ಬಾರಿ ಬೀಟ್ ರೂಟ್ ತಿನ್ನುವುದರಿಂದ ಮಲಬದ್ಧತೆ ತಡೆಯ ಬಹುದು. "An apple a day keeps the doctor away" ಎನ್ನುವ ಮಾತು ಉತ್ಪ್ರೇಕ್ಷೆ ಯಲ್ಲ. ಸೇಬು, ಬಾಳೆಹಣ್ಣು, ಪಪ್ಪಾಯಿ ಯಲ್ಲೂ ಈ ಅನ್ನಾಂಗ ದೊರೆಯುತ್ತದೆ.

## ಅನ್ನಾಂಗ ಬಿ

ಇದು ಸೌಂದರ್ಯ ಪೋಷಣೆಗೆ ಬಹಳ ಅಗತ್ಯ. ಇದರ ನಿತ್ಯ ಸೇವನೆಯಿಂದ ಬಾಲನೆರೆ ಹಾಗೂ ಚರ್ಮದ ಸುಕ್ಕುಗಳನ್ನು ತಡೆಗಟ್ಟ ಬಹುದಾಗಿದೆ. ಆರೋಗ್ಯ ದೃಷ್ಟಿಯಿಂದಲೂ ಈ ಅನ್ನಾಂಗ ಬಹಳ ಸಹಾಯಕವಾಗಿದೆ. ಇದು ಕಣ್ಣಿನ ಪೊರೆ (Cataract), ಕಿವುಡು, ಬಾಯಿಹುಣ್ಣು, ಅಜೀರ್ಣ ಮುಂತಾದ ಕಾಯಿಲೆಗಳನ್ನು ದೂರವಿಡುತ್ತದೆ. ದಿನನಿತ್ಯ ಬಳಕೆಯಾಗುವ ಮೊಸರು, ದೋಸೆ, ಇಡ್ಲಿಯಂಥ ಹುದುಗು ಹಾಕುವ (fermented) ಯಾವುದೇ ಪದಾರ್ಥಗಳಲ್ಲಿ ಈ ಅನ್ನಾಂಗ ಲಭ್ಯವಾಗಿದೆ.

## ಅನ್ನಾಂಗ ಸಿ

ಈ ಅನ್ನಾಂಗವು ನಿಂಬೆಹಣ್ಣು, ಟೊಮಾಟೋ, ಸೀಬೆಹಣ್ಣು, ಕಿತ್ತಲೆಹಣ್ಣು ಹಾಗೂ ನೆಲ್ಲೀಕಾಯಿ (amla)ಗಳಲ್ಲಿ ಸಮೃದ್ಧವಾಗಿ ದೊರೆಯುತ್ತದೆ. ಇದರ ಸೇವನೆಯಿಂದ ಆರೋಗ್ಯಪೂರ್ಣ ಹಲ್ಲುಗಳು, ವಸಡು, ಕಣ್ಣುಗಳು ಹಾಗೂ ಕೂದಲನ್ನು ಪಡೆಯಬಹುದು. ದೇಹದಲ್ಲಿ ಗಾಯವಾದರೆ ಬೇಗ ಮಾಯುತ್ತದೆ.

## ಅನ್ನಾಂಗ ಡಿ

ಆ ಅನ್ನಾಂಗದ ಮಹತ್ವವನ್ನು ತಿಳಿದವರು ಬಹಳ ಕಡಿಮೆ. ಈ ಅನ್ನಾಂಗದ ಕೊರತೆಯಿಂದ ಬಳಲುವವರು ಎಳೆಬಿಸಿಲಿಗೆ ಮೈ ಒಡ್ಡಿ ಅರ್ಧ ಗಂಟೆಯಾದರೂ ಕುಳಿತುಕೊಳ್ಳುವುದು ಒಳ್ಳೆಯದು. ಎಳೆ ಬಿಸಿಲಿನ ಕಿರಣಗಳಲ್ಲಿ ಅನ್ನಾಂಗ ಡಿ ಹೇರಳವಾಗಿ ದೊರೆಯುತ್ತದೆ. ಇದರ ಕೊರತೆಯಿರುವ ಮಕ್ಕಳು "Rickets" ಎನ್ನುವ ರೋಗದಿಂದ ಬಳಲುತ್ತಾರೆ. ಇದರಿಂದ ಮೂಳೆ, ಕೀಲುಗಳ ಬೆಳವಣಿಗೆ ಕುಂಠಿತ ವಾಗುತ್ತದೆ. ಇದನ್ನು ನಿವಾರಿಸಲು ಆಹಾರ ಸೇವನೆಯಲ್ಲಿ ಮೀನು, ಕಾಡ್‌ಲಿವರ್ ಎಣ್ಣೆ, ಮೊಟ್ಟೆಗಳು ಸೇರಿರಲಿ. ನೀವು ಸಸ್ಯಾಹಾರಿ ಯಾದರೆ ಯಥೇಚ್ಛವಾಗಿ ಹಾಲು, ಹಣ್ಣುಗಳನ್ನು ಸೇವಿಸಬಹುದು.

**ಕಬ್ಬಿಣಾಂಶ**

ನಮ್ಮ ದೇಶದ ಮಹಿಳೆಯರಲ್ಲಿ ಕಬ್ಬಿಣಾಂಶದ ಕೊರತೆಯಿಂದ ನರಳುವವರು ಹೆಚ್ಚು. ಋತುಮತಿಯಾದಾಗ, ಹೆರಿಗೆಯಾದಾಗ, ಗರ್ಭಪಾತವಾದಾಗ ಹೆಣ್ಣು ಸತತವಾಗಿ ರಕ್ತಹೀನತೆಯಿಂದ ಬಳಲುತ್ತಲೇ ಇರುತ್ತಾಳೆ. ಕಬ್ಬಿಣದ ಕೊರತೆಯಿಂದ ಉಂಟಾಗುವ ರಕ್ತ ಹೀನತೆಯನ್ನು "Iron deficiency anaemia" ಎನ್ನುತ್ತಾರೆ. ಕಬ್ಬಿಣಾಂಶ ಸೇವಿಸುವುದರಿಂದ ರಕ್ತಹೀನತೆ, ಬಲಹೀನತೆ ಕಡಿಮೆಯಾಗುತ್ತದೆ. ಹಸಿರು ತರಕಾರಿಗಳು, ಸೇಬು, ಬೆಲ್ಲ ಮುಂತಾದ ಪದಾರ್ಥಗಳಲ್ಲಿ ಕಬ್ಬಿಣಾಂಶ ಹೆಚ್ಚಾಗಿರುತ್ತದೆ. ಜೊತೆಗೆ ವೈದ್ಯರನ್ನು ಸಂಪರ್ಕಿಸಿ ಕಬ್ಬಿಣಾಂಶದ ಮಾತ್ರೆಗಳನ್ನು ಸೇವಿಸುವುದು ಸೂಕ್ತ.

**ಅಯೋಡಿನ್**

ಇದರ ನಿಯಮಿತ ಸೇವನೆಯಿಂದ ಥೈರಾಯ್ಡ್ ಗ್ರಂಥಿಗಳು ಸರಿಯಾಗಿ ಕೆಲಸ ಮಾಡಿ ದೇಹದ ಮಾಟವನ್ನು ಕಾಪಾಡುತ್ತವೆ. ಮಾಂಸಾಹಾರಿಗಳು ಈ ಅಯೋಡಿನ್ ಅಂಶವನ್ನು ಮೀನು, ಏಡಿಗಳಲ್ಲಿ ಕಾಣಬಹುದು. ಸಸ್ಯಾಹಾರಿಗಳು ಹಸಿರು ತರಕಾರಿಗಳನ್ನು ಹೆಚ್ಚಾಗಿ ತಿನ್ನುವುದರಿಂದ ಅಯೋಡಿನ್ ಅಂಶ ಕೊಂಚ ಮಟ್ಟಿಗೆ ಸಿಗುತ್ತದೆ. ಇತ್ತೀಚೆಗೆ ಮಾರುಕಟ್ಟೆಗಳಲ್ಲಿ ಉಪ್ಪಿನೊಂದಿಗೆ ಅಯೋಡಿನ್ ಬೆರೆಸಿರುವುದು ದೊರೆಯುತ್ತದೆ. ಅವಶ್ಯಕತೆಯಿರುವವರು ಇದನ್ನು ಬಳಸಬಹುದು.

ಕೊನೆಯಲ್ಲಿ ನಿಮಗೊಂದು ಎಚ್ಚರಿಕೆ! ಅನ್ನಾಂಗಗಳನ್ನು ನೀವು ಮಾತ್ರೆಯ ರೂಪದಲ್ಲಿ ಸೇವಿಸುವಿರಾದರೆ ಅನ್ನಾಂಗ 'ಎ' ಮತ್ತು 'ಡಿ'ಯನ್ನು ವೈದ್ಯರ ಸಲಹೆಯಿಲ್ಲದೇ ಸೇವಿಸಬಾರದು. ಇವುಗಳು ದೇಹದ ಕೊಬ್ಬಿನಲ್ಲೇ ಶೇಖರವಾಗಿದ್ದು ಹೆಚ್ಚಿಗೆ ಸೇವನೆಯಿಂದ ಆರೋಗ್ಯಕ್ಕೆ ಹಾನಿಯುಂಟು ಮಾಡಬಹುದು. ದೇಹದ ಯಾವುದೇ ಪದಾರ್ಥದ ಕೊರತೆಗೆ ಸಮತೋಲನ ಆಹಾರವಲ್ಲದೇ ವೈದ್ಯರ ನೆರವೂ ಅತ್ಯಗತ್ಯ ಎನ್ನುವುದನ್ನು ಮರೆಯಬೇಡಿ.

## ನೀರಸ

ನೀ-
ರೇ..
ನೀ
ರಸ
ಭರಿತ
ತುಟಿ
ನೀ-
ಡದೊಡೆ
ಆ
ದಿನ
ನೀ-
ರಸ!!

- ಮ. ಮುರಳಿ ಕೃಷ್ಣ

ನಗೆನೇಮಿನ

# ವೀರಪ್ಪನ್ ಮಂತ್ರಿ ಆಗಬಾರದೇಕೆ?

○ ಎಂ.ಎಸ್.ನರಸಿಂಹಮೂರ್ತಿ

''ಇಂದಲ್ಲ ನಾಳೆ ವೀರಪ್ಪನ್ ಸಹ ಮಂತ್ರಿ ಆಗುತ್ತಾನೆ. ಆತ ಎಜುಕೇಶನ್ ಮಿನಿಸ್ಟರ್ ಆಗಲೂಬಹುದು. ಕಾಪಿ ಹೊಡೆದವರಿಗೇ ಈಗ ಮಾನ್ಯತೆ ಇದೆ; ತಲೆ ಹೊಡೆದವರಿಗೆ ಬೆಲೆ ಸಿಗುವುದಿಲ್ಲವಾ?''

''**ಈ** ದೇಶದಲ್ಲಿ ಎಲ್ಲಕ್ಕಿಂತ ಹೆಚ್ಚು ಡಿಮ್ಯಾಂಡ್ ಇರುವ ಕೆಲಸ ಯಾವುದು ಗೊತ್ತಾ? ಎಂದು ರಾಮಣ್ಣ ಪ್ರಶ್ನೆ ಹಾಕಿದಾಗ ನಾನು ಯೋಚಿಸಿ ಹೇಳಿದೆ.

''ಡಾಕ್ಟರ್ ಕೆಲ್ಸ, ಇಂಜನಿಯರ್ ಕೆಲ್ಸ''

''ಗಲ್ಲಿಗೆ ಒಬ್ಬ ಡಾಕ್ಟರಿದ್ದಾರೆ ಈಗ. ಕೆಲವರು ಬರೀ ಫ್ಯಾಮಿಲಿ ಡಾಕ್ಟರಾಗಿದ್ದಾರೆ. ಅಂದರೆ ಅವರ ಫ್ಯಾಮಿಲಿ ಮಾತ್ರ ನೋಡಿಕೊಳ್ಳುವ ಡಾಕ್ಟರು!''

ಮತ್ತೆ ಯಾವ ಕೆಲಸಕ್ಕೆ ಡಿಮ್ಯಾಂಡ್ ಇರಬಹುದು ಎಂದು ಯೋಚಿಸಿ ಸೋತೆ. ಕಡೆಗೆ ರಾಮಣ್ಣನೇ ಹೇಳಿದ.

''ಮಂತ್ರಿ ಕೆಲಸ. ಈಚೆಗೆ ಸುಪ್ರಿಂ ಕೋರ್ಟು ಒಂದು ಆದೇಶ ಹೊರಡಿಸಿದೆ. ರಾಜಕೀಯ ವ್ಯಕ್ತಿಗೆ ಕನಿಷ್ಟ ವಿದ್ಯಾರ್ಹತೆಯೂ ಬೇಕಿಲ್ಲ ಎಂದಿದೆ. ಆತನಿಗೆ ಹೆಬ್ಬೆಟ್ಟು ಹಾಕಲು ಬಂದರೆ ಸಾಕಂತೆ. ಹೆಬ್ಬೆಟ್ಟು ಕೈಯಿಂದ ಹಾಕುವುದೋ, ಕಾಲಿಂದ ಹಾಕುವುದೋ ತಿಳಿದಿದ್ದರೆ ಸಾಕು'' ಎಂಬ ಷಾಕ್ ನೀಡಿದ.

ಕಾನೂನು ಮಾಡಬಲ್ಲ ಮಂದಿಗೆ ಅಕ್ಷರ ಜ್ಞಾನವೂ ಬೇಡವಾ? ಜ್ಞಾನವೂ ಬೇಡವಾ? ಅಂಥ ಜನರನ್ನು ಆಯ್ಕೆ ಮಾಡಿ ಕಳಿಸುವ ಮಂದಿ ನಾವಾಗಿದ್ದೀವಾ? ಎಂದೆಲ್ಲಾ ಪ್ರಶ್ನೆಗಳು ತಲೆಯೊಳಗೆ ಹುಳುವಿನಂತೆ ಸೇರಿ ಮರಿ ಮಾಡಿದವು.

ಕೇವಲ ಜನಸಾಮಾನ್ಯನಾಗಿ ಬೀಡಿ ಸೇದುತ್ತಾ ಬಸ್‌ಸ್ಟ್ಯಾಂಡ್‌ನಲ್ಲಿ ಕಾಲ ಕಳೆಯುತ್ತಿದ್ದ ಒಬ್ಬ ವ್ಯಕ್ತಿ ಮಂತ್ರಿಯಾಗಿ ಕಾರಲ್ಲಿ ಮೆರೆದ ಕತೆ ಕಣ್ಮುಂದೆ ಬಂತು. ಆ ಬೀಡಿ ಸಚಿವನಿಗೆ ಬಹಳಷ್ಟು ಬೇಡಿಕೆ ಬಂದು ಆತ ಕಂಡಕಂಡಲ್ಲೆಲ್ಲ ಜನಗಳ ದಂಡು. ಒಂದು ವಾರಕ್ಕೆ ಆಗುವಷ್ಟು ಸಲಾಮುಗಳು ಒಂದೇ ದಿನ!. ಟೇಪು ಕತ್ತರಿಸಲು ಒಂದು ಕತ್ತರಿ ಸದಾ ಜೇಬಲ್ಲಿ ಮಡಗಿಕೊಂಡಿದ್ದ. ಅಷ್ಟೇ ಅಲ್ಲ, ಗುದ್ದಲಿ ಪೂಜೆಗಾಗಿ ಒಂದು ಪಿಕಾಸಿಯನ್ನು ಕಾರಿನ ಡಿಕ್ಕಿಯಲ್ಲಿ ಇಟ್ಟಿದ್ದ. ಶಂಕುಸ್ಥಾಪನೆಗೆ ಕರೆದುಬಿಟ್ಟರೆ ಅಭ್ಯಾಸ ಬಲದಿಂದ ಪಿಕಾಸಿ, ಸನಿಕೆ ಹಿಡಿದು ಆರಡಿ ಉದ್ದದ ಪಾಯ ತೋಡಿಬಿಡುತ್ತಿದ್ದ! ಸಾಕು ಸಾರ್ ಎಂದರೂ ಕೇಳುತ್ತಿರಲಿಲ್ಲ.

''ಇರ್‍ಲಿ ಬಿಡ್ರಿ, ನನ್ನ ಕೈಲಾದ ಸಹಾಯ'' ಎಂದು ಮತ್ತೂ ಅಗೆದು ಮಣ್ಣು ತೆಗೆಯುತ್ತಿದ್ದ.

''ಸಾರ್, ಗುದ್ದಲಿ ಪೂಜೆ ಶಾಸ್ತ್ರಕ್ಕಾಗಿ ಮಾಡೋದು. ನೀವು ಎರಡು ಏಟು ಹಾಕಿದರೆ ಸಾಕು'' ಎಂಬ ಮಾತಿಗೆ ಉತ್ತರ ಕೊಡುತ್ತಿರಲಿಲ್ಲ.

ಅಕ್ಷರ ಜ್ಞಾನ ಇಲ್ಲವಾದರೂ ಆ ವ್ಯಕ್ತಿಗೆ ಇಷ್ಟು ಡಿಮ್ಯಾಂಡ್ ಯಾಕೆ ಎಂದು ಯೋಚಿಸಿ, ಅರ್ಥವಾಗದೆ ಸುಮ್ಮನಿದ್ದ ನನಗೆ ರಾಮಣ್ಣನ ಮಾತು ನಿಜ ಎನ್ನಿಸಿತು. ಜನರನ್ನು ಆಳುವ ಕೆಲಸಕ್ಕೆ ವಿಪರೀತ ಡಿಮ್ಯಾಂಡು.

ಶಾಲೆಯಲ್ಲಿ ಮಾನಿಟರ್ ಆಗಲು ಪೈಪೋಟಿ. ಗುಂಪಲ್ಲಿ ಹೀರೋ ಆಗಲು ಎಲ್ಲ ಪ್ರಯತ್ನಗಳು.

''ಶಾಸಕರಿಗೆ ೫೦೦ ಸಂಬಳ ತಾನೇ ಬರುತ್ತೆ?'' ಎಂದಾಗ ರಾಮಣ್ಣ ಗಹಗಹಿಸಿ ನಕ್ಕ.

''ಮೊದಮೊದಲು ಒಂದು ಪೈಸೆ ಸಂಬಳ ಕೊಡ್ತಾ ಇರಲಿಲ್ಲ. ನಿಜಲಿಂಗಪ್ಪ, ಕೆಂಗಲ್ ಹನುಮಂತಯ್ಯ, ಕೆ.ಸಿ.ರೆಡ್ಡಿ, ಎಚ್.ಸಿ. ಲಿಂಗಾರೆಡ್ಡಿ ಅವರು ಒಂದು ರೂಪಾಯಿ ಸಂಬಳ ಪಡೆದವರಲ್ಲ. ಆದರೂ ಅವರು ಜನರ ಮನದಲ್ಲಿ ನೆಲೆಸಿದ್ದಾರೆ. ಅವರ ಸೇವೆ ನಾವು ಮರೆಯಲಾಗದು. ಈಗ ಕೈ ತುಂಬಾ ಸಂಬಳ ಕೊಡ್ತಾರೆ''.



"ಎಷ್ಟು? ಸಾವಿರ ರೂಪಾಯಿ ಕೊಡ್ತಾರಾ?"

"ಅಯ್ಯಾ ದಡ್ಡ ಮತದಾರ, ಎರಡು ಸಾವಿರ ರೂಪಾಯಿ ಈವರೆಗೆ ಕೊಡ್ತಾ ಇದ್ರು. ಅದು ಸಾಲದು ಅಂತ ಅದನ್ನು ಮೂರೂವರೆ ಸಾವಿರಕ್ಕೆ ಹೆಚ್ಚಿಸಿದ್ದಾರೆ!"

"ಮೂರೂವರೆ ಸಾವಿರ! ಶಾಸಕನಾದರೆ ಬಹಳ ಆರಾಮ ಬಿಡು" ಎಂದೆ.

"ಮನೆ ಉಚಿತ, ಕಾರು ಉಚಿತ, ಕೆಲಸದವರು ಉಚಿತ, ಮಾಮೂಲುಗಳು ಉಚಿತ, ಯಾರಿಗುಂಟು ಈ ರಾಜಯೋಗ?"

"ಇದಲ್ಲದೆ ಪೆಟ್ರೋಲು ಕೊಡ್ತಾರಂತೆ?"

"೫೦೦ ಲೀಟರ್ ಒಂದು ತಿಂಗಳಿಗೆ ಅಂದರೆ ೧೫ ಸಾವಿರ ರೂಪಾಯಿ ಪೆಟ್ರೋಲು!"

"ಭೇಷ್! ಆದರೆ ಅವರನ್ನು ಬಂದು ನೋಡೋ ನಮ್ಮಂಥ ಜನ ಬಹಳ ಇರ್ತಾರಲ್ಲ?"

"ಬಂದವರು ತಂದುಕೊಡ್ತಾರೆ. ದೇವರನ್ನ, ಸ್ವಾಮಿಗಳನ್ನ ಬರೀಕೈಲಿ ಹೋಗಿ ನೋಡ ಬಾರದಂತೆ. ಹಾಗೇ ಮಂತ್ರಿಗಳನ್ನು ಕೂಡ! ಏನಾದರೂ ಕಾಣಿಕೆ ಒಪ್ಪಿಸಿ ಮುಜರೆ ಮಾಡಬೇಕು. ಆಮೇಲೆ, ನಿನ್ನ ಅನುಮಾನಕ್ಕೆ ನನ್ನಲ್ಲಿ ಉತ್ತರ ಇದೆ. ಎಂಟರ್‌ಟೈನ್‌ಮೆಂಟ್ ಅಲೋಯೆನ್ಸ್ ಅಂತ ವರ್ಷಕ್ಕೆ ಅರ್ಧ ಲಕ್ಷ ಕೊಡ್ತಾರೆ!"

"ಅತಿಥಿ ಭತ್ಯ ಅರ್ಧ ಲಕ್ಷ! ಅತಿಥಿಗಳು ತಂದು ಕೊಡುವ ಭತ್ಯವೂ ಸೇರಿದರೆ ಇದು ಇನ್ನೂ ಹೆಚ್ಚಾಗುತ್ತದೆ. ಇಲ್ಲಿಗೆ ತಿಂಗಳಿಗೆ ಮೂರೂವರೆ ಸಾವಿರ ಅನ್ನೋದು ಸುಳ್ಳು ಅಂತಾಯ್ತು. ಇವೆಲ್ಲಾ ಸೇರಿದರೆ ತಿಂಗಳಿಗೆ ಅರ್ಧ ಲಕ್ಷ ಆಗಬಹುದು" ಎಂದೆ.

"ಬರೀ ಪ್ರಯಾಣ ಭತ್ಯೆಯೇ ಎರಡು ವರ್ಷದಲ್ಲಿ ಹನ್ನೆರಡು ಲಕ್ಷ ಆಗಿರೋ ಕೇಸುಗಳಿವೆ. ಬೇಕಾ?" ಎಂದು ರಾಮಣ್ಣ ಹೇಳಿದಾಗ ನನ್ನ ತಲೆಗೆ ಲೆಕ್ಕಾಚಾರ ಮಾಡುವ ವಿಧಾನ ತಿಳಿಯದೆ ವಿಧಾನಸೌಧದ ಕಂಬದಂತೆ ನೆಟ್ಟಗೆ ನಿಂತಿತು. ಇಷ್ಟೆಲ್ಲಾ ಅನುಕೂಲಗಳು ಇರುವಾಗ ಬೇರೆ ಕೆಲಸ ಯಾಕೆ? ಕೆಲಸ ಬೇಕು ಎಂದು ಉದ್ಯೋಗ ಕಛೇರಿಯ ಮುಂದೆ ಅಲೆಯುವ ಬದಲು ಉದ್ಯೋಗ ಕೊಡಿಸಬಲ್ಲ ಮಂತ್ರಿಸ್ಥಾನ ಎಷ್ಟೋ ಒಳ್ಳೆಯದು. ಬೇಸಿಕ್ ಎಜುಕೇಷನ್ ಬೇಡ ಎಂದು ಕೋರ್ಟು ಸಹ ಹೇಳಿದೆಯಲ್ಲ?

"ಓದದೆ ಆ ಎತ್ತರಕ್ಕೆ ಏರಿದವರ ಉದಾಹರಣೆ ಇದೆಯಾ?"

"ಎಲ್ಲಾ ಅಂಥ ಕೇಸುಗಳೇ! ಚಂಬಲ್ ರಾಣಿ ಗೊತ್ತಾ? ಫೂಲನ್‌ದೇವಿ ಸಿನಿಮಾ ನೋಡಿದ್ದೀಯಾ? ಡಕಾಯಿತರ ಗುಂಪುಗಳೆರಡರ ನಡುವೆ ಹೋರಾಟ ಆದಾಗ ಅವಳನ್ನು ಬತ್ತಲು ಮಾಡಿ ರಸ್ತೇಲಿ ಎಳೆದಾಡಿದ್ದು ಸಿನಿಮಾದಲ್ಲಿ ನೋಡಿದ್ದೀಯಾ?"

"ಇಲ್ಲವಲ್ಲ. ಛೇ! ಮಿಸ್ ಮಾಡಿಕೊಂಡೆ" ಎಂದು ಪರಿತಪಿಸಿದೆ.

"ಫೂಲನ್‌ದೇವಿ ಈಗ ನಿನಗೆ ಎಂ.ಪಿ. ಆಗಿದ್ದಾಳಪ್ಪ. ಆಕೆ ಮುಂದೆ ಮೂರು ಕಾರುಗಳು ಹಿಂದೆ ಆರು ಕಾರುಗಳು. ಚಂಬಲ್‌ನಲ್ಲಿದ್ದಾಗಲೂ ಪೋಲಿಸರು ಆಕೆಯ ಬೆನ್ನ ಹಿಂದೆ. ಆಕೆ ಎಂ.ಪಿ. ಆದಮೇಲೂ ಪೋಲಿಸರು ಬೆನ್ನ ಹಿಂದೆ!"

ಎಂಥ ಅದೃಷ್ಟ ಅವಳಿಗೆ ಎಂದುಕೊಂಡೆ. ಫೂಲನ್‌ಗೆ ಇಷ್ಟು ಗೌರವ, ಅಧಿಕಾರ ಸಿಕ್ಕಿರುವಾಗ ನಮ್ಮ ವೀರಪ್ಪನ್ ಏನು ಮಾಡಿದ? ಫೂಲನ್ ಮಾಡಿದ್ದ ಘೋರ ಕೃತ್ಯಗಳಲ್ಲಿ ಶೇಕಡಾ ಹತ್ತು ಭಾಗವೂ ವೀರಪ್ಪನ್ ಮಾಡಿಲ್ಲ. ಇಂದಲ್ಲ ನಾಳೆ ದೇವರು ಕಣ್ಣು ತೆರೆಯದೆ ಹೋಗುತ್ತಾನಾ? ದೇವರೆಂದರೆ ಮತದೇವರು!

"ಇಂದಲ್ಲ ನಾಳೆ ವೀರಪ್ಪನ್ ಸಹ ಮಂತ್ರಿ ಆಗುತ್ತಾನೆ. ಆತ ಎಜುಕೇಶನ್ ಮಿನಿಸ್ಟರ್ ಆಗಲೂಬಹುದು. ಕಾಪಿ ಹೊಡೆದವರಿಗೇ ಈಗ ಮಾನ್ಯತೆ ಇದೆ; ತಲೆ ಹೊಡೆದವರಿಗೆ ಬೆಲೆ ಸಿಗುವುದಿಲ್ಲವಾ?" ಎಂದು ರಾಮಣ್ಣ ಹೇಳಿದಾಗ ನನಗೆ ಖುಷಿ ಆಯಿತು.

"ನಕ್ಕೀರನ್ ಪತ್ರಿಕೆಯ ಗೋಪಾಲನ್ ನನಗೆ ಪರಿಚಯ ಇದ್ದಾರೆ. ಅವರ ಮೂಲಕ ವೀರಪ್ಪನ್‌ಗೆ ಹೇಳಿದರೆ ನನ್ನ ಮಗನಿಗೆ ಒಂದು ಕೆಲ್ಸ ಸಿಗಬಹುದು ಅಲ್ವಾ?" ಎಂದೆ.

"ಖಂಡಿತ. ಆ ದಿನ ಬರುತ್ತೆ ನೋಡು" ಎಂದ ರಾಮಣ್ಣ ಆಶಾವಾದಿಯಂತೆ.

●

## ಧನ - ಗುಣ

ಧನ ಮತ್ತು ಗುಣ
ಒಂದೇ ನಾಣ್ಯದ
ಎರಡು ಮುಖಗಳು
ಅವು ಎಂದೂ
ಒಂದನ್ನೊಂದು
ನೋಡಲಾರವು

- ಶಂಕರ ಮುತ್ತಣ್ಣವರ

## ಈ ಗ್ರಂಥಾಲಯದಲ್ಲಿ ೫೦೦೦ ಉದ್ಯೋಗಿಗಳು !

ಅತ್ಯಂತ ಹಳೆಯ ಹಾಗೂ ವಿಸ್ಮಯಕಾರಿ ಗ್ರಂಥಾಲಯ ಅಮೇರಿಕಾದ ವಾಷಿಂಗ್‌ಟನ್‌ನಲ್ಲಿದೆ. ಇದನ್ನು "ಲೈಬ್ರರಿ ಆಫ್ ಕಾಂಗ್ರೆಸ್" ಎಂದು ಕರೆಯಲಾಗಿದೆ.

***ಈ ಗ್ರಂಥಾಲಯದಲ್ಲಿನ ವಿಶೇಷಗಳು***

೧) ಇಲ್ಲಿ ೮ ಕೋಟಿಗಿಂತ ಹೆಚ್ಚು ವಿವಿಧ ರೀತಿಯ ವಸ್ತುಗಳಿವೆ.
೨) ಪುಸ್ತಕಗಳ ಸಂಖ್ಯೆ ೨ ಕೋಟಿ.
೩) ಪ್ರತಿದಿನ ೩೧,೦೦೦ ಹೊಸ ಪುಸ್ತಕಗಳು, ವಾರಪತ್ರಿಕೆ, ದಿನಪತ್ರಿಕೆಗಳು ಈ ಗ್ರಂಥಾಲಯಕ್ಕೆ ಬರುತ್ತವೆ.
೪) ಈ ಪುಸ್ತಕಗಳನ್ನು ಸಾಲುಸಾಲಾಗಿ ಜೋಡಿಸಿದರೆ ಸುಮಾರು ೮೬೦ ಕಿ. ಮೀ. ಇರುತ್ತದೆಂದು ಅಂದಾಜು ಮಾಡಲಾಗಿದೆ.
೫) ೨೩ ರೀಡಿಂಗ್ ರೂಮ್‌ಗಳು.
೬) ೫,೦೦೦ ಉದ್ಯೋಗಿಗಳು.
೭) ೪೦ ಲಕ್ಷ ಮ್ಯಾಪುಗಳನ್ನು, ೮,೦೦೦ ಚದರ ಮೀಟರ್ ವಿಸ್ತೀರ್ಣದಲ್ಲಿ ಪ್ರದರ್ಶಿಸಲಾಗಿದೆ.
೮) ೯ ಲಕ್ಷ ಫೋಟೋಗ್ರಾಫ್ ನೆಗೆಟಿವ್‌ಗಳಿವೆ.

- ಶಶಿಕಲಾ ಪುತ್ತೂರು



# ವೀರಪ್ಪನ್ ಮಂತ್ರಿ ಆಗಬಾರದೇಕೆ?

○ ಎಂ.ಎಸ್.ನರಸಿಂಹಮೂರ್ತಿ

**''ಇಂದಲ್ಲ ನಾಳೆ ವೀರಪ್ಪನ್ ಸಹ ಮಂತ್ರಿ ಆಗುತ್ತಾನೆ. ಆತ ಎಜುಕೇಶನ್ ಮಿನಿಸ್ಟರ್ ಆಗಲೂಬಹುದು. ಕಾಪಿ ಹೊಡೆದವರಿಗೇ ಈಗ ಮಾನ್ಯತೆ ಇದೆ; ತಲೆ ಹೊಡೆದವರಿಗೆ ಬೆಲೆ ಸಿಗುವುದಿಲ್ಲವಾ?''**

''ಈ ದೇಶದಲ್ಲಿ ಎಲ್ಲಕ್ಕಿಂತ ಹೆಚ್ಚು ಡಿಮ್ಯಾಂಡ್ ಇರುವ ಕೆಲಸ ಯಾವುದು ಗೊತ್ತಾ? ಎಂದು ರಾಮಣ್ಣ ಪ್ರಶ್ನೆ ಹಾಕಿದಾಗ ನಾನು ಯೋಚಿಸಿ ಹೇಳಿದೆ.

''ಡಾಕ್ಟರ್ ಕೆಲ್ಸ, ಇಂಜಿನಿಯರ್ ಕೆಲ್ಸ''

''ಗಲ್ಲಿಗೆ ಒಬ್ಬ ಡಾಕ್ಟರಿದ್ದಾರೆ ಈಗ. ಕೆಲವರು ಬರೀ ಫ್ಯಾಮಿಲಿ ಡಾಕ್ಟರಾಗಿದ್ದಾರೆ. ಅಂದರೆ ಅವರ ಫ್ಯಾಮಿಲಿ ಮಾತ್ರ ನೋಡಿಕೊಳ್ಳುವ ಡಾಕ್ಟರು!''

ಮತ್ತೆ ಯಾವ ಕೆಲಸಕ್ಕೆ ಡಿಮ್ಯಾಂಡ್ ಇರಬಹುದು ಎಂದು ಯೋಚಿಸಿ ಸೋತೆ. ಕಡೆಗೆ ರಾಮಣ್ಣನೇ ಹೇಳಿದ.

''ಮಂತ್ರಿ ಕೆಲಸ. ಈಚೆಗೆ ಸುಪ್ರಿಂ ಕೋರ್ಟು ಒಂದು ಆದೇಶ ಹೊರಡಿಸಿದೆ. ರಾಜಕೀಯ ವ್ಯಕ್ತಿಗೆ ಕನಿಷ್ಟ ವಿದ್ಯಾರ್ಹತೆಯೂ ಬೇಕಿಲ್ಲ ಎಂದಿದೆ. ಆತನಿಗೆ ಹೆಬ್ಬೆಟ್ಟು ಹಾಕಲು ಬಂದರೆ ಸಾಕಂತೆ. ಹೆಬ್ಬೆಟ್ಟು ಕೈಯಿಂದ ಹಾಕುವುದೋ, ಕಾಲಿಂದ ಹಾಕುವುದೋ ತಿಳಿದಿದ್ದರೆ ಸಾಕು'' ಎಂಬ ಷಾಕ್ ನೀಡಿದ.

ಕಾನೂನು ಮಾಡಬಲ್ಲ ಮಂದಿಗೆ ಅಕ್ಷರ ಜ್ಞಾನವೂ ಬೇಡವಾ? ಜ್ಞಾನವೂ ಬೇಡವಾ? ಅಂಥ ಜನರನ್ನು ಆಯ್ಕೆ ಮಾಡಿ ಕಳಿಸುವ ಮಂದಿ ನಾವಾಗಿದ್ದೀವಾ? ಎಂದೆಲ್ಲಾ ಪ್ರಶ್ನೆಗಳು ತಲೆಯೊಳಗೆ ಹುಳುವಿನಂತೆ ಸೇರಿ ಮರಿ ಮಾಡಿದವು.

ಕೇವಲ ಜನಸಾಮಾನ್ಯನಾಗಿ ಬೀಡಿ ಸೇದುತ್ತಾ ಬಸ್‌ಸ್ಟ್ಯಾಂಡ್‌ನಲ್ಲಿ ಕಾಲ ಕಳೆಯುತ್ತಿದ್ದ ಒಬ್ಬ ವ್ಯಕ್ತಿ ಮಂತ್ರಿಯಾಗಿ ಕಾರಲ್ಲಿ ಮೆರೆದ ಕತೆ ಕಣ್ಮುಂದೆ ಬಂತು. ಆ ಬೀಡಿ ಸಚಿವನಿಗೆ ಬಹಳಷ್ಟು ಬೇಡಿಕೆ ಬಂದು ಆತ ಕಂಡಕಂಡಲ್ಲೆಲ್ಲ ಜನಗಳ ದಂಡು. ಒಂದು ವಾರಕ್ಕೆ ಆಗುವಷ್ಟು ಸಲಾಮುಗಳು ಒಂದೇ ದಿನ!. ಟೇಪು ಕತ್ತರಿಸಲು ಒಂದು ಕತ್ತರಿ ಸದಾ ಜೇಬಲ್ಲಿ ಮಡಗಿಕೊಂಡಿದ್ದ. ಅಷ್ಟೇ ಅಲ್ಲ, ಗುದ್ದಲಿ ಪೂಜೆಗಾಗಿ ಒಂದು ಪಿಕಾಸಿಯನ್ನು ಕಾರಿನ ಡಿಕ್ಕಿಯಲ್ಲಿ ಇಟ್ಟಿದ್ದ. ಶಂಕುಸ್ಥಾಪನೆಗೆ ಕರೆದುಬಿಟ್ಟರೆ ಅಭ್ಯಾಸ ಬಲದಿಂದ ಪಿಕಾಸಿ, ಸನಿಕೆ ಹಿಡಿದು ಆರಡಿ ಉದ್ದದ ಪಾಯ ತೋಡಿಬಿಡುತ್ತಿದ್ದ! ಸಾಕು ಸಾರ್ ಎಂದರೂ ಕೇಳುತ್ತಿರಲಿಲ್ಲ.

''ಇರ್‍ಲಿ ಬಿಡ್ರಿ, ನನ್ನ ಕೈಲಾದ ಸಹಾಯ'' ಎಂದು ಮತ್ತೂ ಅಗೆದು ಮಣ್ಣು ತೆಗೆಯುತ್ತಿದ್ದ.

''ಸಾರ್, ಗುದ್ದಲಿ ಪೂಜೆ ಶಾಸ್ತ್ರಕ್ಕಾಗಿ ಮಾಡೋದು. ನೀವು ಎರಡು ಏಟು ಹಾಕಿದರೆ ಸಾಕು'' ಎಂಬ ಮಾತಿಗೆ ಉತ್ತರ ಕೊಡುತ್ತಿರಲಿಲ್ಲ.

ಅಕ್ಷರ ಜ್ಞಾನ ಇಲ್ಲವಾದರೂ ಆ ವ್ಯಕ್ತಿಗೆ ಇಷ್ಟು ಡಿಮ್ಯಾಂಡ್ ಯಾಕೆ ಎಂದು ಯೋಚಿಸಿ, ಅರ್ಥವಾಗದೆ ಸುಮ್ಮನಿದ್ದ ನನಗೆ ರಾಮಣ್ಣನ ಮಾತು ನಿಜ ಎನ್ನಿಸಿತು. ಜನರನ್ನು ಆಳುವ ಕೆಲಸಕ್ಕೆ ವಿಪರೀತ ಡಿಮ್ಯಾಂಡು.

ಶಾಲೆಯಲ್ಲಿ ಮಾನಿಟರ್ ಆಗಲು ಪೈಪೋಟಿ. ಗುಂಪಲ್ಲಿ ಹೀರೋ ಆಗಲು ಎಲ್ಲ ಪ್ರಯತ್ನಗಳು.

''ಶಾಸಕರಿಗೆ ೫೦೦ ಸಂಬಳ ತಾನೇ ಬರುತ್ತೆ?'' ಎಂದಾಗ ರಾಮಣ್ಣ ಗಹಗಹಿಸಿ ನಕ್ಕ.

''ಮೊದಮೊದಲು ಒಂದು ಪೈಸೆ ಸಂಬಳ ಕೊಡ್ತಾ ಇರಲಿಲ್ಲ. ನಿಜಲಿಂಗಪ್ಪ, ಕೆಂಗಲ್ ಹನುಮಂತಯ್ಯ, ಕೆ.ಸಿ.ರೆಡ್ಡಿ, ಎಚ್.ಸಿ. ಲಿಂಗಾರೆಡ್ಡಿ ಅವರು ಒಂದು ರೂಪಾಯಿ ಸಂಬಳ ಪಡೆದವರಲ್ಲ. ಆದರೂ ಅವರು ಜನರ ಮನದಲ್ಲಿ ನೆಲೆಸಿದ್ದಾರೆ. ಅವರ ಸೇವೆ ನಾವು ಮರೆಯಲಾಗದು. ಈಗ ಕೈ ತುಂಬಾ ಸಂಬಳ ಕೊಡ್ತಾರೆ''.



''ಎಷ್ಟು? ಸಾವಿರ ರೂಪಾಯಿ ಕೊಡ್ತಾರಾ?''

''ಅಯ್ಯಾ ದಡ್ಡ ಮತದಾರ, ಎರಡು ಸಾವಿರ ರೂಪಾಯಿ ಈವರೆಗೆ ಕೊಡ್ತಾ ಇದ್ರು. ಅದು ಸಾಲದು ಅಂತ ಅದನ್ನು ಮೂರೂವರೆ ಸಾವಿರಕ್ಕೆ ಹೆಚ್ಚಿಸಿದ್ದಾರೆ!''

''ಮೂರೂವರೆ ಸಾವಿರ! ಶಾಸಕನಾದರೆ ಬಹಳ ಆರಾಮ ಬಿಡು'' ಎಂದೆ.

''ಮನೆ ಉಚಿತ, ಕಾರು ಉಚಿತ, ಕೆಲಸದವರು ಉಚಿತ, ಮಾಮೂಲುಗಳು ಉಚಿತ, ಯಾರಿಗುಂಟು ಈ ರಾಜಯೋಗ?''

''ಇದಲ್ಲದೆ ಪೆಟ್ರೋಲು ಕೊಡ್ತಾರಂತೆ?''

''೫೦೦ ಲೀಟರ್ ಒಂದು ತಿಂಗಳಿಗೆ ಅಂದರೆ ೧೫ ಸಾವಿರ ರೂಪಾಯಿ ಪೆಟ್ರೋಲು!''

''ಭೇಷ್! ಆದರೆ ಅವರನ್ನು ಬಂದು ನೋಡೋ ನಮ್ಮಂಥ ಜನ ಬಹಳ ಇರ್ತಾರಲ್ಲ?''

''ಬಂದವರು ತಂದುಕೊಡ್ತಾರೆ. ದೇವರನ್ನ, ಸ್ವಾಮಿಗಳನ್ನ ಬರೀಕೈಲಿ ಹೋಗಿ ನೋಡ ಬಾರದಂತೆ. ಹಾಗೇ ಮಂತ್ರಿಗಳನ್ನು ಕೂಡ! ಏನಾದರೂ ಕಾಣಿಕೆ ಒಪ್ಪಿಸಿ ಮುಜರೆ ಮಾಡಬೇಕು. ಆಮೇಲೆ, ನಿನ್ನ ಅನುಮಾನಕ್ಕೆ ನನ್ನಲ್ಲಿ ಉತ್ತರ ಇದೆ. ಎಂಟರ್‌ಟೈನ್‌ಮೆಂಟ್ ಅಲೋಯೆನ್ಸ್ ಅಂತ ವರ್ಷಕ್ಕೆ ಅರ್ಧ ಲಕ್ಷ ಕೊಡ್ತಾರೆ!''

''ಅತಿಥಿ ಭತ್ಯ ಅರ್ಧ ಲಕ್ಷ! ಅತಿಥಿಗಳು ತಂದು ಕೊಡುವ ಭತ್ಯವೂ ಸೇರಿದರೆ ಇದು ಇನ್ನೂ ಹೆಚ್ಚಾಗುತ್ತದೆ. ಇಲ್ಲಿಗೆ ತಿಂಗಳಿಗೆ ಮೂರೂವರೆ ಸಾವಿರ ಅನ್ನೋದು ಸುಳ್ಳು ಅಂತಾಯ್ತು. ಇವೆಲ್ಲಾ ಸೇರಿದರೆ ತಿಂಗಳಿಗೆ ಅರ್ಧ ಲಕ್ಷ ಆಗಬಹುದು'' ಎಂದೆ.

''ಬರೀ ಪ್ರಯಾಣ ಭತ್ಯೆಯೇ ಎರಡು ವರ್ಷದಲ್ಲಿ ಹನ್ನೆರಡು ಲಕ್ಷ ಆಗಿರೋ ಕೇಸುಗಳಿವೆ. ಬೇಕಾ?'' ಎಂದು ರಾಮಣ್ಣ ಹೇಳಿದಾಗ ನನ್ನ ತಲೆಗೆ ಲೆಕ್ಕಾಚಾರ ಮಾಡುವ ವಿಧಾನ ತಿಳಿಯದೆ ವಿಧಾನಸೌಧದ ಕಂಬದಂತೆ ನೆಟ್ಟಗೆ ನಿಂತಿತು. ಇಷ್ಟೆಲ್ಲಾ ಅನುಕೂಲಗಳು ಇರುವಾಗ ಬೇರೆ ಕೆಲಸ ಯಾಕೆ? ಕೆಲಸ ಬೇಕು ಎಂದು ಉದ್ಯೋಗ ಕಛೇರಿಯ ಮುಂದೆ ಅಲೆಯುವ ಬದಲು ಉದ್ಯೋಗ ಕೊಡಿಸಬಲ್ಲ ಮಂತ್ರಿಸ್ಥಾನ ಎಷ್ಟೋ ಒಳ್ಳೆಯದು. ಬೇಸಿಕ್ ಎಜುಕೇಷನ್ ಬೇಡ ಎಂದು ಕೋರ್ಟು ಸಹ ಹೇಳಿದೆಯಲ್ಲ?

''ಓದದೆ ಆ ಎತ್ತರಕ್ಕೆ ಏರಿದವರ ಉದಾಹರಣೆ ಇದೆಯಾ?''

''ಎಲ್ಲಾ ಅಂಥ ಕೇಸುಗಳೇ! ಚಂಬಲ್‌ರಾಣಿ ಗೊತ್ತಾ? ಫೂಲನ್‌ದೇವಿ ಸಿನಿಮಾ ನೋಡಿದ್ದೀಯಾ? ಡಕಾಯಿತರ ಗುಂಪುಗಳ ರಡರ ನಡುವೆ ಹೋರಾಟ ಆದಾಗ ಅವಳನ್ನು ಬತ್ತಲು ಮಾಡಿ ರಸ್ತೇಲಿ ಎಳೆದಾಡಿದ್ದು ಸಿನಿಮಾದಲ್ಲಿ ನೋಡಿದ್ದೀಯಾ?''

''ಇಲ್ಲವಲ್ಲ. ಛೇ! ಮಿಸ್ ಮಾಡಿಕೊಂಡೆ'' ಎಂದು ಪರಿತಪಿಸಿದೆ.

''ಫೂಲನ್‌ದೇವಿ ಈಗ ನಿನಗೆ ಎಂ.ಪಿ. ಆಗಿದ್ದಾಳಪ್ಪ. ಆಕೆ ಮುಂದೆ ಮೂರು ಕಾರುಗಳು ಹಿಂದೆ ಆರು ಕಾರುಗಳು. ಚಂಬಲ್‌ನಲ್ಲಿ ದ್ದಾಗಲೂ ಪೋಲಿಸರು ಆಕೆಯ ಬೆನ್ನ ಹಿಂದೆ. ಆಕೆ ಎಂ.ಪಿ. ಆದಮೇಲೂ ಪೋಲಿಸರು ಬೆನ್ನ ಹಿಂದೆ!''

ಎಂಥ ಅದೃಷ್ಟ ಅವಳಿಗೆ ಎಂದುಕೊಂಡೆ. ಫೂಲನ್‌ಗೆ ಇಷ್ಟು ಗೌರವ, ಅಧಿಕಾರ ಸಿಕ್ಕಿರುವಾಗ ನಮ್ಮ ವೀರಪ್ಪನ್ ಏನು ಮಾಡಿದ? ಫೂಲನ್ ಮಾಡಿದ್ದ ಘೋರ ಕೃತ್ಯಗಳಲ್ಲಿ ಶೇಕಡಾ ಹತ್ತು ಭಾಗವೂ ವೀರಪ್ಪನ್ ಮಾಡಿಲ್ಲ. ಇಂದಲ್ಲ ನಾಳೆ ದೇವರು ಕಣ್ಣು ತೆರೆಯದೆ ಹೋಗುತ್ತಾನಾ? ದೇವರೆಂದರೆ ಮತದೇವರು!

''ಇಂದಲ್ಲ ನಾಳೆ ವೀರಪ್ಪನ್ ಸಹ ಮಂತ್ರಿ ಆಗುತ್ತಾನೆ. ಆತ ಎಜುಕೇಶನ್ ಮಿನಿಸ್ಟರ್ ಆಗಲೂಬಹುದು. ಕಾಪಿ ಹೊಡೆದವರಿಗೇ ಈಗ ಮಾನ್ಯತೆ ಇದೆ; ತಲೆ ಹೊಡೆದವರಿಗೆ ಬೆಲೆ ಸಿಗುವುದಿಲ್ಲವಾ?'' ಎಂದು ರಾಮಣ್ಣ ಹೇಳಿದಾಗ ನನಗೆ ಖುಷಿ ಆಯಿತು.

''ನಕ್ಕೀರನ್ ಪತ್ರಿಕೆಯ ಗೋಪಾಲನ್ ನನಗೆ ಪರಿಚಯ ಇದ್ದಾರೆ. ಅವರ ಮೂಲಕ ವೀರಪ್ಪನ್‌ಗೆ ಹೇಳಿದರೆ ನನ್ನ ಮಗನಿಗೆ ಒಂದು ಕೆಲ್ಸ ಸಿಗಬಹುದು ಅಲ್ವ?'' ಎಂದೆ.

''ಖಂಡಿತ. ಆ ದಿನ ಬರುತ್ತೆ ನೋಡು'' ಎಂದ ರಾಮಣ್ಣ ಆಶಾವಾದಿಯಂತೆ.

---

## ಧನ – ಗುಣ

ಧನ ಮತ್ತು ಗುಣ
ಒಂದೇ ನಾಣ್ಯದ
ಎರಡು ಮುಖಗಳು
ಅವು ಎಂದೂ
ಒಂದನ್ನೊಂದು
ನೋಡಲಾರವು

– ಶಂಕರ ಮುತ್ತಣ್ಣವರ

---

## ಈ ಗ್ರಂಥಾಲಯದಲ್ಲಿ ೫೦೦೦ ಉದ್ಯೋಗಿಗಳು !

ಅತ್ಯಂತ ಹಳೆಯ ಹಾಗೂ ವಿಸ್ಮಯಕಾರಿ ಗ್ರಂಥಾಲಯ ಅಮೇರಿಕಾದ ವಾಷಿಂಗ್‌ಟನ್‌ನಲ್ಲಿದೆ. ಇದನ್ನು ''ಲೈಬ್ರರಿ ಆಫ್ ಕಾಂಗ್ರೆಸ್'' ಎಂದು ಕರೆಯಲಾಗಿದೆ.

***ಈ ಗ್ರಂಥಾಲಯದಲ್ಲಿನ ವಿಶೇಷಗಳು***

೧) ಇಲ್ಲಿ ೮ ಕೋಟಿಗಿಂತ ಹೆಚ್ಚು ವಿವಿಧ ರೀತಿಯ ವಸ್ತುಗಳಿವೆ.
೨) ಪುಸ್ತಕಗಳ ಸಂಖ್ಯೆ ೨ ಕೋಟಿ.
೩) ಪ್ರತಿದಿನ ೩೧,೦೦೦ ಹೊಸ ಪುಸ್ತಕಗಳು, ವಾರಪತ್ರಿಕೆ, ದಿನಪತ್ರಿಕೆಗಳು ಈ ಗ್ರಂಥಾಲಯಕ್ಕೆ ಬರುತ್ತವೆ.
೪) ಈ ಪುಸ್ತಕಗಳನ್ನು ಸಾಲುಸಾಲಾಗಿ ಜೋಡಿಸಿದರೆ ಸುಮಾರು ೮೬೦ ಕಿ. ಮೀ. ಇರುತ್ತದೆಂದು ಅಂದಾಜು ಮಾಡಲಾಗಿದೆ.
೫) ೨೩ ರೀಡಿಂಗ್ ರೂಮ್‌ಗಳು.
೬) ೫,೦೦೦ ಉದ್ಯೋಗಿಗಳು.
೭) ೪೦ ಲಕ್ಷ ಮ್ಯಾಪುಗಳನ್ನು, ೮,೦೦೦ ಚದರ ಮೀಟರ್ ವಿಸ್ತೀರ್ಣದಲ್ಲಿ ಪ್ರದರ್ಶಿಸಲಾಗಿದೆ.
೮) ೯ ಲಕ್ಷ ಫೋಟೋಗ್ರಾಫ್ ನೆಗೆಟಿವ್‌ಗಳಿವೆ.

– ಶಶಿಕಲಾ ಪುತ್ತೂರು

# ಕಾಲೇಜು ವಿದ್ಯಾರ್ಥಿಗಳು ಶೋಧಿಸಿದ
# ಕಡಿಮೆ ವೆಚ್ಚದ ಕೃಷಿ ಯಂತ್ರಗಳು

○ ಲೋಕೇಶ್ ಎನ್.
ಉಪನ್ಯಾಸಕ, ಎಸ್.ಎಸ್. ಮಹಿಳಾ ಕಾಲೇಜ್
ಹಾವೇರಿ-೫೮೧ ೧೧೦

ಯಾವುದೇ ರಾಷ್ಟ್ರದ ಅಭಿವೃದ್ಧಿಗೆ ಆ ರಾಷ್ಟ್ರದ ಮೂಲಭೂತ ಉದ್ಯೋಗದ ಅಭಿವೃದ್ಧಿಯಾಗಬೇಕು. ಕೈಗಾರಿಕಾ ಪ್ರಧಾನ ರಾಷ್ಟ್ರಗಳು ಇಂದು ಅಭಿವೃದ್ಧಿ ಹೊಂದಿರುವುದು ಅಲ್ಲಿನ ಕೈಗಾರಿಕೆಗಳ ಅಭಿವೃದ್ಧಿಯಿಂದಲೇ ಎಂಬುದು ನಿರ್ವಿವಾದ. ಈ ಹಿನ್ನೆಲೆಯಲ್ಲಿ ಕೃಷಿ ಪ್ರಧಾನವಾದ ಭಾರತದಲ್ಲಿ ಕೃಷಿ ಅಭಿವೃದ್ಧಿಯಾದಾಗಲೇ ಭಾರತದ ಅಭಿವೃದ್ಧಿ ಸಾಧ್ಯ.

೧೯೬೦ರ ದಶಕದಲ್ಲಿ ಭಾರೀ ಆಶಾಭಾವನೆಯೊಂದಿಗೆ ಭಾರತೀಯ ಕೃಷಿಯಲ್ಲಿ ಹೊಸ ಕೃಷಿ ತಂತ್ರಜ್ಞಾನ (New Agricultural Technology) ಪರಿಚಯಿಸಿದರೂ ಸಹ ನಿರೀಕ್ಷಿತ ಪ್ರಗತಿ ಸಾಧಿಸಲಾಗಿಲ್ಲ. ಬೃಹತ್ ಹಿಡುವಳಿಗಳಿಗೆ ಅನ್ವಯವಾಗುವ ಯಂತ್ರಗಳನ್ನು ವಿದೇಶಿ ಮಾದರಿಯಲ್ಲಿ ತಯಾರಿಸಿ, ಸಣ್ಣ ಮತ್ತು ಅತೀ ಸಣ್ಣ ಹಿಡುವಳಿ ಹೊಂದಿದ ಭಾರತದ ಕೃಷಿಗೆ ಒದಗಿಸುವ ಪ್ರಯತ್ನ ಮಾಡಲಾಗಿದ್ದು ಇದರ ಪ್ರಯೋಜನ ಶೇ. ೨೦ರಷ್ಟು ಪ್ರಮಾಣದಲ್ಲಿರುವ ಶ್ರೀಮಂತ ರೈತರಿಗೆ ಮಾತ್ರ ದೊರೆಯುವಂತಾಗಿದೆ. ಭಾರತದಲ್ಲಿ ಶೇ. ೯೮ ರೈತರು ಸಣ್ಣ ಮತ್ತು ಮಧ್ಯಮ ಪ್ರಮಾಣದ ಹಿಡುವಳಿ (ಭಾರತದಲ್ಲಿ ಇವರ ಹಿಡುವಳಿ ಗಾತ್ರ ಸರಾಸರಿ ೨.೨೮ ಹೆಕ್ಟೇರ್) ಹೊಂದಿದ್ದು, ಇಂತಹ ರೈತರಿಗೆ ಅತೀ ಕಡಿಮೆ ವೆಚ್ಚದಲ್ಲಿ ಸಣ್ಣ ಪ್ರಮಾಣದ ಉತ್ಪಾದನೆಗೂ ಅನುಕೂಲವಾಗುವ ಯಂತ್ರಗಳನ್ನು ದೇಶೀಯವಾಗಿ ಸಂಶೋಧಿಸಿ, ತಯಾರಿಸುವುದರ ಅಗತ್ಯ ಇದೆ.

ಈ ದಿಶೆಯಲ್ಲಿ ರಾಣೆಬೆನ್ನೂರಿನ ಶ್ರೀ ತರಳಬಾಳು ಜಗದ್ಗುರು ತಾಂತ್ರಿಕ ಮಹಾವಿದ್ಯಾಲಯದ ಮೆಕ್ಯಾನಿಕಲ್ ಇಂಜನಿಯರಿಂಗ್ ವಿಭಾಗದ ವಿದ್ಯಾರ್ಥಿಗಳು, ಉಪನ್ಯಾಸಕರ ಮಾರ್ಗದರ್ಶನದಲ್ಲಿ ಕಂಡುಹಿಡಿದಿರುವ ೪ ಹೊಸ ಯಂತ್ರಗಳು ಕೃಷಿ ಪ್ರಗತಿಗೆ ಉತ್ತಮ ಕೊಡುಗೆಗಳಾಗಿವೆ. ಈ ಯಂತ್ರಗಳ ಸಂಕ್ಷಿಪ್ತ ಪರಿಚಯ ಹಾಗೂ ಪ್ರಯೋಜನಗಳನ್ನು ಇಲ್ಲಿ ವಿವರಿಸಲಾಗಿದೆ.

### ೧. ಮೆಕ್ಕೆಜೋಳ ಹಾಗೂ ಸೂರ್ಯಕಾಂತಿ ಬೀಜಗಳನ್ನು ಬೇರ್ಪಡಿಸುವ ಹಾಗೂ ಸ್ವಚ್ಛ ಮಾಡುವ ಯಂತ್ರ

ರೈತರು ತಾವು ಬೆಳೆದ ವಾಣಿಜ್ಯ ಬೆಳೆಗಳಾದ ಸೂರ್ಯಕಾಂತಿ, ಮೆಕ್ಕೆಜೋಳ ಮುಂತಾದ ಬೆಳೆಗಳ ತೆನೆಗಳಿಂದ ಕಾಳುಗಳನ್ನು ಬೇರ್ಪಡಿಸುವುದು ಪ್ರಮುಖವಾದ ಕಾರ್ಯ. ಈಗಿರುವ ಯಂತ್ರಗಳು ಬೃಹತ್ ಪ್ರಮಾಣದಲ್ಲಿ ಇಂತಹ ಕಾರ್ಯಗಳನ್ನು ಮಾಡುವುದಕ್ಕೆ ಅನುಕೂಲಕರವಾಗಿದ್ದು, ಬೆಲೆಯೂ ಅತಿ ಹೆಚ್ಚು. ಸಣ್ಣ ರೈತರು ಇವುಗಳ ಪ್ರಯೋಜನ ಪಡೆಯಲು ಸಾಧ್ಯವಿಲ್ಲ. ಈ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಎಸ್.ಟಿ.ಜೆ.ಐ.ಟಿ. ವಿದ್ಯಾರ್ಥಿಗಳಾದ ದಿನೇಶ್‌ಕುಮಾರ ಮತ್ತು ರತ್ನೇಶ್ ಕುಮಾರ ಸಿನ್ಹಾರವರು ಪ್ರೊ.ಎಸ್.ಬಿ. ಮಲ್ಲೂರ ಮತ್ತು ಅಶೋಕ ಬಣಕಾರ ಅವರ ಮಾರ್ಗದರ್ಶನದಲ್ಲಿ ಈ ಯಂತ್ರವನ್ನು ಕಂಡುಹಿಡಿದಿದ್ದಾರೆ. ಈ ಯಂತ್ರ ಪೆಡಲ್‌ನಿಂದ ಚಾಲಿತವಾಗಿದ್ದು, ಕಾಳುಗಳನ್ನು ಅವುಗಳಿಗೆ ಯಾವುದೇ ಧಕ್ಕೆಯಾಗದೆ ತೆನೆಯಿಂದ ಬೇರ್ಪಡಿಸುತ್ತದೆ. ಇದರ ಅಂದಾಜು ವೆಚ್ಚ ಕೇವಲ ೩,೫೦೦ ರೂ.ಗಳು.



ಮೆಕ್ಕೆಜೋಳ ಹಾಗೂ ಸೂರ್ಯಕಾಂತಿ ಬೀಜಗಳನ್ನು ಬೇರ್ಪಡಿಸುವ ಹಾಗು ಸ್ವಚ್ಛ ಮಾಡುವ ಯಂತ್ರ

### ೨. ಒಕ್ಕುವ ಯಂತ್ರ (Harvesting Machine)

ಸುಗ್ಗಿಯ ಸಮಯದಲ್ಲಿ ಬೆಳೆಗಳನ್ನು ಕಟಾವು ಮಾಡಲು ರೈತಕಾರ್ಮಿಕರ ಕೊರತೆ ಇಂದಿನ ದಿನಗಳಲ್ಲಿ ಸರ್ವೇಸಾಮಾನ್ಯ. ಜೋಳ, ಮೆಕ್ಕೆಜೋಳ, ಸಜ್ಜೆ, ಭತ್ತ ಮುಂತಾದ ಬೆಳೆಗಳನ್ನು ಕಟಾವು ಮಾಡಲು ಈ ಯಂತ್ರ ಬಳಸಬಹುದು.




ಒಕ್ಕುವ ಯಂತ್ರ

ಬೆಳೆ ಕಟಾವು ಆದ ನಂತರ ಉಳಿಯುವ ಕೂಳಿ (ನೆಲದಲ್ಲಿ ಉಳಿಯುವ ಕಾಂಡದ ಭಾಗ)ಯನ್ನು ತೆಗೆದು ಹಾಕಲೂ ಈ ಯಂತ್ರ ಬಳಸಬಹುದು. ಈ ಯಂತ್ರ ತಿರುಗುವ ಬ್ಲೇಡನ್ನು ಹೊಂದಿದ್ದು, ಇದು ಇಂಜಿನ್‌ಗೆ ಜೋಡಿಸಿರುವ ಬೆಲ್ಟ್‌ನಿಂದ ತಿರುಗುತ್ತದೆ. ಇದಕ್ಕೆ ಸದ್ಯ ಕ್ರಿಮಿನಾಶಕ ಸಿಂಪಡಿಸುವ ಸಲುವಾಗಿ ಬಳಸುವ ಇಂಜಿನ್‌ನನ್ನೇ ಬಳಸಬಹುದಾಗಿದ್ದು ರೈತರು ಒಕ್ಕುವ ಮತ್ತು ಕ್ರಿಮಿನಾಶಕ ಸಿಂಪಡಿಸುವ ಯಂತ್ರಗಳೆರಡಕ್ಕೂ ಒಂದೇ ಇಂಜಿನ್ ಬಳಸಬಹುದಾಗಿದೆ. ಎಂ.ಸಿ. ಮಂಜುನಾಥ, ಎಸ್. ಪ್ರಕಾಶ ಹಾಗೂ ಲಕ್ಷ್ಮೀಪತಿ ಈ ವಿದ್ಯಾರ್ಥಿಗಳು ಪ್ರೊ॥ ಎಸ್.ಕೆ. ಕೋಟೂರವರ ಮಾರ್ಗದರ್ಶನದಲ್ಲಿ ಈ ಯಂತ್ರ ತಯಾರಿಸಿದ್ದು, ಇದರ ಅಂದಾಜು ವೆಚ್ಚ ಕೇವಲ ೫,೦೦೦ ರೂ.ಗಳು.

## ೩. ಟೋಮ್ಯಾಟೋ ಹಣ್ಣಿನಿಂದ ಬೀಜಗಳನ್ನು ಬೇರ್ಪಡಿಸುವ ಯಂತ್ರ

ಹೆಚ್ಚು ಇಳುವರಿ ನೀಡುವ ತಳಿಗಳ (HYVS) ಟೋಮ್ಯಾಟೋ ಬೀಜಗಳನ್ನು ಹಣ್ಣಿನಿಂದ ಬೇರ್ಪಡಿಸುವುದಕ್ಕೆ ರೈತರು ಈಗ ಅವುಗಳನ್ನು ಕಾಲಿನಿಂದ ತುಳಿಯುವ ಪದ್ಧತಿ ಅನುಸರಿಸುತ್ತಿದ್ದಾರೆ. ಇದು ಹೆಚ್ಚು ಶ್ರಮದಾಯಕವೂ ಹೆಚ್ಚಿನ ಸಮಯವುಳ್ಳದ್ದೂ ಆಗಿದೆ. ಇದನ್ನು ನಿವಾರಿಸಲು ಈ ಯಂತ್ರ ಸಹಕಾರಿಯಾಗಿದೆ. ಬೀಜ ಬೇರ್ಪಡಿಸಿದ ನಂತರ ಉಳಿಯುವ ಟೋಮ್ಯಾಟೋ ರಸದಿಂದ ಜ್ಯೂಸ್ ಸಹ ತಯಾರಿಸಬಹುದು. ಪ್ರೊ. ಸಿ.ಆರ್.ವೆಂಕಟರಮಣ ಇವರ ಮಾರ್ಗದರ್ಶನದಲ್ಲಿ ವಿದ್ಯಾರ್ಥಿಗಳಾದ ಕುಮಾರ ಕೆ.ಎನ್. ಪ್ರಶಾಂತಚಂದ್ರ ಡಿ.ಎನ್., ಜಗದೀಶ್ ಟಿ.ವಿ. ಇವರು ಈ ಯಂತ್ರ ತಯಾರಿಸಿದ್ದಾರೆ. ಇದರ ಅಂದಾಜು ವೆಚ್ಚ ರೂ. ೪,೦೦೦ ಮಾತ್ರ.

## ೪. ಕಟ್ಟಿಗೆಯಲ್ಲಿ ಚೌಕಾಕಾರದ ರಂಧ್ರ ಕೊರೆಯುವ ಯಂತ್ರ

ಕೃಷಿ ಸಲಕರಣೆಗಳನ್ನು ತಯಾರಿಸುವ ಬಡಿಗರಿಗೆ ಇದು ಸಹಕಾರಿಯಾಗಿದೆ. ಕಟ್ಟಿಗೆಯಲ್ಲಿ ಈಗ ಕೇವಲ ವೃತ್ತಾಕಾರದ ರಂಧ್ರಗಳನ್ನು ಕೊರೆಯುವ ಯಂತ್ರ ಮಾರುಕಟ್ಟೆಯಲ್ಲಿ ಲಭ್ಯವಿದೆ. ಚೌಕಾಕಾರದ ರಂಧ್ರವನ್ನು ಕೊರೆಯುವ ಯಾವುದೇ ಯಂತ್ರ ಈಗ ಲಭ್ಯವಿಲ್ಲ. ಎಸ್‌ಟಿಜೆಐಟಿ ವಿದ್ಯಾರ್ಥಿಗಳು ಈ ಯಂತ್ರ ತಯಾರಿಸುವಲ್ಲಿ ಯಶಸ್ವಿಯಾಗಿದ್ದಾರೆ. ಪ್ರೊ. ಸಿ.ಆರ್. ವೆಂಕಟರಮಣ ಅವರ ಮಾರ್ಗದರ್ಶನದಲ್ಲಿ ವಿದ್ಯಾರ್ಥಿಗಳಾದ ಗಣಪತಿ ಬಿವಸೆ, ಸುರೇಶ್ ಆಚಾರ್, ಪ್ರಸಾದ್ ಜೆ. ಇವರು ಈ ಯಂತ್ರ ತಯಾರಿಸಿದ್ದು, ಇದರ ಅಂದಾಜು ವೆಚ್ಚ ೩,೫೦೦ ರೂ.ಗಳು.

ಮೇಲಿನ ಯಂತ್ರಗಳ ಮಾದರಿಗಳನ್ನು ಪ್ರಸಿದ್ಧ ಕಂಪನಿಗಳು ಬಳಸಿಕೊಂಡು ಹೆಚ್ಚಿನ ಪ್ರಮಾಣದಲ್ಲಿ ಉತ್ಪಾದಿಸಿದರೆ ಸದ್ಯೋಭವಿಷತ್ತಿನಲ್ಲಿ ರೈತರಿಗೆ ಇವು ವರವಾಗಬಲ್ಲವು. ಇಂಜನಿಯರಿಂಗ್ ವಿದ್ಯಾರ್ಥಿಗಳ ಈ ಪ್ರಯತ್ನ ಮುಂದಿನ ಸಂಶೋಧನಾಕಾಂಕ್ಷಿಗಳಿಗೆ ಪ್ರೇರಣೆ ನೀಡುವಂತಹುದಾಗಿದೆ.

●



## ಕೋಚೆ ಚಿಂತನ

○ ಕೋ. ಚೆನ್ನಬಸಪ್ಪ
ನಿವೃತ್ತ ನ್ಯಾಯಾಧೀಶರು
೧೨೭, ಪಶ್ಚಿಮ ಕಾರ್ಡ್ ರಸ್ತೆ, ಮಹಾಲಕ್ಷ್ಮೀಪುರ,
ಬೆಂಗಳೂರು - ೫೬೦ ೦೮೬

# ದಲಿತ ಕಬ್ಬಿಣವೂ ಶರಣ ಚಿನ್ನವಾದೀತು!

**ಒಂದು ಬಿಂದಿಗೆ ಉಪ್ಪು ನೀರನ್ನು ರಸಾಯನಿಕ ಕ್ರಿಯೆಯಿಂದ ಕುಡಿಯುವ ನೀರನ್ನಾಗಿ ಪರಿವರ್ತಿಸಲು ಸಾಧ್ಯ.**

**ಆಂ**ಧ್ರ ಪ್ರದೇಶದ ಮಾದಿಗ ಮೀಸಲಾತಿ ಹೋರಾಟ ಸಮಿತಿ ಹೂಡಿದ್ದ ಹೋರಾಟವನ್ನು ಮನ್ನಿಸಿ, ಚಂದ್ರಬಾಬುನಾಯ್ಡು ಸರ್ಕಾರ ರಾಜ್ಯದಲ್ಲಿರುವ ಮಾದಿಗ, ಮಾಲ ಜನರ ಪ್ರಜಾಸಂಖ್ಯೆಯ ಆಧಾರದ ಮೇಲೆ, ದಾಮಾಶಾ ಪ್ರಕಾರ ಎಸ್.ಸಿ., ಎಸ್.ಟಿ. ಜನರಿಗೆ ಮೀಸಲಾದ ಶೇಕಡಾ ೧೫ ಸ್ಥಾನಗಳನ್ನು - ಮಾದಿಗರಿಗೆ ೭, ಮಾಲಾ ಜನರಿಗೆ ೬, ಉಳಿದ ಎರಡನ್ನು ಇತರ ಎಸ್.ಟಿ., ಎಸ್ಸಿ., ಜನರಿಗೆ ಹಂಚಿ ಆಜ್ಞೆ ಹೊರಡಿಸಿತ್ತು. ಈ ಮೀಸಲಾತಿ ಆಜ್ಞೆಗಾಗಿ ಎಸ್.ಟಿ., ಎಸ್.ಸಿ., ಜನರನ್ನು ನಾಲ್ಕು ಗುಂಪುಗಳಾಗಿ ವಿಂಗಡಿಸಲಾಗಿತ್ತು. ಈ ಆಜ್ಞೆ ಹೊರಬಿದ್ದೊಡನೆ ಮಾದಿಗ ಮೀ.ಪೊ. ಸಮಿತಿ ಸರ್ಕಾರವನ್ನು ಅಭಿನಂದಿಸಿತು.

ಆದರೆ ಮಾಲ ಮಹಾನಾಡು ಸಂಘ ಈ ಸರ್ಕಾರಿ ಆಜ್ಞೆಯನ್ನು ಪ್ರತಿಭಟಿಸಿ ಆಂಧ್ರ ಪ್ರದೇಶಾದ್ಯಂತ ಪ್ರದರ್ಶನ ನಡೆಸಿತು. ಈ ಆಜ್ಞೆ ಸಂವಿಧಾನ ಬಾಹಿರವೆಂದು ಆಂಧ್ರ ಪ್ರದೇಶ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ದಾಖಲು ಮಾಡಿತು. ಉಚ್ಚ ನ್ಯಾಯಾಲಯದ ಪೂರ್ಣಪೀಠ ಸೆಪ್ಟಂಬರ್ ೧೮ರಂದು ಸರ್ಕಾರಿ ಆಜ್ಞೆ ಸಂವಿಧಾನ ಬಾಹಿರವೆಂದು ಘೋಷಿಸಿ ಅದನ್ನು ರದ್ದುಪಡಿಸಿತು. ಉಚ್ಚ ನ್ಯಾಯಾಲಯದ ತೀರ್ಪು ಬಂದೊಡನೆ ಮಾಲ ಮಹಾನಾಡು ಸಂಘ ಹರ್ಷೋದ್ಗಾರ ತೆಗೆದು ಅದನ್ನು ಸ್ವಾಗತಿಸಿತು! ಸಹಜವಾಗಿ ಮಾದಿಗರ ಮೀಸಲಾತಿ ಹೋರಾಟ ಸಮಿತಿಗೆ ಅಸಮಾಧಾನವಾಯಿತು. ಅವರು ಮತ್ತೆ ಮುಖ್ಯ ಮಂತ್ರಿಗಳ ಬೆನ್ನು ಹತ್ತಿದರು! ಮಾದಿಗರ ಮುಖಂಡರಾದ ಕೃಷ್ಣಮಾದಿಗ, ಶಾಸಕ ನರಸಿಂಹಲು ಮುಖ್ಯಮಂತ್ರಿಗಳಿಗೆ ಮನವಿ ಅರ್ಪಿಸಿ, ತಮ್ಮ ಸಂಖ್ಯಾ ಬಲಕ್ಕೆ ತಕ್ಕಂತೆ ಮೀಸಲಾತಿ ಸೌಲಭ್ಯ ನೀಡಲೇಬೇಕೆಂದು ತಗಾದೆ ತಂದರು-ಇದು ಸೆಪ್ಟಂಬರ್ ೨೦ರಂದು, ಶುಕ್ರವಾರ.

ತಮಾಷೆಯ ಸಂಗತಿಯೆಂದರೆ ಸೆಪ್ಟಂಬರ್ ೨೨ರಂದು ಭಾನುವಾರ ಮಾಲ ಮತ್ತು ಮಾದಿಗರ ಮುಖಂಡರು ಇಬ್ಬರೂ ಘನ ಘೋರ ಚಳವಳಿ ಹೂಡುವುದಾಗಿ ತೀವ್ರ ಎಚ್ಚರಿಕೆ ಕೊಟ್ಟರು. ಕಾರಣ ಸರ್ಕಾರ ಮಾಲ ಮತ್ತು ಮಾದಿಗರನ್ನು ವಿಭಜಿಸಿ ಎಸ್.ಸಿ., ಜನರನ್ನು ಒಡೆದು ದುರ್ಬಲಗೊಳಿಸುತ್ತಿದ್ದಾರೆ ಎಂದು!! ಮಾದಿಗರಿಗೆ ಸಂಖ್ಯಾಬಲಕ್ಕೆ ತಕ್ಕಂತೆ ದಾಮಾಶಾ ಪ್ರಕಾರ ಮೀಸಲಾತಿ ಬೇಕೆಂದವರೂ ಅವರೆ! ಅವರ ಬೇಡಿಕೆಯನ್ನು ಮನ್ನಿಸಿ-ಅದು ಅಂಕಿ ಸಂಖ್ಯೆಗಳ ಆಧಾರದ ಮೇಲೆ ಸಾಬೀತಾಗಿರುವುದನ್ನು ಮನಗಂಡು ಸರ್ಕಾರ ಅವರ ಇಚ್ಛೆಯಂತೆ ಆಜ್ಞೆಯನ್ನು ಹೊರಡಿಸಿತ್ತು. ಆಜ್ಞೆ ರದ್ದಾದ ಮೇಲೆ ಮತ್ತೆ ರಾಷ್ಟ್ರೀಯ ಎಸ್.ಟಿ., ಎಸ್.ಸಿ. ಆಯೋಗದೊಡನೆ ಸಮಾಲೋಚನೆ ನಡೆಸಿ ಮತ್ತೆ ಮಾದಿಗರಿಗೆ ನ್ಯಾಯ ದೊರಕಿಸಿಕೊಡಬೇಕೆಂದು ಹೋರಾಟ ಹೂಡುವುದಾಗಿ ಬೆದರಿಕೆ ಹಾಕುವವರೂ ಅವರೆ! ಈಗ ಮಾಲ-ಮಾದಿಗರನ್ನು ಒಡೆದು ದುರ್ಬಲಗೊಳಿಸುತ್ತಾರೆಂದು ಆಪಾದಿಸುವವರೂ ಅವರೆ! ಹೇಗಿದೆ ತರ್ಕ? ಇದನ್ನು ಅರ್ಥ ಮಾಡಿಕೊಳ್ಳುವುದು ಎಂಥ ಮೇಧಾವಿಗೂ ಸಾಧ್ಯವಿಲ್ಲ! ಬಹುಶಃ ಅಂಬೇಡ್ಕರ್ ಈ ಧೋರಣೆಗೆ ಏನು ಹೇಳುತ್ತಿದ್ದರು? ಈ ವಿಷಯವಾಗಿ ದಲಿತರಲ್ಲದವರು ಏನಾದರೂ ಪ್ರತಿಕ್ರಿಯಿಸಿದರೆ ಏನಾದೀತು?

ಆಂಧ್ರಪ್ರದೇಶದ ಈ ಆಜ್ಞೆ ಬಂದಾಗ - 'ಅಳು ತಾಯಿ ಅಳು' ಎಂಬ ಲೇಖನ ಬರೆದಿದ್ದೆ. ಆ ಅಂಕಣವನ್ನು ಓದಿದ ನಮ್ಮ ರಾಜ್ಯದ ಎಡಗೈ ದಲಿತ ನಾಯಕರೊಬ್ಬರು ಅಸಮಾಧಾನ ವ್ಯಕ್ತಪಡಿಸಿ, ಆಂಧ್ರ ಸರ್ಕಾರದಂತೆ ಕರ್ನಾಟಕ ರಾಜ್ಯವೂ ಎಡಗೈ ದಲಿತರಿಗೆ ಪ್ರತ್ಯೇಕ ಮೀಸಲಾತಿ ಆಜ್ಞೆ ಮಾಡಬೇಕೆಂದು ಹೇಳಿದರು! ಹಿಂದೆ ದಿವಂಗತ ಎನ್.ರಾಚಯ್ಯನವರ ವಾದವನ್ನು ಅವರು ಸಮರ್ಥಿಸಿದ್ದರು. ಆ ವಾದ ನ್ಯಾಯವೆ ಎಂದು ನಾನೂ ಒಪ್ಪಿದ್ದೆ. ಆದರೂ ಮೀಸಲಾತಿ ಆಜ್ಞೆಯಿಂದ ದೇಶದ ಜನರನ್ನು ಜಾತಿ,ಉಪಜಾತಿ, ಉಪಉಪಜಾತಿ....ಎಂದು ವಿಂಗಡಿಸುತ್ತಾ ಹೋದರೆ ಈ ದೇಶ ಯಾರದಾದೀತು? ಅಂದರೆ ಮೀಸಲಾತಿಯೆ ದಲಿತೋದ್ಧಾರದ ಏಕಮಾತ್ರ ಪರಿಹಾರವಲ್ಲ ಎಂಬುದು ಮೂಲ ಸತ್ಯ.

ಸಾಮಾಜಿಕ ಸರಿಸಮಾನತೆಯನ್ನು ಸ್ಥಾಪಿಸಲು ಮೀಸಲಾತಿ ಒಂದು ಸಣ್ಣ ಮತ್ತು ಕ್ಷಣಿಕ ಮತ್ತು ದುರ್ಬಲ ಪ್ರಯತ್ನ ಎಂಬುದನ್ನು ಡಾ. ಅಂಬೇಡ್ಕರ್ ಸಂವಿಧಾನದಲ್ಲೆ

ಅಳವಡಿಸಿದರು. ಈ ಮೀಸಲಾತಿ ಸೌಕರ್ಯ ಕೇವಲ ಹತ್ತು ವರ್ಷಗಳವರೆಗೆ ಮಾತ್ರ ಇರತಕ್ಕದ್ದು ಎಂದು ಠರಾಯಿಸಲಾಗಿತ್ತು. ಆದರೆ ಐವತ್ತು ವರ್ಷಗಳಾದರೂ ಮೀಸಲಾತಿ ಮುಂದುವರಿದೇ ಇದೆ. ಎಲ್ಲಿಯವರೆಗೆ ಸಾಮಾಜಿಕ ಸರಿಸಮಾನತೆ ಉಂಟಾಗುವುದಿಲ್ಲವೊ ಅಲ್ಲಿಯವರೆಗೂ - ಶತಮಾನವೆ ಆಗಲೊಲ್ಲದೇಕೆ - ಮುಂದುವರಿಯಲೇ ಬೇಕು ಎಂಬುದೂ ಒಂದು ವಾದ.

ಆದರೆ ಮೀಸಲಾತಿಯಿಂದಲೆ ಸಾಮಾಜಿಕ ಸರಿಸಮಾನತೆ ಸುತರಾಂ ಸಾಧ್ಯವಿಲ್ಲ ಎಂಬುದು ಶೇ. ೧೦೦ರಷ್ಟು ಸತ್ಯ! ಕೇವಲ ಸರ್ಕಾರಿ ನೌಕರಿ-ಶಿಕ್ಷಣ ಪ್ರವೇಶದ ಮೀಸಲಾತಿಯಿಂದಲೆ ಸರಿಸಮಾನತೆ ಸಾಧ್ಯವಾಗುತ್ತಿದ್ದರೆ ಮಾಲ ಮತ್ತು ಮಾದಿಗರಲ್ಲೆ - ಎಡಗೈ ಬಲಗೈ -ಸರಿಸಮಾನತೆ ಮೂಡುತ್ತಿತ್ತು. ಆದರೆ ಹಾಗೆ ಆಗಿಲ್ಲ ಎಂಬುದನ್ನು ಅವರೆ ಅಲ್ಲಗಳೆಯಲಾರರು. ೧೯೭೨-೭೪ರಲ್ಲಿ ನಾನು ವಿಜಾಪುರದಲ್ಲಿದ್ದಾಗ ಒಂದು ಘಟನೆ ನಡೆದಿತ್ತು. ಪೋಲೀಸ್ ಕ್ವಾರ್ಟರ್ಸ್‌ನಲ್ಲಿದ್ದ ಸಾಮೂಹಿಕ ನಲ್ಲಿಯಿಂದ ನೀರು ಹಿಡಿದುಕೊಂಡು ಹೋಗುವ ಬಗ್ಗೆ ಎಡಗೈ-ಬಲಗೈ ಮಹಿಳೆಯರಿಬ್ಬರಲ್ಲಿ ಜಗಳವಾಗಿತ್ತು. ಮಾದಿಗರ ಹೆಣ್ಣು ಮಗಳು ನಲ್ಲಿಯಿಂದ ನೀರು ಹಿಡಿದುಕೊಂಡ ಮೇಲೆ ಹೊಲೆಯರ ಹೆಣ್ಣು ಮಗಳು ನೀರು ಹಿಡಿಯಲು ಬಂದಾಗ, ನಲ್ಲಿಯನ್ನು ತೊಳೆದು, ಬಿಂದಿಗೆ ಇಡುವ ಜಾಗದ ಮೇಲೆ ನೀರು ಸುರಿದು ಶುದ್ಧಗೊಳಿಸಿದಳಂತೆ. ಇದನ್ನು ಕಂಡ ಮಾದಿಗರ ಹೆಣ್ಣು ಮಗಳು ಆಕ್ಷೇಪಿಸಿದಳು. ಇಬ್ಬರಿಗೂ ಜಗಳವಾಯಿತು. ಅವರ ಗಂಡಂದಿರು ಬಡಿದಾಡಿ ಮಾರಾಮಾರಿ ಆಯಿತು. ಫಿರ್ಯಾದಿ ದಾಖಲಾಗಿ, ಇಬ್ಬರನ್ನೂ ರಾತ್ರಿ ಸಿ.ಜೆ.ಎಂ. ಮುಂದೆ ಹಾಜರುಪಡಿಸಿದ್ದರು. ಅವರನ್ನು ರಿಮಾಂಡ್ ಮಾಡಿದರೆ ನೌಕರಿಗೆ ಸಂಚಕಾರ ಬಂದೇಬರುತ್ತದೆ ಎಂದು, ಸಿ.ಜೆ.ಎಂ., 'ಏನು ಮಾಡಲಿ?' ಎಂದು ನನ್ನನ್ನು ಕೇಳಿದರು. ಬೆಳಗಿನ ತನಕ ಸ್ಟೇಷನ್ನಿನಲ್ಲೇ ಇಟ್ಟುಕೊಂಡು ಮರುದಿನ ನ್ಯಾಯಾಲಯದ ಮುಂದೆ ಹಾಜರುಪಡಿಸುವಂತೆ ಬಾಯ್ಮಾತಿನಲ್ಲಿ ಹೇಳಿ ಕಳಿಸಲು ಸೂಚಿಸಿದೆ. ಮರುದಿನ ಬೆಳಿಗ್ಗೆ, ಉನ್ನತ-ಪೊಲೀಸ್ ಅಧಿಕಾರಿಗೆ ಈ ವಿಚಾರ ತಿಳಿಸಿ ಫಿರ್ಯಾದಿ ಹಿಂತೆಗೆದುಕೊಂಡು ಮುಕ್ತಾಯ ಮಾಡಲಾಯಿತು. ಆ ಇಬ್ಬರೂ ಪೇದೆಗಳೂ ಮೀಸಲಾತಿಯಿಂದಲೆ ಸರ್ಕಾರಿ ನೌಕರಿ ಸೇರಿಕೊಂಡಿದ್ದರು! ಸರ್ಕಾರಿ ನೌಕರಿಯಿಂದ ಸಾಮಾಜಿಕ ಸರಿಸಮಾನತೆ ಸಾಧ್ಯವಾಗುವಂತಿದ್ದರೆ ಅವರೇಕೆ ಬಡಿದಾಡುತ್ತಿದ್ದರು?



ಚೆಲ್ವಾಣ ಸಿದ್ಧರಾಮ ಶರಣ

ಇನ್ನೊಂದು ಘಟನೆ. ನನ್ನ ಮಗಳ ಗೆಳತಿಯಾಗಿದ್ದ ಬಲಗೈ ಪಂಗಡಕ್ಕೆ ಸೇರಿದ್ದ ಒಬ್ಬ ಹುಡುಗಿ ಎಂ.ಎ., ಪದವೀಧರೆ. ಒಬ್ಬ ಎಡಗೈ ಎಂ.ಎ., ಪದವೀಧರನನ್ನು ತಂದೆ ತಾಯಿಗಳ ವಿರೋಧವನ್ನು ಲೆಕ್ಕಿಸದೆ ಮದುವೆ ಆಗಿದ್ದಳು. ತಂದೆ ತಾಯಿಗಳು ಯಾರೂ ಮದುವೆಗೆ ಬಂದಿರಲಿಲ್ಲ. ಆ ಹುಡುಗಿ ಯಾವುದೇ ನೌಕರಿ ಹಿಡಿದು ಸಂಪಂಗಿರಾಮ ನಗರದಲ್ಲಿ ಸಣ್ಣ ಕೊಠಡಿಯಲ್ಲಿ ನಿರುದ್ಯೋಗಿ ಗಂಡನೊಡನೆ ಇದ್ದಳು. ಗಂಡನಿಗೆ ಏನಾದರೂ ನೌಕರಿ ಕೊಡಿಸಲು ಸಾಧ್ಯವೋ ಎಂದು ಆಗಾಗ ಇಬ್ಬರೂ ಬರುತ್ತಿದ್ದರು. ಒಂದು ದಿನ ಆ ಹುಡುಗಿ ಬಂದು ಬೋರಿಟ್ಟು ಅತ್ತಳು. ಏನೆಂದು ವಿಚಾರಿಸಲಾಗಿ ಆ ದಿನ ಬೆಳಗ್ಗೆ ಆಕೆ ಬಸ್‌ನಿಲ್ದಾಣಕ್ಕೆ ಹೋಗಿದ್ದಾಗ, ಅವಳ ತಂದೆ ಎಲ್ಲಿಂದಲೊ ಬಂದು ಕಂಡಾಬಟ್ಟೆ ಬಡಿದರೆಂದು ಹೇಳಿದಳು. ಆ ತಂದೆ ನಿವೃತ್ತ ಉಪಾಧ್ಯಾಯರಂತೆ!! ಬಲಗೈವರಾದ ತಮ್ಮ ಮಗಳು ಎಡಗೈ ಯುವಕನನ್ನು ಮದುವೆ ಆದದ್ದು ಅವರಿಗೆ ಸಹನೆ ಆಗಿರಲಿಲ್ಲ! ವಿದ್ಯಾವಂತರಾದ ಆ ನಿವೃತ್ತ ಉಪಾಧ್ಯಾಯರಿಗೆ ಎಡಗೈಯವರೊಡನೆ ಸರಿಸಮಾನರೆಂದು ಭಾವಿಸುವುದು ಸಾಧ್ಯವಾಗಿರಲಿಲ್ಲ.

ವಿದ್ಯಾವಂತರಾದ, ಸರ್ಕಾರಿ ನೌಕರಿಯಲ್ಲಿರುವ ದಲಿತರಲ್ಲೆ ಒಳಪಂಗಡಗಳಲ್ಲಿ ಸರಿಸಮಾನತೆ ಸಾಕಷ್ಟು ಪ್ರಮಾಣದಲ್ಲಿ ಸಾಧನೆ ಆಗಿಲ್ಲ. ಹಳ್ಳಿಗಳಲ್ಲಿ ಇಂದಿಗೂ ಸಾಮಾಜಿಕ ಸರಿಸಮಾನತೆ ಎಂಬುದು ಎಷ್ಟರಮಟ್ಟಿಗೆ ಸಾಧ್ಯವಾಗಿದೆ ಎಂಬುದನ್ನು ದಲಿತ ಮುಖಂಡರೆ ಎದೆಯ ಮೇಲೆ ಕೈಯಿಟ್ಟು ಪ್ರಾಮಾಣಿಕವಾಗಿ ಪರಾಮರ್ಶೆ ಮಾಡಲಿ. ಮೀಸಲಾತಿ ಸೌಲಭ್ಯದಿಂದ ವೈದ್ಯರು, ಇಂಜನಿಯರುಗಳು, ಐ.ಎ.ಎಸ್., ಐ.ಪಿ.ಎಸ್., ಆದ ಅಧಿಕಾರಿಗಳು ಹಳ್ಳಿಗಳಲ್ಲಿರುವ ದಲಿತರ ದುರವಸ್ಥೆಯನ್ನು ಎಷ್ಟರ ಮಟ್ಟಿಗೆ ನೀಗಿಸಿದ್ದಾರೆ? ಪಟ್ಟಣ ಶಹರಗಳಲ್ಲಿ ಅಸ್ಪೃಶ್ಯತಾ ಸಮಸ್ಯೆ ಅಷ್ಟೊಂದು ಎದ್ದು ಕಾಣದಿರಬಹುದು. ಆದರೆ ಹಳ್ಳಿಗಳಲ್ಲಿ ಹೇಗಿದೆ? ೧೯೫೫ರಲ್ಲಿ ಜಾರಿಗೆ ಬಂದ ನಾಗರಿಕ ಹಕ್ಕುಗಳ ಕಾಯಿದೆ (Civil Rights Act of 1955) ಅಥವಾ ೧೯೮೯ರಲ್ಲಿ ಬಂದ ಅದಕ್ಕಿಂತಲೂ ಘೋರತರವಾದ ಎಸ್.ಸಿ., ಎಸ್.ಟಿ. (ದೌರ್ಜನ್ಯ ಪ್ರತಿಬಂಧಕ) ಕಾಯಿದೆ ಆಗಲಿ ನಮ್ಮ ಜನರ ರಕ್ತದ ಅಣು ಅಣುವಿನಲ್ಲಿಯೆ ಇರುವ ಜಾತಿಮೂಲ ತಾರತಮ್ಯ, ಸಮಾಜಿಕ ಅಸಮಾನತೆಯನ್ನು



ಹೋಗಲಾಡಿಸಲು ಸಾಧ್ಯವಾಗಿಲ್ಲ. ಅಂದರೆ ಕೇವಲ ಶಾಸನದಿಂದಲೆ ಬಡತನವನ್ನಾಗಲಿ, ಸಾಮಾಜಿಕ ಅಸಮಾನತೆಯನ್ನಾಗಲಿ, ನಿರುದ್ಯೋಗವನ್ನಾಗಲಿ ಸಂಪೂರ್ಣ ಹೋಗಲಾಡಿಸಲು ಸಾಧ್ಯವಾಗದು ಎಂಬುದು ತೇಲುವ ಸತ್ಯ.

ಹಾಗಾದರೆ ಇದಕ್ಕೆ ಪರಿಹಾರ ಇಲ್ಲವೆ? ನಮ್ಮ ದೇಶದ ೩೦೦೦ ವರ್ಷಗಳ ಲಿಖಿತ ಇತಿಹಾಸವನ್ನು ನೋಡಿದರೆ ಈ ಸಮಸ್ಯೆ ಈಗ ಇರುವುದಕ್ಕಿಂತಲೂ ಘೋರತರವಾಗಿ ಹಿಂದೆ ಇತ್ತು. ಆ ಸಮಸ್ಯೆಯನ್ನು ಪರಿಹರಿಸಲು ಆಗಾಗ ಅವತರಿಸಿದ ಪುಣ್ಯ ಪುರುಷರು ಪ್ರಯತ್ನಿಸುತ್ತಲೆ ಬಂದಿದ್ದಾರೆ. ಎರಡುವರೆ ಸಾವಿರ ವರ್ಷಗಳ ಹಿಂದೆ ಬುದ್ಧನಿಂದ ಹಿಡಿದು ಈ ಶತಮಾನದ ಗಾಂಧೀ ಅಂಬೇಡ್ಕರ್‌ವರೆಗೆ ಈ ಸಮಸ್ಯೆಯ ಪರಿಹಾರಕ್ಕೆ ಶ್ರಮಿಸಿದ್ದಾರೆ. ಬುದ್ಧ ಬಸವ ಬಾಪೂ ಗಣನೀಯವಾದ ಪರಿಹಾರ, ಪ್ರಗತಿ ಸಾಧಿಸಿದ್ದಾರೆ. ರಾಮಾನುಜರಂತೆ ಕ್ರಾಂತಿಕಾರಿ ಬದಲಾವಣೆಯನ್ನು ಕಿಂಚಿತ್ ಪ್ರಮಾಣದಲ್ಲಿ ಸಾಧಿಸಿದ್ದಾರೆ. ವ್ಯಾಸರಾಯರಂತೆ ಕನಕನನ್ನು ದಾಸವರೇಣ್ಯರನ್ನಾಗಿ ಮಾಡಿದ ಅಪರೂಪದ ಪರಿವರ್ತನೆಯನ್ನೂ ಮಾಡಿದ್ದಾರೆ. ಆದರೂ ಈ ಸಮಸ್ಯೆ ಇಂದಿಗೂ ಗಣನೀಯ ಪ್ರಮಾಣದಲ್ಲಿ ಇದ್ದೆ ಇದೆ. ಪ್ರಯತ್ನ ನಡೆಯುತ್ತಲೆ ಇದೆ.

ಸಾಮಾಜಿಕ ಸರಿಸಮಾನತೆಯನ್ನು ಸಾಧಿಸಲು ಮಂಡಲ ವರದಿ, ದೌರ್ಜನ್ಯ ಪ್ರತಿಬಂಧಕ ಕಾಯಿದೆ, ನಾಗರಿಕ ಹಕ್ಕುಗಳ ಕಾಯಿದೆ.... ಈ... ಸರ್ಕಾರೀ ಯಂತ್ರದ ಪರಿಹಾರವೆ ಏಕಮಾತ್ರ ಉಪಾಯವಲ್ಲ. ಬಹುಶಃ ಪರಿಣಾಮಕಾರಿಯಾದ ಮಾರ್ಗವೂ ಅಲ್ಲ. ಅದಕ್ಕೆ ಬೇಕು - ಮಾನವನ ಮಾನಸಿಕ, ಬೌದ್ಧಿಕ ಪರಿವರ್ತನೆ, ಆಮೂಲಾಗ್ರವಾದ ಪರಿವರ್ತನೆ. ಅಂಥ ಆಮೂಲಾಗ್ರ ಪರಿವರ್ತನೆಯ ಕೇವಲ ಒಂದು ಉದಾಹರಣೆ ಭಾಲ್ಕಿ ಪಟ್ಟದ್ದೇವರು ಮತ್ತು ಬೆಲ್ದಾಳ ಸಿದ್ಧರಾಮ ಶರಣರ ಜೀವನ. ಹಿಂದೆ ಬಸವಣ್ಣನ ಕಾಲದಲ್ಲಿ ಕಂಡಿದ್ದ ಅಸಂಖ್ಯಾತ ಶರಣ ಸಂಕುಲ - ಮಾದಾರ ಚೆನ್ನಯ್ಯನ ಆದಿಯಾಗಿ - ಈಗಲೂ ಸಾಧ್ಯ ಎಂಬುದಕ್ಕೆ ಈ ಮಹಾಮಹಿಮರು ಜೀವಂತ ಸಾಕ್ಷಿಯಾಗಿದ್ದಾರೆ! ಬೆಲ್ದಾಳ ಸಿದ್ಧರಾಮ ಶರಣರು ಯಾರೋ ಒಬ್ಬರು ಅವತಾರ ಪುರುಷ ಎಂದು ಅವರ ಪಾದಕ್ಕೆ ಬಿದ್ದು ದೂರದಿಂದ ಕೈಮುಗಿಯುವ ಪವಾಡವಲ್ಲ, ಪ್ರಯತ್ನಿಸಿದರೆ ಈಗಲೂ ಅಸಂಖ್ಯಾತ ಸಿದ್ಧರಾಮ ಶರಣರು ಸಿದ್ಧರಾದಾರು. ಇದು ಅಸಾಧ್ಯವಲ್ಲ; ಅಸಂಭವವೂ ಅಲ್ಲ. ಒಂದು ಬಿಂದಿಗೆ ಉಪ್ಪು ನೀರನ್ನು ರಸಾಯನಿಕ ಕ್ರಿಯೆಯಿಂದ ಕುಡಿಯುವ ನೀರನ್ನಾಗಿ ಪರಿವರ್ತಿಸಲು ಸಾಧ್ಯವಾದರೆ ಒಂದು ಕೊಪ್ಪರಿಗೆ ಉಪ್ಪು ನೀರನ್ನು ಕುಡಿಯುವ ನೀರನ್ನಾಗಿ ಪರಿವರ್ತಿಸಲು ಸಾಧ್ಯ. ಇದು ಸಾಧ್ಯವೆ ಮಾತ್ರವಲ್ಲ ಅನಿವಾರ್ಯವೂ ಕೂಡ. ಈಗ ಮಧ್ಯ ಪ್ರಾಚ್ಯ ಅರೇಬಿಯಾ ರಾಜ್ಯಗಳು ಸಮುದ್ರದ ನೀರನ್ನು ಪರಿವರ್ತಿಸಿ ನೀರಾವರಿಗೆ ಉಪಯೋಗಿಸುತ್ತಿರುವುದು ವಾಸ್ತವಾಂಶ ವಾಗಿದೆ. ಹಾಗೆಯೆ ಸಾಮಾಜಿಕ ಮಾನವ ಪರಿವರ್ತನೆಯೂ ಸಾಧ್ಯ. ಬಹು ಕಷ್ಟಕರವಾದ ಕೆಲಸವೆಂಬುದು ನಿಜ. ಅದಲ್ಲದೆ ಬೇರೆ ದಾರಿಯಾವುದಿದೆ?

ಮೂಲತಃ ಅರಿತುಕೊಳ್ಳಬೇಕಾದ ಸತ್ಯ: ಶಾಸನದ ಶಿಕ್ಷೆ ಈ ಮೀಸಲಾತಿ, ಸರ್ಕಾರಿ ನೌಕರಿ ಮಂಡಲ ನೀತಿ ಅನುಷ್ಠಾನವೆಂಬ ಸಾರ್ವತ್ರಿಕ 'ಸನ್ನಿವಾತ'ದಿಂದ ಕೆಲ ಮಟ್ಟಿಗೆ ಮುಕ್ತವಾಗಿ ಮಾನವ ಸ್ವಭಾವದ ಆಮೂಲಾಗ್ರ ಪರಿವರ್ತನೆಯ ಮೂಲ ಪ್ರಯತ್ನಕ್ಕೆ ಇಡೀ ಸಮಾಜ ರಾಜಕೀಯ ವಿಷವಾಯು ಜನಕ ಯಂತ್ರವನ್ನು ಸ್ವಲ್ಪ ಬದಿಗಿರಿಸಿ - ಹೆಗಲೊಡ್ಡ ಬೇಕು. ಹಾಗಾದರೇನೆ ಶಾಶ್ವತ ಪರಿಣಾಮ ಕಾರಿಯಾದ ಪರಿಹಾರ ಸಿಕ್ಕೀತು. ಆ ರಸವಿದ್ಯೆಯ ಮೂಲಕ ಕಬ್ಬಿಣವೂ ಚಿನ್ನವಾದೀತು. ದಲಿತರೂ ಶರಣರಾದಾರು. ●

# ಕ್ವಿಜ್-೪ ಬಹುಮಾನ ವಿಜೇತರು

## ಪ್ರಥಮ ಬಹುಮಾನ

ರೂ. ೫೦೦-೦೦

**ಸತೀಶ ಕುಮಾರ**
ಮಕ್ಕಿಮನೆ - ೫೭೬ ೨೧೭,
ಅಂಚೆ : ಕೋಣಿ
ತಾ : ಕುಂದಾಪುರ ಉಡುಪಿ ಜಿಲ್ಲೆ

## ದ್ವಿತಿಯ ಬಹುಮಾನ

ರೂ. ೨೦೦-೦೦

**ಭಾಗ್ಯರತ್ನಮ್ಮ ರೋಣದ**
ಡಾ. ಎಂ.ಎಸ್. ರೋಣದ
ಅಂಚೆ : ಅಬ್ಬಿಗೇರಿ - ೫೮೨ ೧೧೧
ತಾ : ರೋಣ ಜಿಲ್ಲೆ : ಗದಗ

## ಸಮಾಧಾನಕರ ಬಹುಮಾನಗಳು

**ತಲಾ ರೂ. ೧೦೦/-**

**ಎ.ಯು. ಪೂರ್ಣಿಮ**
D/o ಎ. ಉಜ್ಜಪ್ಪ, ಕಾಳಿಕಾಂಬ ಬೀದಿ,
ಸಂತೇಬೆನ್ನೂರು - ೫೭೭ ೫೫೨
ಚನ್ನಗಿರಿ ತಾ. ಶಿವಮೊಗ್ಗ ಜಿಲ್ಲೆ

**ನಾಭಿರಾಜ ಡಿ. ಅಕ್ಕಿ**
ಎನ್. ಡಿ. ಅಕ್ಕಿ
ಅಂಚೆ : ಗೋಗಿ - ೫೮೫ ೩೦೯
ಶಹಾಪುರ ತಾ. ಗುಲ್ಬರ್ಗಾ ಜಿಲ್ಲೆ

**ಶಾರದಾ**
C/o ಟಿ. ಪ್ರಭಾಕರ, ಅಲಂಪೂರ ಪೇಠ
ಇಲಕಲ್ಲ - ೫೮೭ ೧೫೪

### ಕ್ವಿಜ್ - ೪ರ ಸರಿಯುತ್ತರ

೧. ಅಮರಶಿಲ್ಪಿ ಜಕಣಾಚಾರಿ ೨. ಪಂಚಾಕ್ಷರಿ ಗವಾಯಿ
೩. ಉಡುಪಿ ೪. ಕರ್ನಾಟಕ ೫. ಚನ್ನಗಿರಿ

---

# ಕ್ವಿಜ್ - ೫

೧. 'ರಾಮಾಯಣ ದರ್ಶನಂ' ಹಸ್ತಪ್ರತಿ ಮುದ್ರಣ ವಿವಾದದಲ್ಲಿ ಸಿಲುಕಿದ ಕುವೆಂಪು ಅವರ ಮಗನ ಹೆಸರೇನು?

............................................................

೨. ''ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು'' ಪದ್ಯವನ್ನು ರಚಿಸಿದವರಾರು?

............................................................

೩. ಮೈಸೂರು ಜಿಲ್ಲೆಯ ಉಸ್ತುವಾರಿ ಸಚಿವರಾರು?

............................................................

೪. ಸಹರಾ ಕಪ್ ಸರಣಿಯ ಎರಡನೇ ಪಂದ್ಯದ ಅಂತಿಮ ಘಟ್ಟದಲ್ಲಿ ಸಿಕ್ಸರ್ ಬಾರಿಸಿ ಭಾರತಕ್ಕೆ ಜಯ ದೊರಕಿಸಿದ ಆಟಗಾರ ಯಾರು?

............................................................

೫. ಸಂಯುಕ್ತ ಕರ್ನಾಟಕ ದಿನಪತ್ರಿಕೆ ಪ್ರಕಟಿಸುವ ಟ್ರಸ್ಟ್‌ನ ಹೆಸರೇನು?

............................................................

ಹೆಸರು............................................................
ವಿಳಾಸ............................................................
............................................................
............................................................
ಪಿನ್ ಕೋಡ್.............................. ದೂರವಾಣಿ..............................
ಪ್ರವೇಶ ಪತ್ರಗಳನ್ನು ಕಳುಹಿಸಬೇಕಾದ ವಿಳಾಸ :
ಸಂಪಾದಕರು, **ಬಿಸಿಲ ಬದುಕು,** ಅಂಚೆ ಪೆಟ್ಟಿಗೆ ೭೯೫೧, ಬಸವೇಶ್ವರ ನಗರ, ಬೆಂಗಳೂರು-೭೯.

| | |
|---|---|
| ಮೊದಲ ಬಹುಮಾನ | ರೂ. ೫೦೦/- |
| ಎರಡನೇ ಬಹುಮಾನ | ರೂ. ೨೦೦/- |
| ಸಮಾಧಾನಕರ ಬಹುಮಾನಗಳು (ಮೂರು) | ರೂ. ೧೦೦/- |

**ವಿವರ :**

- ಪಕ್ಕದಲ್ಲಿ ಕೇಳಿದ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ಆಯಾ ಪ್ರಶ್ನೆಯ ಕೆಳಗೆ ನೀಡಲಾದ ಸ್ಥಳದಲ್ಲಿ ಬರೆಯಿರಿ.
- ಒಬ್ಬರು ಎಷ್ಟು ಪ್ರವೇಶ ಪತ್ರಗಳನ್ನಾದರೂ ಕಳಿಸಬಹುದು. ಮುದ್ರಿತ ಕೂಪನ್ನನ್ನೇ ಬಳಸಬೇಕು. ಜೆರಾಕ್ಸ್ ಪ್ರತಿ ಪರಿಗಣಿಸುವುದಿಲ್ಲ.
- ಪ್ರಥಮ ಬಹುಮಾನ ಪಡೆದವರ ಭಾವಚಿತ್ರ ಪ್ರಕಟಿಸಲಾಗುವುದು.
- ಸರಿಯುತ್ತರಗಳ ಪ್ರವೇಶ ಪತ್ರಗಳನ್ನೆಲ್ಲಾ ಸೇರಿಸಿ ಲಾಟರಿ ಮೂಲಕ ಬಹುಮಾನಗಳನ್ನು ನಿರ್ಧರಿಸಲಾಗುವುದು.
- ಪ್ರವೇಶ ಪತ್ರ ತಲುಪಲು ಅಂತಿಮ ದಿನಾಂಕ ೧-೧೧-೧೯೯೭

# ಬಾಗಲಕೋಟೆ ವಾಸುದೇವ ಎನಾಮೆಲ್ ಇಂಡಸ್ಟ್ರೀಜ್




**ಬಾ**ಗಲಕೋಟೆಯಲ್ಲಿ ವಾಸುದೇವ ಎನಾಮೆಲ್ ಇಂಡಸ್ಟ್ರೀಜ್ ಎಂಬ ಬೋರ್ಡ್ ತಯಾರಿಕೆಯ ಘಟಕವೊಂದು ಸುಮಾರು ನಲವತ್ತು ವರ್ಷಗಳಿಂದ ತನ್ನ ವಿಶಿಷ್ಟ ಗುಣಮಟ್ಟದ ಫಲಕ ತಯಾರಿಕೆಯಲ್ಲಿ ಹೆಸರು ಪಡೆದಿದೆ. ಕರ್ನಾಟಕ ರಾಜ್ಯವಲ್ಲದೆ ನೆರೆ ರಾಜ್ಯಗಳಲ್ಲಿಯೂ ಈ ಫಲಕಗಳು ವಿರಾಜಿಸುತ್ತಿವೆ.

ಮೊದಲು 'ನವಭಾರತ ಸ್ಲೇಟ್ಸ್' ಎಂಬ ಹೆಸರಿನಲ್ಲಿ ಮಕ್ಕಳಿಗೆ ಉಪಯೋಗವಾಗುವ ಮತ್ತು ಬಾಳಿಕೆ ಬರುವ ಪಾಟಿಗಳನ್ನು ತಯಾರಿಸಿ ಜನಪ್ರಿಯತೆ ಹೊಂದಿತು. ನಂತರ 'ನವಭಾರತ ಎನಾಮೆಲ್ ಪೇಂಟಿಂಗ್ಸ್' ಎಂದು ವಿವಿಧ ತಯಾರಿಕೆಗಳನ್ನು ಪ್ರಾರಂಭಿಸಿತು. ೧೯೬೯ರಲ್ಲಿ

**ಈ ಘಟಕ ಬಹುಬಾಳಿಕೆ ಫಲಕಗಳ ತಯಾರಿಕೆಯಿಂದ ಖ್ಯಾತಿ ಪಡೆದಿದೆ**

'ವಾಸುದೇವ ಎನಾಮೆಲ್ ಇಂಡಸ್ಟ್ರೀಜ್' ಎಂದು ನಾಮ ಪರಿವರ್ತಿಸಿ ಬೋರ್ಡ್‌ಗಳ ತಯಾರಿಕೆಯನ್ನು ಆರಂಭಿಸಿತು.

ಇಲ್ಲಿ ಗ್ರಾಹಕರ ಅಪೇಕ್ಷೆಯಂತೆ ಆರ್ಡರ್ ಪಡೆದು ವಿಶಿಷ್ಟ ಪದ್ಧತಿಯಿಂದ ಬೋರ್ಡು ತಯಾರಿಸಲಾಗುತ್ತದೆ. ಎರಡು-ಮೂರು ಸಲ ಕೋಟಿಂಗ್ ಮಾಡಿಕೊಂಡು ವಿಶೇಷ ಎನಾಮೆಲ್ ವರ್ಣದಿಂದ ಸುಂದರ ಅಕ್ಷರಗಳ ಜೋಡಣೆ ಮಾಡಿ ಬೋರ್ಡ್‌ನ್ನು (ಪ್ಲೇಟ್) ೮೦೦ ರಿಂದ ೯೦೦ ಡಿಗ್ರಿ ಸೆಂಟಿಗ್ರೇಡ್ ತಾಪಮಾನದಲ್ಲಿ ಬಿಸಿ ಮಾಡಿ ವಿವಿಧ ಕ್ರಮದಲ್ಲಿ ಅಳವಡಿಸಿ ಗ್ಲೇಝಿ ಕೋಟಿಂಗ್ ಮಾಡಲಾಗುತ್ತದೆ. ಇವುಗಳ ರಚನೆಯಲ್ಲಿ ಹೆಚ್ಚುಪಾಲು ಕೈಕೆಲಸವಿದ್ದು, ಸೂರ್ಯ ಕಿರಣಕ್ಕೂ, ಮಳೆ-ಗಾಳಿ-ಬೆಂಕಿಗೂ ಒಗ್ಗುವ ಈ ಬೋರ್ಡ್‌ಗಳು ಮಿಂಚಿನಿಂದ ಕೂಡಿ ಆಕರ್ಷಕವಾಗಿರುತ್ತವೆ.

ಈ ಘಟಕ ಕರ್ನಾಟಕ ರಾಜ್ಯದ ಸಣ್ಣ ಕೈಗಾರಿಕಾ ಅಸೋಸಿಯೇಶನ್ ಬೆಂಗಳೂರು ಹಾಗೂ ಪ್ರೋಸೆಲೆನ್ ಎನಾಮೇಲ್ಲೇರ್ಸ್ ಅಸೋಸಿಯೇಶನ್ ಕಲ್ಕತ್ತದ ಸದಸ್ಯತ್ವವನ್ನು ಪಡೆದುಕೊಂಡಿದೆ.

ಈಗಾಗಲೇ ಕೇಂದ್ರ ಹಾಗೂ ರಾಜ್ಯ ಸರಕಾರದ ಕಚೇರಿಗಳ ಬೋರ್ಡ್‌ಗಳನ್ನು ತಯಾರಿಸಿ ಮನ್ನಣೆಗೆ ಪಾತ್ರವಾಗಿದೆ. ಅಂಚೆ ಇಲಾಖೆ, ದೂರಸಂಪರ್ಕ ಇಲಾಖೆ, ರೇಲ್ವೆ ಇಲಾಖೆ, ಪ್ರಾಚ್ಯವಸ್ತು ಸಂರಕ್ಷಣಾ ಇಲಾಖೆ ಮುಂತಾದ ಇಲಾಖೆಗಳ ಫಲಕಗಳನ್ನು ರಚಿಸಿದೆ.

ಸಂಯುಕ್ತ ಕರ್ನಾಟಕ, ಡೆಕ್ಕನ್‌ಹೆರಾಲ್ಡ್, ಟೈಮ್ಸ್ ಆಫ್ ಇಂಡಿಯಾ, ಕೆ.ಇ.ಬಿ., ಮೋದಿ ಥ್ರೆಡ್ಸ್, ಮಂಗಳೂರು ಕೆಮಿಕಲ್ಸ್, ಬಾಗಲಕೋಟೆ ಸಿಮೆಂಟ್, ಮೈಸೂರು ಸಿಮೆಂಟ್, ರಾಜ್ಯ ಹಣಕಾಸು ಸಂಸ್ಥೆ ಮುಂತಾದ ಸಂಸ್ಥೆಗಳು ಇವರ ನಿಯಮಿತ ಗ್ರಾಹಕರಾಗಿದ್ದಾರೆ.

ನಾಮಫಲಕ, ಶಾಲಾ - ಕಾಲೇಜ್ ಫಲಕ, ಸಂಘ-ಸಂಸ್ಥೆಗಳ ಫಲಕ, ಬ್ಯಾಂಕ್, ಕಾರ್ಖಾನೆಗಳ ಫಲಕ, ಸೂಚನಾಫಲಕ, ಸಂಚಾರಿ ಫಲಕ, ಸೈಟ್‌ಫಲಕ, ಶಾಲೆ - ಕಾಲೇಜುಗಳಲ್ಲಿ ಉಪಯುಕ್ತವಾಗುವ ಕಪ್ಪು ಹಲಗೆ (ಸ್ಲೇಟ್)ಗಳನ್ನು ಇವರು ವಿಶೇಷ ರೀತಿಯಲ್ಲಿ ತಯಾರಿಸುತ್ತಾರೆ. ಗ್ರಾಹಕರು ಅಪೇಕ್ಷಿಸಿದಂತೆ ಸುಂದರ ಅಕ್ಷರ ಹಾಗೂ ಚಿಹ್ನೆಯೊಂದಿಗೆ ವಿವಿಧ ಬಣ್ಣಗಳಲ್ಲಿ ಕನ್ನಡ, ಹಿಂದಿ, ಮರಾಠಿ, ಇಂಗ್ಲೀಷ್ ಮುಂತಾದ ಭಾಷೆಗಳಲ್ಲಿ ರಚಿಸಲಾಗುತ್ತದೆ.

ಹೀಗೆ ಬಾಗಲಕೋಟೆಯಲ್ಲಿ ಈ ಘಟಕ 'ಪಾಟಿ ಕಾರ್ಖಾನೆ' ಎಂದೆ ಜನಪ್ರಿಯವಾಗಿದೆ.

– ಸಿದ್ಧರಾಜ್ ಎಂ. ಕೆಂಧೂಳಿ

# ಹಗಲುಗನಸು ಕಾಣುವುದು ತಪ್ಪೇ?




○ 'ಕೃಶಾಂಗ'

## ಹೆಜ್ಜೆ - ೪

ನಿಮ್ಮ ಯಾವದೇ ಚಟುವಟಿಕೆ-ಯೋಜಿತವಾದದ್ದಾಗಲಿ ಅಥವಾ ಪ್ರಗತಿಯಲ್ಲಿದ್ದುದಾಗಲಿ-ನಿಷ್ಫಲಗೊಂಡಾಗ ಉಂಟಾಗುವ ಸಹಜ ಪ್ರತಿಕ್ರಿಯೆಯೇ ಕೋಪ. 'ಕೋಪ ಬಂದಾಗ ಹತ್ತರ ವರೆಗೆ ಅಂಕೆಗಳನ್ನು ಎಣಿಕೆ ಮಾಡು' ಎಂದು ಹಿರಿಯರು ಅದೇಕೆ ಹೇಳಿದರು? ಯೋಚಿಸಿ. ಕೋಪ ಬಂದಾಗ ನಮ್ಮ ತರ್ಕಶಕ್ತಿ ಸುಸ್ತುಗೊಳ್ಳುತ್ತದೆ. ಸಿಟ್ಟು ವ್ಯಕ್ತಿಯ ದೌರ್ಬಲ್ಯವಾಗಿ ತಿಳಿಯಲ್ಪಡುತ್ತದೆ. ಅಸಂಸ್ಕೃತಿ, ಅ ವಿದ್ಯೆಯ ಲಕ್ಷಣವಾಗಿ ತೋರುತ್ತದೆ. ಸಿಟ್ಟಿನ ನಿಯಂತ್ರಣದಲ್ಲಿ ಬುದ್ಧಿಯನ್ನಿರಿಸಿದವ ತನ್ನ ಸ್ನೇಹ, ನೌಕರಿ, ಖ್ಯಾತಿಗಳನ್ನೆಲ್ಲ ಬಲಿಗೊಡಬೇಕಾಗುತ್ತದೆ. ಆತ ಗುರಿ ತಲುಪುವ ಖಚಿತತೆ, ಸಾಮಾಜಿಕ ಪ್ರಸ್ತುತತೆಗಳನ್ನು ಕಳೆದುಕೊಳ್ಳುತ್ತಾನೆ. ಬೇರೆಯವರನ್ನು ಗಾಯಗೊಳಿಸುವದು ಅಥವಾ ನಾಶ ಮಾಡುವದು ಇಲ್ಲವೆ ನಿಂದಿಸುವದು ಕೋಪದ ಗುರಿಯಾದುದರಿಂದ ಅದು ಸಾಮಾಜಿಕವಾಗಿ ಅಗ್ರಾಹ್ಯವಾಗುತ್ತದೆ. ಕೋಪಿಷ್ಠನ ಪಚನಶಕ್ತಿ ಮಂದವಾಗುತ್ತದೆ; ಆದರೆ ಆತನ ಸ್ನಾಯುಗಳು ಶಕ್ತಿಯುತವೂ, ವೇಗಪೂರ್ಣವೂ ಆಗುತ್ತವೆ. ಕೋಪಗೊಂಡವನ ಕಣ್ಣು, ಕಿವಿ ಸರಿಯಾಗಿ ಕಾರ್ಯ ನಿರ್ವಹಿಸುವದಿಲ್ಲ, ನೆನಪಿನ ಶಕ್ತಿ ಹಾಳಾಗುತ್ತದೆ ಒಟ್ಟಿನಲ್ಲಿ ಅವನ ಆರೋಗ್ಯ ಕೆಡುತ್ತದೆ.

ಕೋಪದ ದುಷ್ಪರಿಣಾಮಗಳ ಬಗೆಗೆ ತಿಳಿದು ಭಯವಾಯಿತಲ್ಲವೇ? ಈ 'ಭಯ' ಅನೇಕ ರೂಪಗಳಲ್ಲಿರಬಹುದು. ಅದು ಆತಂಕವಾಗಿರಬಹುದು ಭಯ ಆಗಿರಬಹುದು ಅಥವಾ ದಿಗಿಲಾಗಿರಬಹುದು. ಇವೆಲ್ಲ ಸ್ವರೂಪಗಳಲ್ಲಿಯೂ ಅದು ನಿಮ್ಮ ಪಚನ ವ್ಯವಸ್ಥೆಯ ಮೇಲೆ ಪರಿಣಾಮ ಬೀರುತ್ತದೆ; ರಕ್ತದೊತ್ತಡ ಏರಿಸುತ್ತದೆ. ದೇಹದ ಮೇಲೆ ಭಯದ ಪರಿಣಾಮ ಸಿಟ್ಟಿನದಕ್ಕಿಂತ ದೀರ್ಘ ಕಾಲೀನವಾದುದು. ಕೋಪ ಅರೆಗಣ್ಣಿನ, ಬಿಗಿದ ಬಾಯಿಯ, ಕಚ್ಚಿದ ದಂತಪಂಕ್ತಿಗಳ ಬಿರುಸುಗೊಂಡ ಸ್ನಾಯುಗಳ ವ್ಯಕ್ತಿಯನ್ನು ಚಿತ್ರಿಸಿದರೆ, ಭಯ ಬಿಟ್ಟ ಕಣ್ಣುಗಳ, ತೆರೆದ ಬಾಯಿಯ, ಸಡಿಲುಗೊಂಡ ಸ್ನಾಯುಗಳ, ಕಂಪಿಸುವ ದೇಹದ, ಪೇಲವ ಮುಖದ ವ್ಯಕ್ತಿಯನ್ನು ನಿಮ್ಮೆದುರು ನಿಲ್ಲಿಸುತ್ತದೆ. ಅಂಜುಬುರುಕರ ಸಹವಾಸವನ್ನು ಯಾರು ತಾನೇ ಬಯಸುತ್ತಾರೆ? ಈ ಭಾವನೆ ಪಲಾಯನ ಗುಣವನ್ನು ಪುಷ್ಟೀಕರಿಸುತ್ತದೆ. ನೀವು ಮಾಡುತ್ತಿರುವದು ಸರಿಯಾದ ಕಾರ್ಯವೇ ಎಂದು ವಿಮರ್ಶಿಸುವ ವ್ಯವಧಾನವನ್ನೇ ನೀವು ಕಳೆದುಕೊಂಡಿರುವಿರಿ. ಇದು ಹೀಗೇಕೆ? ಏಕೆಂದರೆ ಭಯ ವಿಚಾರಶಕ್ತಿ, ಜ್ಞಾಪಕಶಕ್ತಿ ಮುಂತಾದವುಗಳನ್ನು ದುರ್ಬಲಗೊಳಿಸುತ್ತದೆ. ಆದುದರಿಂದ ಸಮಾಜ ಇಂಥವರನ್ನು ಸಹಿಸದು.

ಅಂತೂ ಭಯದಿಂದ ಕೊನೆಗೂ ದೂರವಾದೆವು ಎಂದು ಹರ್ಷವಾಯಿತೇ? ವ್ಯಥೆಯಾಯಿತೇ? ಎಚ್ಚರಿಕೆ! ನಲಿವು-ವ್ಯಥೆಗಳೆರಡೂ ನಿಮ್ಮ ಜೀರ್ಣಶಕ್ತಿಯನ್ನು




ಭಾವನೆಗಳಲ್ಲಿ ಅನೇಕ ವಿಧಗಳಿವೆಯೆಂಬುದನ್ನು ತಿಳಿದ ನಂತರ, ಅವು ದೇಹ ಮನಸ್ಸುಗಳ ಸ್ಥಿತಿಯನ್ನು ಬದಲಿಸುವ ಬಗೆಯನ್ನು ಅರಿತೆವು. ಕೆಲವು ಸಶಕ್ತ ಭಾವನೆಗಳಿವೆ; ಅವು ಆಗಾಗ ಎಲ್ಲರಿಗೂ ತೊಂದರೆ ತಂದೊಡ್ಡುತ್ತವೆ; ದೇಹ-ಮನಸ್ಸುಗಳನ್ನು ಘಾಸಿಗೊಳಿಸಿ ವ್ಯಕ್ತಿತ್ವಕ್ಕೆ ಅಳಿಸಲಾಗದ ಹಾನಿಯನ್ನುಂಟು ಮಾಡುತ್ತವೆ. ವ್ಯಕ್ತಿತ್ವ ವಿಕಾಸದಲ್ಲಿ ಆಸಕ್ತನಾದ ಪ್ರತಿಯೊಬ್ಬನೂ ಕೆಲವು ಸಶಕ್ತ ಭಾವನೆಗಳ ಪರಿಣಾಮಗಳನ್ನಾದರೂ ತಿಳಿದಿರುವದು ಆವಶ್ಯಕ. ಬನ್ನಿ, ನನ್ನೊಡನೆ ಹೆಜ್ಜೆ ಹಾಕಿ.

# ವ್ಯಕ್ತಿತ್ವ ವಿಕಾಸ

ಕುಂದಿಸುತ್ತವೆ; ವಿಚಾರಶಕ್ತಿಯನ್ನು ಗಾಸಿಗೊಳಿಸುತ್ತವೆ; ಏಕಚಿತ್ತವನ್ನು ಭಂಗಪಡಿಸುತ್ತವೆ. ಆದರೆ ಇವುಗಳ ಪರಿಣಾಮ ಮಾತ್ರ ವ್ಯಕ್ತಿತ್ವದ ಮೇಲೆ ವಿರುದ್ಧವಾದುದು. ವ್ಯಥೆಯು ಹಾನಿ ಮತ್ತು ಅಪ ಯಶಸ್ಸುಗಳೊಂದಿಗೆ ಬೆಸೆದು ಕೊಂಡಿರುವದರಿಂದ ವ್ಯಕ್ತಿತ್ವವನ್ನು ಕಳಾಹೀನಗೊಳಿಸುತ್ತದೆ. ದುರ್ಬಲನಾಗಿ ಕಾಣುವ ವ್ಯಥಿತ ವ್ಯಕ್ತಿಗಾಗಿ ಆತನ ಬಂಧು-ಮಿತ್ರರೂ ಮರುಗುತ್ತಾರೆ. ಹಾಗಾಗಿ ಆತ ಸ್ವಂತಕ್ಕೂ, ಮತ್ತು ಸಮಾಜಕ್ಕೂ ಹೊರೆಯಾಗುತ್ತಾನೆ. ಆದರೆ ನಲಿವು ವ್ಯಕ್ತಿತ್ವವನ್ನು ಕಾಂತಿಯುತಗೊಳಿಸುತ್ತದೆ. ನಲಿವಿನಲ್ಲಿವೆ ಮನೋ-ದೈಹಿಕ ಲಾಭಗಳು. ನಲಿವಿನ ಕಾರಣ ಯಾವುದಾದರೂ ಲಾಭ; ನೋವಿನದು ನಿಶ್ಚಿತ ಮತ್ತು ಭರಿಸಲಾಗದ ಹಾನಿ. ಚಟುವಟಿಕೆಯ ಆಸಕ್ತಿ ನಲಿವಿನ ಫಲ; ಅಸಹಾಯಕ ನಿಷ್ಕ್ರಿಯತೆ ನೋವಿನ ಫಲ. ಪರಿಣಾಮ : ನಲಿವು ಸ್ವಾಗತಾರ್ಹ; ವ್ಯಥೆ ತ್ಯಾಜ್ಯ.

ಈ ಎಲ್ಲ ವಿಚಾರಗಳು 'ಕಬ್ಬಿಣದ ಕಡಲೆ'ಗಳಾಗಿವೆಯೆಂದು ಭಾವಿಸಿದ ಕೆಲವು ಓದುಗರು ತಾವೇ ನಿರ್ಮಿಸಿದ ಕಲ್ಪನಾ ಜಗತ್ತಿನಲ್ಲಿ ವಿಹರಿಸುತ್ತಾ ಆನಂದಿಸುತ್ತಿದ್ದರೆ ನಾನೇನೂ ಮಾಡಲಾರೆ! ಕೊಂಚ ಈ ಜಗತ್ತಿನಿಂದ ಹೊರಬಂದು ನಾನು ಹೇಳುವದನ್ನು ಕೇಳಿ, ದಯವಿಟ್ಟು. ನಿಮ್ಮ ಕಲ್ಪಕ ಶಕ್ತಿ ಭಾವನೆಗಳನ್ನು ಉದ್ದೀಪಿಸುತ್ತದೆ. ಯಾವದೋ ನೈಜ ಅಥವಾ ಕಲ್ಪಿತ ಪ್ರಸಂಗವನ್ನು ನಮ್ಮ ಅನುಕೂಲತೆಗೆ ತಕ್ಕಂತೆ ಅರ್ಥೈಸುತ್ತಾ ಹೋದಂತೆ ನಮ್ಮ ಭಾವನೆಗಳು ಜಾಗೃತಗೊಳ್ಳುತ್ತಾ ಹೋಗುತ್ತವೆ. ಪರೀಕ್ಷೆಗಾಗಿ ಬಹಳ ಸಿದ್ಧತೆಯನ್ನು ನೀವು ಮಾಡಿದ್ದೀರಿ ಎಂದು ಊಹಿಸಿ. ನೀವೀಗ ಪರೀಕ್ಷೆಯ ಕೋಣೆಯಲ್ಲಿದ್ದೀರಿ. ಇಂದಂತೂ ನಿಮ್ಮ ಮೆಚ್ಚಿನ ವಿಷಯದಲ್ಲಿ ಪರೀಕ್ಷೆ. ಇನ್ನೇನು ಪ್ರಶ್ನೆಪತ್ರಿಕೆ ಹಂಚಲ್ಪಡಲಿದೆ. ನೀವೊಬ್ಬ ಅದಮ್ಯ ಕಲ್ಪನಾಶಕ್ತಿಯ ವಿದ್ಯಾರ್ಥಿನಿ ಎಂದು ತಿಳಿಯಿರಿ. ಈ ಪರೀಕ್ಷೆಯಲ್ಲಿ ಪ್ರಪ್ರಥಮಳಾಗಿ ಉತ್ತೀರ್ಣಳಾಗಿ ಸಮಾಜದಲ್ಲಿ ಎಲ್ಲರ ಕಣ್ಮಣಿಯಾಗಿ ರಾರಾಜಿಸುತ್ತಿರುವದಾಗಿ ಕಲ್ಪಿಸುತ್ತೀರಿ! ಈ ಕಲ್ಪನೆಯಲ್ಲಿಯೇ ನೀವು ಮುಳುಗಿದಾಗ ಪ್ರಶ್ನೆಪತ್ರಿಕೆ ಬಂದು ನೀವು ಏನೇನು ಬರೆದಿರೋ... ಜೀವನದಲ್ಲಿ ಮಾತ್ರ ಮುಳುಗಿಹೋದಿರಿ! ಏಕೆ?

ಹಗಲುಗನಸು ಕಾಣುವದು ತಪ್ಪೇ? ಸರ್ವಥಾ ಅಲ್ಲ. ಆದರೆ ಅದಕ್ಕೊಂದು 'ಲಕ್ಷ್ಮಣ ರೇಖೆ'ಯಿದೆ. ಜೀವನದ ಯಶಸ್ಸಿಗೆ ಸಹಾಯಕವಾದ ಕೃತುಶಕ್ತಿಯನ್ನು ಪ್ರೇರೇಪಿಸುವ ಮಟ್ಟಿಗೆ ಮಾತ್ರ ಅದು ಗ್ರಾಹ್ಯ. ರೇಖೆಯ ಹಿಂದಿರುವವನಿಗೆ ಕಲ್ಪನೆಯಲ್ಲಿ ಕಂಡದ್ದನ್ನು ಸಾಕಾರಗೊಳಿಸಲು ತನ್ಮೂಲಕ ಯಶಸ್ವಿಯಾಗಲು ಸಾಧ್ಯವಾಗುತ್ತದೆ. ರೇಖೆಯನ್ನು ದಾಟಿಯೇ ನಿಂತ ಶಾಶ್ವತ ಕಲ್ಪನಾ ವಿಹಾರಿಗೆ ಭಾವೋದ್ದೀಪನವು ಚಟವಾಗಿ ಆತನ ವ್ಯಕ್ತಿತ್ವ ದೋಷಪೂರ್ಣವಾಗಿ ಮಾರ್ಪಟ್ಟಿದೆ. ಜೀವನದ ಕಠೋರ ವಾಸ್ತವಿಕತೆಯಿಂದ ಆತ ಪಲಾಯಾನ ಹೇಳಿ ಅಂತರ್ಮುಖಿ, ಆತ್ಮವಿಶ್ವಾಸಹೀನ ಹಾಗೂ ಅಲಕ್ಷ್ಯ ಪ್ರವೃತ್ತಿಯವನಾಗಿದ್ದಾನೆ. ನೈಜ ಅಥವಾ ಕಲ್ಪಿತ ನೋವಿನಿಂದಾಗಿ ಒಬ್ಬಳ ಬಗೆಗೆ ನಿಮಗೆ ದ್ವೇಷ, ಅಸಹನೆ ಉಂಟಾಗಿದೆಯೆಂದುಕೊಳ್ಳಿ, ಈ ಉದ್ದೀಪಿತ ಭಾವನೆ ಆಗಾಗ ನಿಮ್ಮಲ್ಲಿ ಮರುಕಳಿಸುತ್ತಲಿದೆ. ಪ್ರತಿ ಮರುಕಳಿಕೆಯೂ ನಿಮ್ಮಲ್ಲಿನ ಸದ್ಗುಣಗಳನ್ನು ಒಂದೊಂದಾಗಿ ಕಬಳಿಸುತ್ತಲಿದೆ! ಆದರೆ, ನಿಮಗೆ ಅದರ ಪರಿವೆಯೇ ಇಲ್ಲ. ಈ ಗುಟ್ಟು ನಿಮಗೆ ತಿಳಿದಾಗ ನೀವು ದೀರ್ಘ ಅನಾರೋಗ್ಯದ ಮುಖಾಂತರ ಅವಧಿಪೂರ್ವ ವೃದ್ಧಾಪ್ಯದ ಬಾಗಿಲಿನಲ್ಲಿ ನಿಂತಿರುವದು ನಿಮಗೆ ಗಮನಕ್ಕೆ ಬಂದಿದೆ. ಹಾಲು ಚೆಲ್ಲಿ ಹೋಗಿದೆ!

'ಪರಿಸ್ಥಿತಿ ಕೈಮೀರಿದೆ' ಎಂದು ಜಪಿಸುತ್ತ ನಿಮ್ಮಷ್ಟಕ್ಕೆ ನೀವೇ ಅನುಕಂಪಪಟ್ಟುಕೊಳ್ಳುವುದನ್ನು ರೂಢಿಸಿಕೊಂಡರೆ ಈ 'ಸ್ವಾನುಕಂಪ'ವು ಚಟವಾಗಿ ಪರಿಣಮಿಸುತ್ತದೆ. ಸ್ವಕೇಂದ್ರೀಕೃತವಾದ ಇತರ ಅಭ್ಯಾಸಗಳಂತೆಯೇ ಇದೂ ಸಹ ವ್ಯಕ್ತಿತ್ವಕ್ಕೆ ಹಾನಿ ಮಾಡುತ್ತದೆ. ಬೇರೆಯವರಿಂದ ತನಗಾದ ಅನ್ಯಾಯಗಳನ್ನು ಬಣ್ಣಿಸುತ್ತಾ ಇತರರ ಅನುಕಂಪ ಗಳಿಸಲು ಇಂಥ ವ್ಯಕ್ತಿ ಹಾತೊರೆಯುತ್ತಾನೆ. ತನಗಾಗದವರತ್ತ ಆತ ದ್ವೇಷ ಕಾರುತ್ತಾನೆ. ಸಮಾಜದಲ್ಲಿಯ ಬಹ್ವಂಶ ಜನ ಇಂಥವರ ಸಹವಾಸ ಬಯಸುವದಿಲ್ಲವೆಂಬುದು ಮಾತ್ರ ದುರ್ದೈವದಿಂದ ಇವರಿಗೆ ಹೊಳೆಯುವದಿಲ್ಲ.

> **ವ್ಯತ್ಯಾಸ**
>
> ವಾಹನದಲ್ಲಿ
> ಹೋದರೆ
> 'ಪಯಣ'
> ಅದರಡಿಯಲ್ಲಿ
> ಹೋದರೆ
> 'ಮರಣ'
>
> **– ಗಾಯಿತ್ರಿ ಎ.ಆರ್.**

ಜಗತ್ತಿನಲ್ಲಿ ಭಾವಾವೇಶಕ್ಕೆ ತೀವ್ರವಾಗಿ ಒಳಗೊಳ್ಳುವ ಒಂದು ವರ್ಗದ ಜನರಿದ್ದರೆ, ಜನರ ಭಾವನೆಗಳನ್ನು ಉದ್ದೀಪಿಸಿ ನಂತರ ಅಂಥ ಜನರೊಡನೆ ಚೆಲ್ಲಾಟವಾಡಬಯಸುವ ಇನ್ನೊಂದು ವರ್ಗವಿದೆ. ಶ್ರವ್ಯ-ದೃಶ್ಯ ಮಾಧ್ಯಮಗಳ ಮುಖಾಂತರ, ಪತ್ರಿಕೆಗಳ ಮುಖಾಂತರ, ವಸ್ತುಗಳನ್ನು ಮಾರುವವರು ತಮ್ಮ ಜಾಹೀರಾತುಗಳನ್ನು 'ಅಂಗೈಯಲ್ಲಿ ಆಕಾಶ' ತೋರಿಸುವಂತೆ ರೂಪಿಸಿ ನಮ್ಮನ್ನೆಲ್ಲ ಮರುಳು ಮಾಡುತ್ತಿರುವದು ಯಾರ ಗಮನಕ್ಕೆ ಬಂದಿಲ್ಲ? ನಿಮ್ಮ ಮೆಚ್ಚಿನ 'ಬಿಸಿಲ ಬದುಕಿ'ನಲ್ಲಿ ಅಂಥ ಪ್ರಚೋದನಾತ್ಮಕ, ತಪ್ಪು ದಾರಿಗೆಳೆಯುವ ಜಾಹೀರಾತುಗಳು ಇದುವರೆಗೆ ಕಂಡು ಬಂದಿಲ್ಲವೆಂಬುದು ಹೆಮ್ಮೆಯ ವಿಷಯವಲ್ಲವೇ? ಚುನಾವಣೆಗಳು ಘೋಷಿತವಾದೊಡನೆ 'ಕಾಂಗ್ರೆಸ್ ಹುಲ್ಲಿನಂತೆ' ಹುಟ್ಟಿಕೊಳ್ಳುವ ರಾಜಕಾರಣಿಗಳು ಹಾಗೂ ಅವರ 'ತಥಾಸ್ತು'ಗಳಿಗೆ ಕೊನೆಯಿದೆಯೇ? ಹಾಗೆ ನೋಡಿದರೆ, ಸಾರಾಸಾರ ವಿಚಾರದ ನಂತರ ನಮ್ಮ ಭಾವನೆಗಳು ಜಾಗೃತಗೊಳ್ಳಬೇಕು. ಇದಕ್ಕೆ ಸಮಾಧಾನ ಚಿತ್ತದಿಂದ ವಿಚಾರ ಮಾಡುವಂಥ ತಾಳ್ಮೆಯ ವಾತಾವರಣದ ಆವಶ್ಯಕತೆಯಿದೆ. ಆದರೆ ಸ್ವಾರ್ಥ ಸಾಧಕರು ತಮ್ಮ ತಾತ್ಕಾಲಿಕ ಲಾಭದ ದೃಷ್ಟಿಯಿಂದ ಇದಕ್ಕೆ ವಿರುದ್ಧವಾದ ವಾತಾವರಣ ನಿರ್ಮಿಸಿ ತಮ್ಮ ಉದ್ದೇಶಗಳನ್ನು ಸಾಧಿಸಿಕೊಳ್ಳುತ್ತಾರೆ.

ಭಾವನೆಗಳು ಸಾಮಾಜಿಕ ಆವಶ್ಯಕತೆಗಳನ್ನು ಸಹ ಪೂರೈಸಬೇಕು. ಬೇರೆಯವರು ತನ್ನೊಡನೆ

# ವ್ಯಕ್ತಿತ್ವ ವಿಕಾಸ

ಸ್ನೇಹಪರರಾಗಿ ಸಂವೇದಿಸಬೇಕು, ವರ್ತಿಸಬೇಕು ಎಂದು ಪ್ರತಿಯೊಬ್ಬನೂ ಬಯಸುತ್ತಾನೆ. ಆದರೆ ಯಾರಲ್ಲಿ ಭಾವನೆಗಳು ಹಾಗೂ ವರ್ತನೆ ಒಂದಕ್ಕೊಂದು ಪೂರಕವಾಗಿರುವದಿಲ್ಲವೋ ಅಥವಾ ಅವು ಸಮರಸವಾಗಿರುವದಿಲ್ಲವೋ ಅಂಥವರ ವರ್ತನೆಯನ್ನು ಜನ ನಂಬುವದಿಲ್ಲ. ಅಂಥವರು ಆತ್ಮವಂಚಕರೂ ಹೌದು.

ಈಗ, ನಮ್ಮ ದೈನಂದಿನ ವರ್ತನೆಯಲ್ಲಿ ಭಾವನೆಗಳ ಪಾತ್ರದ ಕುರಿತು ಯೋಚಿಸೋಣ. ಜೀವನದಲ್ಲಿ ನಾವು ಏನೇನೋ ಆಗಬಯಸುತ್ತೇವೆ. ಆದರೆ ಅದಕ್ಕೆ ಅಡ್ಡಿಗಳು ಬರುತ್ತವೆ. 'ನಾನೊಬ್ಬ ಖ್ಯಾತ ಭಾಷಣಕಾರಳಾಗಬೇಕು' ಎಂದು ಯುವತಿಯೊಬ್ಬಳು ಇಚ್ಛಿಸುತ್ತಾಳೆ. ಆದರೆ ವೇದಿಕೆಯನ್ನೇರಿದೊಡನೆ ಆಕೆಗೆ ಪ್ರಬಲ ಸಭಾ ಕಂಪನವಾಗಿ ಬೇರೆಯವರ ಕರವಸ್ತ್ರ ಸಹ ಸಾಲುವುದಿಲ್ಲ! ನೋಡಿ, ಆಕೆ ಕುಳಿತೇಬಿಟ್ಟಳು. ಅಧಿಕಾರಯುತನಾದ ತಂದೆಯನ್ನು ಧೈರ್ಯದಿಂದ ಎದುರಿಸುವ ಸಿದ್ಧತೆಯಲ್ಲಿ ಇದ್ದಾನೆ, ಒಬ್ಬ ಸತ್ಪುತ್ರ. ಗೆಳೆಯನೊಡನೆ ಸಿಗರೇಟ್ ಹಂಚಿಕೊಳ್ಳುತ್ತಿರುವಾಗ ಎದುರಾದ ತಂದೆಯಿಂದ ಆತ ಈ ವಯಸ್ಸಿನಲ್ಲಿಯೂ ನಾಚಿಕೆಪಡುವಂಥ ಘಟನೆ ಆತನ ದೇಹದಲ್ಲಿ ನಡೆದು ಹೋಯಿತು! ಆತ ತನ್ನ ಧ್ವನಿಯನ್ನು ಸಹ ಕಳೆದುಕೊಂಡ. ಭಾವನೆಗಳು ಕೆಲವರನ್ನು ತೀವ್ರವಾಗಿ ವಶಪಡಿಸಿಕೊಳ್ಳುತ್ತವೆಯೆನ್ನುವದಕ್ಕೆ ಮೇಲಿನವು ಎರಡು ಪ್ರಾತಿನಿಧಿಕ ಉದಾಹರಣೆಗಳು, ಅಷ್ಟೇ. ಇನ್ನು ಕೆಲವರಿದ್ದಾರೆ. ಭಾವನೆಗಳಿಗೆ ವಶವಾಗುವ ವಿಷಯದಲ್ಲಿ ಅವರು 'ಬೆಲ್ಲ ಬಡಿವ ಕಲ್ಲಿನಂತೆ' ಇರುವವರು. ಯಾವದೋ ಘಟನೆಯಿಂದ ಅವರ ಭಾವನೆಗಳು ತಾತ್ಕಾಲಿಕವಾಗಿ ಬತ್ತಿಹೋಗಿರಬಹುದು. ಅಥವಾ ಅವರ ರಚನೆಯೇ ಅಂತಹದಿರಬಹುದು. ಇನ್ನು ಹಲವರಿದ್ದಾರೆ. ಅವರು ಎಲ್ಲರಂತೆ ಭಾವನೆಗಳಿಗೆ ಒಳಗಾಗುತ್ತಾರೆ. ಆದರೆ ಅವನ್ನು ವ್ಯಕ್ತಪಡಿಸದಂತೆ, ತಮಗೆ ಬೇಕಾದಾಗ ವ್ಯಕ್ತಪಡಿಸುವಂತೆ ನಿಯಂತ್ರಿಸುವದು ಅವರಿಗೆ ಸಾಧ್ಯ. ನ್ಯಾಯಾಲಯದಲ್ಲಿ ವಾದಿಸುತ್ತಿದ್ದ ಸರ್ದಾರ್ ಪಟೇಲರು ಪತ್ನಿಯ ನಿಧನದ ತಂತಿಸಂದೇಶವನ್ನು ಯಾವ ಭಾವವಿಕಾರಕ್ಕೊಳಗಾಗದೇ ಹತ್ತಿರದಲ್ಲಿಟ್ಟುಕೊಂಡು ಕರ್ತವ್ಯ ಪೂರೈಸಿದ ನಂತರ ಅತ್ತ ಗಮನಕೊಟ್ಟುದನ್ನು ನಾವೆಲ್ಲ ಅರಿತಿದ್ದೇವೆ. ಇನ್ನೂ ಕೆಲವರಿದ್ದಾರೆ. ಅವರು ತದ್ವಿರುದ್ಧ ಭಾವನೆಗಳಿಗೆ ಆಗಾಗ ಸಿಲುಕುತ್ತಾರೆ. 'ಆಕೆ ಅಳುವದೂ ತಡವಿಲ್ಲ; ನಗುವದೂ ತಡವಿಲ್ಲ' ಎಂದು ಕೆಲವರ ಬಗೆಗೆ ಚೇಷ್ಟೆ ಮಾಡಲಾಗುತ್ತದೆ. ಇನ್ನು ನೋಡಿ ಪರಿಸರ ಒಂದೇ. ಅಲ್ಲಿ ಹಲವರಿದ್ದಾರೆ. ಅವರೆಲ್ಲರೂ ಒಂದೇ ಘಟನೆಯಲ್ಲಿ ಪಾಲ್ಗೊಳ್ಳುತ್ತಾರೆ. ಆ ಘಟನೆಯೊಡನೆ ಅವರೆಲ್ಲರ ಸಂಬಂಧವೂ ಒಂದೇ. ಆದರೂ ಸಹ ಅವರೆಲ್ಲರೂ ವಿಭಿನ್ನ ರೀತಿಯಲ್ಲಿ ವರ್ತಿಸುತ್ತಾರೆ- ಭಿನ್ನ ಭಾವನೆಗಳ ಪ್ರತಿಕ್ರಿಯೆಯಾಗಿ ಇದಕ್ಕೆ ಹಲವು ಕಾರಣಗಳಿವೆ.

**ಮೊದಲನೆಯದು,** ಸ್ವಾಸ್ಥ್ಯದ ಸ್ಥಿತಿ. ಅದು ಉತ್ತಮವಿದ್ದಾಗ ಬೇರೆಯವರನ್ನು ಆಕರ್ಷಿಸುವ ಆನಂದ, ಸದಾಶಯ, ಧೈರ್ಯ, ಪ್ರೇಮ ಮುಂತಾದ ಭಾವನೆಗಳು ಉದ್ದೀಪನಗೊಳ್ಳುತ್ತವೆ. ಅದು ಕೆಟ್ಟದಾಗಿದ್ದಾಗ ಇತರರನ್ನು ವಿಕರ್ಷಿಸುವ ದುಃಖ, ನಿರಾಶೆ, ಪುಕ್ಕಲುತನ ಮುಂತಾದವು ಗೋಚರಿಸುತ್ತವೆ.



**ಎರಡನೆಯದು,** ಜೀವನದ ಬಗೆಗಿನ ನಮ್ಮ ದೃಷ್ಟಿಕೋನ. ಅದು ಸಕಾರಾತ್ಮಕವೂ, ಸೌಂದರ್ಯವಾಗಿಯೂ ಆಗಿದ್ದರೆ. ಧನಾತ್ಮಕ ಭಾವನೆಗಳೂ, ದೃಷ್ಟಿ 'ಕೋಣ'ವಾಗಿ ಬೇಜವಾಬ್ದಾರಿಯದೂ, ನಕಾರಾತ್ಮಕವೂ, ಕೀಳು ಕಾಮನೆ ಸಹಿತದ್ದೂ ಆಗಿದ್ದರೆ ಋಣಾತ್ಮಕ ಭಾವನೆಗಳೂ ಉದ್ದೀಪಿತವಾಗುತ್ತವೆ.

**ಮೂರನೆಯದು,** ಆನುವಂಶೀಯತೆ. ಇದಕ್ಕೆ ಹೆಚ್ಚು ಮಹತ್ವವಿಲ್ಲದಿರಬಹುದು. ಆದರೆ ಈ ಕಾರಣವನ್ನು ಕಡೆಗಣಿಸುವಂತಿಲ್ಲ. ನಮ್ಮ ದೇಹದ ರಾಸಾಯನಿಕಗಳು ಹಾಗೂ ಅವುಗಳ ಕಾರ್ಯನಿರ್ವಹಣೆಯಲ್ಲಿ ಅನುವಂಶೀಯತೆಯ ಪಾತ್ರವಿದೆ. ಈ ಭಿನ್ನ ಭಿನ್ನ ಪ್ರಮಾಣದ ರಾಸಾಯನಿಕಗಳು ವ್ಯಕ್ತಿ ವ್ಯಕ್ತಿಗಳಲ್ಲಿ ಭಿನ್ನ ಭಿನ್ನ ಭಾವನೆಗಳ ಉತ್ಪತ್ತಿಯನ್ನು ನಿರ್ದೇಶಿಸುತ್ತವೆ.

**ನಾಲ್ಕನೆಯದು,** ಜನಾಂಗೀಯ ಕಾರಣ. ತಮ್ಮ ನಾವೆ ಮುಳುಗುತ್ತಿರುವದನ್ನು ಖಚಿತಪಡಿಸಿಕೊಂಡ ಭಾರತೀಯ, ಅಮೇರಿಕನ್ ಮತ್ತು ಇಂಗ್ಲಂಡಿನವರಾದ ಪ್ರಯಾಣಿಕರಲ್ಲಿ ಭಾರತೀಯ ಅಲ್ಲಿಯೇ ಅಳಲು ಪ್ರಾರಂಭ ಮಾಡಿದರೆ, ಹೇಗೋ ಪಾರಾಗಿ ಬಂದ ಅಮೇರಿಕನ್ ದಂಡೆಯಲ್ಲಿ ರೋದಿಸಿದ; ಇಂಗ್ಲಂಡಿನವ ತನ್ನ ಮನೆಯಲ್ಲಿ ಅತ್ತನಂತೆ!

ಐದನೆಯದು, ಮನೆಯಲ್ಲಿಯ ವಾತಾವರಣ ಹಾಗೂ ನಾವು ಎಳೆಯರಿಗೆ ನೀಡಿದ ತರಬೇತಿ. ಕಟ್ಟುನಿಟ್ಟಿನ ಶಿಸ್ತಿನ ರೈಲು ಬಂಡಿಯ ಗಾರ್ಡ್‌ನೊಬ್ಬ 'ಹಸಿರು ನಿಶಾನೆ' ತೋರಿಸಿದಾಗ ಮಾತ್ರ ಅಡಿಗೆ ಮನೆಗೆ ಕಾಲಿಡಲು ಮಕ್ಕಳಿಗೆ ಆಜ್ಞೆ ಮಾಡಿದ್ದರೆ, ಆ ಮಕ್ಕಳ ಮಿತ್ರರು ಹಸಿವೆಯನ್ನು ವ್ಯಕ್ತಪಡಿಸಿದಾಗ ಇವರಿಗೆ ಅಸಭ್ಯರಾಗಿ, ಅಂದಗೇಡಿಗಳಾಗಿ ಕಾಣುವದು ಸಹಜ. ನಿರಂತರವಾಗಿ ಹೀಗೆ ಭಾವನೆಗಳನ್ನು ಹತ್ತಿಕ್ಕಿಕೊಂಡವರು, ಭಾವನಾರಹಿತರೂ ಆಗಬಹುದಾದ ಭಯವಿದೆ. ಇಂಥವರು ಬೇರೆಯವರ ವರ್ತನೆಯನ್ನು ತಮ್ಮದರೊಂದಿಗೆ ಸದಾಕಾಲ ಹೋಲಿಸಿಕೊಳ್ಳುತ್ತಿರುತ್ತಾರೆ. ತಾವೇ 'ಸರಿ' ಎಂದೂ ಅವರಿಗೆ ತರಬೇತಿ ನೀಡಲಾಗಿದೆ. ಇಂಥವರು ಭಾವಾಭಿವ್ಯಕ್ತಿಯನ್ನು ಮುಕ್ತವಾಗಿ ಇತರರಲ್ಲಿ ಕಂಡಾಗ ಅವರನ್ನು ಸಾಮಾಜಿಕವಾಗಿ ಅಜ್ಞಾನಿಗಳು, ಕಡಿಮೆ ಬುದ್ಧಿಮತ್ತೆಯವರು ಎಂದು ಅಭಿಪ್ರಾಯಪಡಬಹುದು.

●



## ಉದರೋಪನಿಷತ್

(ಹಗುರ ಬರಹಗಳು)
ಲೇ : **ಮಲ್ಲಿಕಾರ್ಜುನ ಹುಲಗಬಾಳಿ**
ಪ್ರ : ವಿಮೋಚನಾ ಪ್ರಕಾಶನ,
ವಿಮೋಚನಾ ದೇವದಾಸಿ ಪುನರ್ವಸತಿ ಸಂಘ,
ಅಥಣಿ - ೫೯೧ ೩೦೪ ಬೆಳಗಾವಿ ಜಿಲ್ಲೆ.
ಮುದ್ರಣ : ೧೯೯೬, ಪುಟ : ೮೪, ಬೆಲೆ :
ರೂ. ೨೫/-

**ಮ**ಲ್ಲಿಕಾರ್ಜುನ ಕೊನೆಗೂ ತಮ್ಮ ಜಾಯಮಾನಕ್ಕೆ ಅನುರೂಪವಾದ 'ಫಾರ್ಮ'ನ್ನು ಆಯ್ದುಕೊಂಡಿದ್ದಾರೆ. ಷೇಕ್ಸ್‌ಪಿಯರ್ ಹರಟೆಯನ್ನು, ಬೇಕನ್ ನಾಟಕವನ್ನು, ಗೋಲ್ಡ್‌ಸ್ಮಿಥ್, ಗಾರ್ಡಿನರ್, ಲಾಂಗೂಲಾಚಾರ್ಯರು ಕವಿತೆಗಳನ್ನು, ಶಿವರುದ್ರಪ್ಪ, ನರಸಿಂಹಸ್ವಾಮಿ ಕಾದಂಬರಿಗಳನ್ನು ಬರೆಯಹೋಗಿದ್ದರೆ ಪ್ರಾಯಶಃ ಸಾಹಿತ್ಯ ಚರಿತ್ರೆಯಲ್ಲಿ ನಾವು ಅವರನ್ನು ಈಗ ಗುರುತಿಸಿರುವ ರೀತಿಯಲ್ಲಿ ಗುರುತಿಸುವ ಪ್ರಶ್ನೆಯೇ ಬರುತ್ತಿರಲಿಲ್ಲ.

ಈ ಹಗುರ ಬರಹ ತಿಳಿದುಕೊಂಡಷ್ಟು ಹಗುರವಿಲ್ಲವೆಂಬುದನ್ನು ಇವರ 'ಟೊಂಯ್ ಟೊಂಯ್ ಮಾತು' ಓದಿದರೇ ಅರ್ಥವಾಗುತ್ತದೆ. ಇಂಥ ಬರವಣಿಗೆಗೆ ಸ್ವಾತಂತ್ರ್ಯವೇನೋ ಇದೆ. ಆದರೆ ಇದು ಓದು ಮತ್ತು ಚಾತುರ್ಯವನ್ನು ಮೈಮುರಿಯೆ ದುಡಿಸಿಕೊಳ್ಳುತ್ತದೆ. ಬುದ್ಧಿ ಶಕ್ತಿಗಿಂತ ಕಲ್ಪನಾ ಶಕ್ತಿ ಅಷ್ಟೇ ಅಲ್ಲ - ವಿಟ್ (ಚತುರೋಕ್ತಿ) ಹಾಗೂ ಶ್ಲೇಷಾರ್ಥಗಳು ಹುಲಗಬಾಳಿ ಅವರ ಬರವಣಿಗೆಯ ತೂಕ ಹೆಚ್ಚಿಸಿವೆ.

**- ಬಿ.ಆರ್. ಪೋಲೀಸ ಪಾಟೀಲ**

## ಚಿತ್ತಸ್ಫುರಣ

(ಚಿಂತನ ಸೂತ್ರಗಳು)
ಲೇ : **ಅರ್ಜುನ ತಾ.ಕೋರಟಕರ 'ಭಾವಜ್ಞ'**
ಪ್ರ: ಬರಹಗಾರ ಪ್ರಕಾಶಕ
ಅರ್ಜುನ ತಾ. ಕೋರಟಕರ 'ಭಾವಜ್ಞ'
ಜಮಖಂಡಿ - ೫೮೭ ೩೦೧ ಜಿಲ್ಲೆ ವಿಜಾಪುರ
ಮುದ್ರಣ: ೧೯೯೭ ಪುಟ: ೫೬ ಬೆಲೆ: ರೂ.೩೦

**ವಿ**ಜಾಪುರ ಜಿಲ್ಲೆಯ ತುಂಬಾ ತಮ್ಮ ಕ್ರಿಯಾಶೀಲ ನಡೆ-ನುಡಿಗಳಿಂದ ಸಾಹಿತ್ಯಿಕ ವಾತಾವರಣ ಹುಟ್ಟಿಸುತ್ತಿರುವ ಅರ್ಜುನ ಕೋರಟಕರ, ಕತೆಗಾರನಾಗಿ ಕಾಣಿಸಿಕೊಂಡು, ಕವಿಯಾಗಿ ಮಾರ್ಪಟ್ಟು ಈಗ ಚಿಂತನಕಾರರಾಗಿ ಹೊರ ಹೊಮ್ಮಿರುವುದು ಅವರೊಳಗಿನ ಉತ್ಸಾಹ, ಸ್ವಾಭಿಮಾನಗಳಿಂದ.

ಜಮಖಂಡಿಯ ತರುಣ ಬರಹಗಾರ ಅರ್ಜುನ ಕೋರಟಕರ 'ಭಾವಜ್ಞ'ನಾಗಿ, 'ಸರ್ವಜ್ಞ'ನ ರೀತಿಯಲ್ಲಿ ದಟ್ಟಡಿಯಿಡುತ್ತಿರುವುದು ಅಭಿನಂದನೀಯ ಬೆಳವಣಿಗೆ.

ಸುಭಾಷಿತ, ಸೂಕ್ತಿ, apothegm, ಸೂತ್ರ ರೂಪದ ವಚನೋಕ್ತಿ ಹೀಗೆ ನಾನಾ ಮಾತಿನ ರೂಪಗಳನ್ನು ದಕ್ಕಿಸಿಕೊಳ್ಳುವ 'ಭಾವಜ್ಞ'ರ ಈ ಚಿತ್ತಸ್ಫುರಣ ಓದುಗರನ್ನು ಚಿಂತಿಸಲು ಹಚ್ಚುತ್ತದೆ.

**- ಶ್ಯಾಮಸುಂದರ ಬಿದರಕುಂದಿ**

## ಪ್ರಕೃತಿ

(ಹನಿಗವನಗಳು)
ಲೇ: **ಗಣೇಶ ಪಿ. ನಾಡೋರ**
ಪ್ರ: ನವಚೇತನ ಪ್ರಕಾಶನ, ಯಲ್ಲಾಪುರ (ಉ.ಕ.) ಮುದ್ರಣ : ೧೯೯೬, ಪುಟ : ೩೧
ಬೆಲೆ: ರೂ.೧೫/-

**ಒ**ಳ್ಳೆಯ ಇಡಿಗವಿತೆ ಬರೆಯುವುದು ಎಷ್ಟು ಕಷ್ಟವೋ, ಒಳ್ಳೆಯ ಹನಿಗವಿತೆ ಬರೆಯುವುದೂ ಅಷ್ಟೇ ಕಷ್ಟ. ಇಂದು ಪುಂಖಾನು ಪುಂಖವಾಗಿ ಹನಿಗವಿತೆ ಬರೆಯುತ್ತಿರುವ ಬಹುಪಾಲು ಸದ್ಯೋಜಾತ ಹನಿಗವಿಗಳಿಗೆ ಈ ಅರಿವು ಇದ್ದಂತೆ ತೋರುವುದಿಲ್ಲ.

ಹನಿಗವಿತೆ ಹೀಗೆ ಹೊಳೆದು ಹಾಗೆ ಮಾಯವಾಗುವ ಇಬ್ಬನಿ ಮಣಿಯಾದರೆ ಸಾಲದು. ಅದು ಅಪ್ಪಟ ಮುತ್ತಾಗಬೇಕು. ಅದಕ್ಕೆ ಪ್ರತಿಭೆ, ಪರಿಶ್ರಮ ಮತ್ತು ಪ್ರಾಪ್ತಿ ಅತ್ಯಗತ್ಯ.

ಗಣೇಶ ಪಿ. ನಾಡೋರ ಅವರ ''ಪ್ರಕೃತಿ'' ಎಂಬ ಈ ಹನಿಗವಿತೆಗಳ ಸಂಕಲನದ ಕೆಲವಾದರೂ ರಚನೆಗಳಲ್ಲಿ (ಉದಾ : 'ಬೆಳದಿಂಗಳು', 'ಫಜೀತಿ' ಮತ್ತು 'ಹಂಬಲ') ಕಾವ್ಯದ ಹೊಳವು, ಲಾಸ್ಯ ಮತ್ತು ನಿಗೂಢತೆ ಇರುವುದು ಈ ಕವಿತೆಯ ಬಗ್ಗೆ ಭರವಸೆ ಮೂಡಿಸುತ್ತದೆ. ಇಂಥ ಅರ್ಥವತ್ತಾದ ರಚನೆಗಳು ಈ ಕವಿಯಿಂದ ಇನ್ನಷ್ಟು ಸಮೃದ್ಧ ಪ್ರಮಾಣದಲ್ಲಿ ಮೂಡಿಬರಲಿ ಎಂದು ಕನ್ನಡ ಕಾವ್ಯ ರಸಿಕರ ಪರವಾಗಿ ಹಾರೈಸುತ್ತೇನೆ.

**- ಬಿ.ಆರ್. ಲಕ್ಷ್ಮಣರಾವ್**

## ಬಯಲು ಸೀಮೆಯಲ್ಲಿ ಕಾಫಿ ಬೆಳೆದ ಕೃಷಿಕ ಎಂ. ಪುಟ್ಟೇಗೌಡ

(ಕೃಷಿ ಸಾಧಕರ ಮಾಲಿಕೆ)
ಸಂಪಾದಕ : **ವಿಜಯ್ ಅಂಗಡಿ**
ಪ್ರ: ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು, ಹಾಸನ ಘಟಕ, ಮುದ್ರಣ : ೧೯೯೭, ಪುಟ :
೨೪ ಬೆಲೆ: ರೂ. ೨/-

**ನ**ಮ್ಮ ದೇಶದಲ್ಲಿ ಅದೆಷ್ಟೋ ಕೃಷಿಕರು ಎಲೆಮರೆಯ ಕಾಯಿಯಂತೆ ದುಡಿದು ಮೈ ಹಣ್ಣಾಗಿಸಿಕೊಂಡು ಮಾಯವಾದರೋ ತಿಳಿಯದು, ಹಗಲು ರಾತ್ರಿ ತನ್ನ ಬೇಸಾಯದ ಬಗ್ಗೆ ಚಿಂತಿಸಿದ, ನಮ್ಮ ಪೂರ್ವಜರ ಹಲವು ವಿಚಾರಗಳು ಸರಿಯಾಗಿ ದಾಖಲಾಗಿಲ್ಲ. ಬೀಜದ ಆಯ್ಕೆಯಿಂದ ಹಿಡಿದು ಮಾರಾಟ ಮಾಡಿ ಮನೆ ಸೇರುವವರೆಗೆ ಏನೆಲ್ಲಾ ಕಷ್ಟ-ಸುಖಗಳನ್ನು ಅನುಭವಿಸಿದ ಮಹಾನ್ ಕೃಷಿಕರ ಚಿಂತನೆಗಳು ಈಗಲೂ ಪ್ರಸ್ತುತವಾಗಿವೆ. ಏನೂ ಓದದಿದ್ದರೂ ತನ್ನ ಅಪಾರ ಬುದ್ಧಿ ಶಕ್ತಿ, ಸತತ ದುಡಿಮೆಯಿಂದ ಏನೆಲ್ಲಾ ಸಾಧಿಸಿದ ಮಹನೀಯರು ಅನೇಕರಿದ್ದಾರೆ. ಇವರ ಆಳವಾದ

ಅನುಭವಗಳೇ ನಿಜವಾದ ಸಂಶೋಧನಾ ಫಲಿತಾಂಶಗಳು. ಬಹುಮಾನಕ್ಕಾಗಿ ಕಾಯದೇ, ಬಡ್ತಿಯನ್ನು ಬೇಡದೇ, ಬೆಲೆಗಾಗಿ ಬೆಳೆಯದೇ, ತಾನು ತನ್ನ ಸಂಸಾರವನ್ನೇ ಮುಡುಪಾಗಿಟ್ಟು ಹಲವಾರು ಕುಟುಂಬಗಳ ಅಪೂರ್ವ ಅನುಭವಗಳನ್ನು ಕಲೆಹಾಕುವ ನಿಟ್ಟಿನಲ್ಲಿ ನಮ್ಮ ಈ ಪುಟ್ಟ ಪ್ರಯತ್ನ.

ಸಮಾಜದಲ್ಲಿ ಇತರರಂತೇ ನಮ್ಮ ಕೃಷಿಕನಿಗೂ ಮರ್ಯಾದೆ, ಗೌರವಗಳು ಸಿಗಬೇಕು. ಆತನ ಸಾಧನೆಗೆ ಮನ್ನಣೆ ದೊರೆಯಬೇಕು. ಕಷ್ಟ ಕಾರ್ಪಣ್ಯಗಳನ್ನು ಇತರರಿಗೂ ತಿಳಿಸಬೇಕು ಎಂಬ ಉದ್ದೇಶದಿಂದ ಕೂಡಿದ ''ಕೃಷಿ ಸಾಧಕರು'' ಮಾಲಿಕೆಯ ಮೊದಲ ಪುಸ್ತಕವಿದು.

ನಮ್ಮ ಈ ಹಿರಿಯ ಕೃಷಿ ದಿಗ್ಗಜರ ಅನುಭವಗಳು ಖಂಡಿತವಾಗಿಯೂ ಹಲವರಿಗೆ ಅನುಕೂಲವಾಗುತ್ತವೆ ಎಂಬ ದೃಢ ವಿಶ್ವಾಸ ನಮಗಿದೆ.

**- ಪ್ರಕಾಶಕರು**

## ವಿದ್ಯಾವಾರಿಧಿ ಪ್ರೊ.ಷಡಕ್ಷರಸ್ವಾಮಿ

(ಜೀವನದ ಬಗ್ಗೆ)

**ಲೇ: ಸಿ. ಸೀತಾರಾಮ್, ಎನ್.ಎಸ್.ಲೀಲಾ**

ಪ್ರ: ಶ್ರೀ ಜಗದ್ಗುರು ರೇಣುಕಾಚಾರ್ಯ ವಿದ್ಯಾಸಂಸ್ಥೆ, ಬೆಂಗಳೂರು. ಪುಟ : ೧೦೪

ಕೈಗೆಟುಕದ ಹಣ್ಣಿಗೆ ಆಸೆಪಟ್ಟು ತೋಳೆತ್ತಿ ನಿಂತಿರುವ ಕುಬ್ಜನಂತಾಗಿದೆ ತನ್ನ ಸ್ಥಿತಿ ಎಂದು ಕಾಳಿದಾಸ 'ರಘುವಂಶ'ದ ಆರಂಭದಲ್ಲಿ ಹೇಳುತ್ತಾನೆ. ಸೂರ್ಯನ ಪ್ರಭೆಯ ಆ ವಂಶವೆಲ್ಲಿ ಅಲ್ಪವಿದ್ಯೆಯ ತಾನೆಲ್ಲಿ ಎಂದು ತನ್ನ ಅಳಲನ್ನು ತೋಡಿಕೊಳ್ಳುತ್ತಾನೆ. ಮೈಸೂರು ವಿಶ್ವವಿದ್ಯಾಲಯದಲ್ಲಿ ಜೀವರಸಾಯನಶಾಸ್ತ್ರದ ಒಂದು ಹೊಸ ವಿಭಾಗವನ್ನೇ ಹುಟ್ಟುಹಾಕಿ ಬೆಳೆಸಿದವರೂ, ಬೆಂಗಳೂರು ವಿಶ್ವವಿದ್ಯಾಲಯದ ಸ್ಥಾಪನೆಗೆ ತೆರೆಮರೆಯಲ್ಲಿ ಮಹತ್ವಪೂರ್ಣ ಕೆಲಸ ಮಾಡಿದವರೂ, ವಿದೇಶಿ ವಿಶ್ವವಿದ್ಯಾಲಯಗಳಲ್ಲಿ ಕರ್ನಾಟಕದ-ಭಾರತದ ಹಿರಿಮೆ ಬೆಳೆಸಿದವರೂ ಆದ ಪ್ರೊಫೆಸರ್ ಷಡಕ್ಷರಸ್ವಾಮಿಯವರ ಬಗ್ಗೆ ಕೃತಿಯೊಂದನ್ನು ಸಂಪಾದಿಸಿಕೊಡಬೇಕೆಂದು ಅವರ ಎಂಬತ್ತನೆ ಜನ್ಮದಿನೋತ್ಸವದ ಸಂದರ್ಭದಲ್ಲಿ ಪ್ರೊ. ಎಸ್.ಸಿ.ಶರ್ಮ ಅವರು ಕೇಳಿದಾಗ ಅಗಾಧ ಜನಪ್ರಿಯತೆಯ ಬೋಧಕನೊಬ್ಬನನ್ನು ಕುರಿತ ಕೆಲಸವಿದೆಂದೂ ತಕ್ಷಣವೇ ಒಪ್ಪಿಕೊಂಡರೂ, ನಂತರ ಕಾರ್ಯಾರಂಭ ಮಾಡಿದಾಗ ಕಾಳಿದಾಸನ ಮಾತುಗಳು ನೆನಪಾದವು.

**- ಸಿ. ಸೀತಾರಾಮ್**

**- ಲೀಲಾ ಎನ್.ಎಸ್.**

## ಮುದ್ದಣ್ಣನ ಪ್ರಪಂಚ

(ಹಾಸ್ಯ ಬರಹಗಳ ಸಂಕಲನ)

**ಲೇ: ರಮೇಶ ದೇಶಪಾಂಡೆ**

ಪ್ರ: ವಿಕಾಸ ಪ್ರಕಾಶನ, ಹುಬ್ಬಳ್ಳಿ ಪುಟ : ೫೨

ಬೆಲೆ : ರೂ.೨೦/-

**ಬಿ.** ರಮೇಶ್ ದೇಶಪಾಂಡೆ ಉತ್ತಮ ನಗೆಗಾರನಾದ ಬರಹಗಾರ ಮುದ್ದಣ್ಣ ಮನೋರಮೆತನದ ಶೃಂಗಾರಿಕ ಹಾಸ್ಯ ರಮೇಶನ ಒಲವಿನ ದೇಣಿಗೆಯಾಗಿದೆ. ಯಾವುದೇ ಬರಹದಲ್ಲಿ ಆದರೂ ರಮೇಶ ತನ್ನ ಸಹಭಾಗಿ (?) ಯ ಕೈ ಬಿಡುವುದಿಲ್ಲ. ಆದರೆ ಈ ಕೈ ಹಿಡಿದ ಪತ್ನಿಯೇ ಈತನ ಪಾಲಿನ ಭಯೋತ್ಪಾದಕಳೂ ಆಗುತ್ತಾಳೆ. ''ಹೊಸ ಭಯೋತ್ಪಾದಕರು'' ಇದಕ್ಕಾಗಿಯೇ ಈ ನಗೆಯ ನಾವಿನ್ಯಕ್ಕಾಗಿಯೇ ನೀವು ಓದಬೇಕು. ಅಥವಾ ಮಗನಲ್ಲಿ ಅತಿ ಮುದ್ದು ಮಾಡಿದ್ದಕ್ಕೆ ಮಡದಿಯಿಂದ ಮಂಗಳಾರತಿಯೂ ಆಗುತ್ತದೆ. ಎಲ್ಲವನ್ನೂ ಕ್ರೀಡಾ ಮನೋಭಾವದಿಂದ ಸ್ವೀಕರಿಸುವ Sportsmanship ಲೇಖಕನಲ್ಲಿದೆ.

**- ಎನ್ಕೆ**

## ಪುಸ್ತಕ ಮೇಳ

ಕನ್ನಡ ಪುಸ್ತಕ ಪ್ರಾಧಿಕಾರವು ೧೯೯೭-೯೮ರ ಪುಸ್ತಕ ಮೇಳವನ್ನು ದಾವಣಗೆರೆ ಮತ್ತು ಹುಬ್ಬಳ್ಳಿ ಕೇಂದ್ರಗಳಲ್ಲಿ ಏರ್ಪಡಿಸಲಿದೆ.

ದಾವಣಗೆರೆಯಲ್ಲಿ ನವೆಂಬರ್ ೧೧ ರಿಂದ ೧೬ರವರೆಗೆ ನಡೆಯುವ ಪುಸ್ತಕ ಮೇಳದಲ್ಲಿ ಭಾಗವಹಿಸುವ ಸಂಸ್ಥೆಗಳಿಗೆ ಮಳಿಗೆಗಳನ್ನು ಉಚಿತವಾಗಿ ನೀಡಲಾಗುವುದು. ಕರ್ನಾಟಕ ಹಾಗೂ ಹೊರನಾಡಿನ ಎಲ್ಲ ಪ್ರಕಾಶಕರು ಈ ಮೇಳದಲ್ಲಿ ಭಾಗವಹಿಸಬಹುದಾಗಿದೆ. ಅರ್ಜಿ ಸಲ್ಲಿಸಲು ಅಕ್ಟೋಬರ್ ೧೮ ಕಡೆಯ ದಿನವಾಗಿರುತ್ತದೆ. ಹೆಚ್ಚಿನ ವಿವರಗಳಿಗೆ ಆಡಳಿತಾಧಿಕಾರಿ ಹಾಗೂ ಸಂಚಾಲಕರು, ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ ಸಾಹಿತ್ಯ ಪರಿಷತ್ತು ಕಟ್ಟಡ, ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮ ಈ ವಿಳಾಸವನ್ನು ಸಂಪರ್ಕಿಸಬಹುದಾಗಿದೆ.

## ವಚನ ತತ್ವಾನುಭವ

(ಮಹಾಗ್ರಂಥ)

**ಲೇ: ಸಿದ್ಧರಾಮೇಶ್ವರರು ಬೆಲ್ದಾಳ**

ಪ್ರ: ಮಹಾಮನೆ ಪ್ರಕಾಶನ ಕೌಠಾ (ಬಿ) ತಾ. ಔರಾದ ಜಿ. ಬೀದರ್ ಪುಟ : ೮೪೮

ಬೆಲೆ : ರೂ.೩೦೦/-

''....ಶ್ರೀ ಬೇಲ್ದಾಳ ಶರಣರ..... ಜಂಗಮಲಿಂಗ ಹಸ್ತದಿಂದ ಬರೆಯಲ್ಪಟ್ಟಿರುವ ಈ ''ವಚನ ತತ್ವಾನುಭವ'' ಮಹಾ ಗ್ರಂಥವು ವಿನೂತನ ಹಾಗೂ ಅಮೂಲ್ಯ ಕೃತಿಯಾಗಿದೆ. ಬಸವ ಧರ್ಮಿಯರಿಗೆ ಶ್ರೇಷ್ಠವಾದ ಧರ್ಮ ಗ್ರಂಥವಾಗಿದೆ.

''....ಅವರ ಹೃದಯದಲ್ಲಿ ಅಪ್ಪ ಬಸವಣ್ಣ ನೆಲೆಗೊಂಡಿದ್ದಾನೆ. ಬಸವತತ್ವ ಹೊತ್ತಿರುವ ಜೀವಿಗಳೆಲ್ಲ ನಮಗೆ ಪರಮ ಪೂಜ್ಯರು. ನಾವು ಮಠದ ಪರಂಪರೆಯ ಭಕ್ತರಿಗೆ ಪೂಜ್ಯರಾದರೆ, ಬೆಲ್ದಾಳ ಶರಣರಂತಹ ಅನುಭಾವಿಗಳು ನಮಗೆಲ್ಲ ಪೂಜ್ಯರು.

''ಶ್ರೀ...ಭಾಲ್ಕಿ ಅಪ್ಪನವರು ಶ್ರೀ ಬೆಲ್ದಾಳ ಶರಣರ ಹೃದಯದಲ್ಲಿ ಬಿತ್ತಿದ ಶಿವಜ್ಞಾನ ಬೀಜವು ಹೆಮ್ಮರವಾಗಿ, ಬಸವತತ್ವದ ಅನುಭಾವದ ಅಮೃತ ಫಲಗಳನ್ನು ನೀಡುತ್ತಿದೆ. ಇದುವೆ ಈ ''ವಚನ ತತ್ವಾನುಭವ'' ಎಂದು ನಮ್ಮ ಅನಿಸಿಕೆ.

**- ಶ್ರೀ ಮ.ನಿ.ಪ್ರ. ಮಹಾಂತ ಶಿವಯೋಗಿಗಳು**

# ಭಾರತದ ಉಪರಾಷ್ಟ್ರಪತಿ : ಆಯ್ಕೆ, ಅಧಿಕಾರ ಹಾಗೂ ಸ್ಥಾನಮಾನ

○ ಎಸ್.ನಾಗರಾಜ
ರಾಜ್ಯಶಾಸ್ತ್ರ ಉಪನ್ಯಾಸಕರು ಸ.ಪ್ರ.ದ. ಕಾಲೇಜು
ಬಂಕಾರ - ೫೮೧೨೦೫
ಹಾವೇರಿ ಜಿಲ್ಲೆ

ಭಾರತದ ಇಂದಿನ ರಾಜಕೀಯ ಪದ್ಧತಿಯಲ್ಲಿ ಉಪರಾಷ್ಟ್ರಪತಿಯಂತಹ ಅತ್ಯುನ್ನತ ಸ್ಥಾನಗಳಿಗೆ ಉನ್ನತ ಆದರ್ಶ ಹಾಗೂ ವ್ಯಕ್ತಿತ್ವ ಹೊಂದಿದವರನ್ನು ಆಯ್ಕೆ ಮಾಡಿಕೊಂಡು ಬರುತ್ತಿರುವುದು ಪ್ರಜಾಪ್ರಭುತ್ವದ ಮೌಲ್ಯಗಳಿಗೆ ಹೆಚ್ಚಿನ ರೀತಿಯಲ್ಲಿ ಮನ್ನಣೆ ನೀಡಿದಂತಾಗಿದೆ. ಭಾರತದ ಸಂವಿಧಾನವು ೬೩ನೇ ವಿಧಿ ಪ್ರಕಾರ ಉಪರಾಷ್ಟ್ರಪತಿ ಇರುವಿಕೆಗೆ ಅವಕಾಶ ಮಾಡಿಕೊಟ್ಟಿದೆ. ವಾರಂಟ್ ಆಫ್ ಪ್ರೆಸಿಡೆನ್ಸ್‌ನಲ್ಲಿ ಉಪರಾಷ್ಟ್ರಪತಿ ಎರಡನೇ ಸ್ಥಾನವನ್ನು ಗಳಿಸಿಕೊಂಡಿರುತ್ತಾರೆ.

ಉಪರಾಷ್ಟ್ರಪತಿ ರಾಜ್ಯ ಸಭೆಯ ಪದನಿಮಿತ್ತ ಛೇರಮನ್ ಆಗಿ ಕೆಲಸ ನಿರ್ವಹಿಸುತ್ತಾರೆ. ರಾಷ್ಟ್ರಾಧ್ಯಕ್ಷರು ಗೈರು ಹಾಜರಿಯಾದಾಗ, ರಾಜೀನಾಮೆ ನೀಡಿದಾಗ, ದೀರ್ಘ ಖಾಯಿಲೆಗೆ ಗುರಿಯಾದಾಗ, ವಿದೇಶಗಳಿಗೆ ದೀರ್ಘಕಾಲದವರೆಗೆ ಭೇಟಿ ನೀಡಿದ ಪ್ರಸಂಗದಲ್ಲಿ, ಅವಧಿಗೆ ಮುನ್ನ ಮರಣ ಹೊಂದಿದಾಗ ಅಥವಾ ಮಹಾಭಿಯೋಗದ (Impeachment) ಮೂಲಕ ಪದಚ್ಯುತಿಗೊಂಡಾಗ ಇಂತಹ ಸಂದರ್ಭ ಬಂದೊದಗಿದಾಗ ಆ ಸ್ಥಾನಕ್ಕೆ ಬೇರೊಬ್ಬ ವ್ಯಕ್ತಿ ಆಯ್ಕೆಯಾಗುವವರೆಗೆ ಉಪರಾಷ್ಟ್ರಪತಿ ಹಂಗಾಮಿ ರಾಷ್ಟ್ರಾಧ್ಯಕ್ಷರಾಗಿ ರಾಷ್ಟ್ರಪತಿಯವರು ಚಲಾಯಿಸುವಂತ ಅಧಿಕಾರ ಮತ್ತು ಕರ್ತವ್ಯಗಳನ್ನು ಇವರು ಚಲಾಯಿಸುವವರಾಗಿರುತ್ತಾರೆ. ಅಂತಹ ಸಂದರ್ಭದಲ್ಲಿ ಮಾತ್ರ ರಾಷ್ಟ್ರ ರಾಜಕಾರಣದಲ್ಲಿ ಉಪರಾಷ್ಟ್ರಪತಿ ಪ್ರಮುಖ ಪಾತ್ರವಹಿಸುತ್ತಾರೆ.

## ಅರ್ಹತೆಗಳು

ಉಪರಾಷ್ಟ್ರಪತಿ ಹುದ್ದೆಗೆ ಸ್ಪರ್ಧಿಸಬಯಸುವ ಅಭ್ಯರ್ಥಿ ಈ ಕೆಳಕಂಡ ಅರ್ಹತೆಗಳನ್ನು ಹೊಂದಿರಬೇಕೆಂದು ಸಂವಿಧಾನದ ೬೬ (೩)ನೇ ಉಪವಿಧಿ ಸ್ಪಷ್ಟಪಡಿಸುತ್ತದೆ. ಮುಖ್ಯವಾಗಿ

೧. ಭಾರತೀಯ ಪೌರತ್ವವನ್ನು ಪಡೆದಿರಬೇಕು.
೨. ಕನಿಷ್ಠಪಕ್ಷ ೩೫ ವರ್ಷ ವಯೋಮಿತಿಯನ್ನು ಹೊಂದಿರಬೇಕು.
೩. ರಾಜ್ಯ ಸಭೆಗೆ ಸದಸ್ಯನಾಗಲು ಬೇಕಾದ ಅರ್ಹತೆಯನ್ನು ಹೊಂದಿರಬೇಕು.
೪. ಸಂವಿಧಾನದ ೬೬ (೪) ವಿಧಿ ಪ್ರಕಾರ ಕೇಂದ್ರ ಅಥವಾ ರಾಜ್ಯ ಸರಕಾರದ ಯಾವುದೇ ಲಾಭದಾಯಕ ಹುದ್ದೆಯನ್ನು ಹೊಂದಿರಬಾರದು.
೫. ಕೇಂದ್ರ ಅಥವಾ ರಾಜ್ಯ ಶಾಸಕಾಂಗದ ಸದಸ್ಯನಾಗಿರಬಾರದು ಎಂದು ೬೬(೨)ನೇ ಉಪವಿಧಿ ತಿಳಿಸುತ್ತದೆ. ಆಗಿದ್ದರೆ ಆಯ್ಕೆಯಾದ ನಂತರ ಆ ಸ್ಥಾನವನ್ನು ಕಳೆದುಕೊಳ್ಳಬೇಕಾಗಿರುತ್ತದೆ.

## ಚುನಾವಣೆ

ಉಪ ರಾಷ್ಟ್ರಪತಿಯ ಚುನಾವಣೆ ಅಷ್ಟೇನೂ ಕ್ಲಿಷ್ಟಕರವಾದ ವಿಧಾನವೇನಲ್ಲ. ಉಪ ರಾಷ್ಟ್ರಪತಿಯ ಚುನಾವಣೆ ಬಗ್ಗೆ ಸಂವಿಧಾನ ೬೬ (೧)ನೇ ಉಪವಿಧಿ ಸ್ಪಷ್ಟಪಡಿಸುತ್ತದೆ.

ಉಪರಾಷ್ಟ್ರಪತಿ ಹುದ್ದೆಗೆ ಸ್ಪರ್ಧಿಸಬಯಸುವ ಅಭ್ಯರ್ಥಿಯು ಕನಿಷ್ಟ ೨೫೦೦ ರೂ. ಠೇವಣಿ ಇಡಬೇಕಾಗಿರುತ್ತದೆ. ಇವರ ನಾಮಪತ್ರಕ್ಕೆ ೫ ಜನ ಸಂಸತ್ ಸದಸ್ಯರು ಸೂಚಿಸಬೇಕು ಹಾಗೆಯೇ ೫ ಜನ ಸಂಸತ್ ಸದಸ್ಯರು ಅನುಮೋದಿಸಬೇಕಾಗಿರುತ್ತದೆ.

ಸಂಸತ್ತಿನ ಉಭಯ ಸದನಗಳ ಸದಸ್ಯರು ಗುಪ್ತ ಮತದಾನದ ಮೂಲಕ ಆಯ್ಕೆ ಮಾಡುತ್ತಾರೆ. ಸಂಸತ್ತಿನ ನಾಮಕರಣಗೊಂಡ ಸದಸ್ಯರೆಲ್ಲರೂ ಭಾಗವಹಿಸುತ್ತಾರೆ. ಈ ಚುನಾವಣೆಯಲ್ಲಿ ಪ್ರಮಾನಾನುಗುಣ ಪ್ರಾತಿನಿಧ್ಯತಾ ಏಕಮತ ವರ್ಗಾವಣಾ ಪದ್ಧತಿಯನ್ನು ಅಳವಡಿಸಿಕೊಂಡಿರಲಾಗಿರುತ್ತದೆ. ಚುನಾವಣೆ ಸಂಸತ್ ಭವನದಲ್ಲಿ ನಡೆಯುತ್ತದೆ. ನಂತರ ಎಣಿಕೆ ಮಾಡಿ ಫಲಿತಾಂಶವನ್ನು ಘೋಷಿಸಲಾಗುತ್ತದೆ.

ಪ್ರಾರಂಭದಲ್ಲಿ ಉಪರಾಷ್ಟ್ರಪತಿಯನ್ನು ಉಭಯ ಸದನದ ಜಂಟೀ ಅಧಿವೇಶನದಲ್ಲಿ ಆಯ್ಕೆ ಮಾಡಲಾಗುತ್ತಿತ್ತು. ಆದರೆ ೧೯೬೧ರಲ್ಲಿ ಸಂವಿಧಾನಕ್ಕೆ ೧೧ನೇ ತಿದ್ದುಪಡಿ ತರುವ ಮೂಲಕ ಉಪರಾಷ್ಟ್ರಪತಿಯನ್ನು ಉಭಯ ಸದನಗಳ ಸದಸ್ಯರು ಸೇರಿ ಆಯ್ಕೆ ಮಾಡುವಂತೆ ಮಾಡಲಾಯಿತು.

## ಪ್ರಮಾಣ ವಚನ ಸ್ವೀಕಾರ

ಭಾರತ ಸಂವಿಧಾನದ ೬೯ನೇ ವಿಧಿ ಅನ್ವಯ ಉಪರಾಷ್ಟ್ರಪತಿ ರಾಷ್ಟ್ರಪತಿಯ ಸಮ್ಮುಖದಲ್ಲಿ "ಸಂವಿಧಾನದ ಘನತೆ, ಗೌರವವನ್ನು ಎತ್ತಿ ಹಿಡಿಯುವ ಮೂಲಕ ತನ್ನ ಕರ್ತವ್ಯವನ್ನು ನಿಷ್ಠೆಯಿಂದ, ಪ್ರಾಮಾಣಿಕತೆಯಿಂದ ಶ್ರದ್ಧೆಯಿಂದ ನಿರ್ವಹಿಸಿಕೊಂಡು ಹೋಗುತ್ತೇನೆ" ಎಂದು ಹೇಳುವ ಮೂಲಕ ಅಧಿಕಾರವನ್ನು ಸ್ವೀಕಾರ ಮಾಡುತ್ತಾರೆ.

## ಅಧಿಕಾರವಧಿ

ಭಾರತ ಸಂವಿಧಾನದ ೬೭ನೇ ವಿಧಿ ಅನ್ವಯ ಉಪರಾಷ್ಟ್ರಪತಿ ಅಧಿಕಾರ ವಹಿಸಿಕೊಂಡ ದಿನದಿಂದ ೫ ವರ್ಷಗಳವರೆಗೆ ಅಧಿಕಾರವಧಿ ಇರುತ್ತದೆ ಎಂದು ಸ್ಪಷ್ಟಪಡಿಸುತ್ತದೆ. ಅವಧಿ ಮುಗಿದ ನಂತರ ತನಗೆ ಇಚ್ಛೆ ಇದ್ದರೆ ಎರಡನೇ ಭಾರಿಗೆ ಸ್ಪರ್ಧಿಸಬಹುದಾಗಿದೆ. ಉದಾ: ಡಾ|| ರಾಧಾಕೃಷ್ಣನ್ ಉಪರಾಷ್ಟ್ರಪತಿಯಾಗಿ ಎರಡು ಭಾರಿ ಆಯ್ಕೆಯಾಗಿರುವುದನ್ನು ಕಾಣಬಹುದು. ಒಂದು ಪಕ್ಷ ಆ ಹುದ್ದೆಯಲ್ಲಿ ಮುಂದುವರಿಯಲು ಇಷ್ಟವಿಲ್ಲದಿದ್ದ ಪಕ್ಷದಲ್ಲಿ ರಾಷ್ಟ್ರಪತಿಗೆ ತನ್ನ ರಾಜೀನಾಮೆ ಪತ್ರ ಬರೆದು ಕೊಡುವ ಮೂಲಕ ಹೊರಬರಬಹುದಾಗಿದೆ. ಒಂದು

ವೇಳೆ ಪೂರ್ಣ ಅವಧಿಯವರೆಗೆ ಇದ್ದಿದ್ದೇ ಆದರೆ ಅವಧಿ ಮುಗಿದ ನಂತರ ಆ ಸ್ಥಾನಕ್ಕೆ ಬೇರೊಬ್ಬ ವ್ಯಕ್ತಿ ಆಯ್ಕೆಯಾಗಿ ಅಧಿಕಾರ ವಹಿಸಿಕೊಳ್ಳುವವರಿಗೆ ಉಸ್ತುವಾರಿಯಾಗಿ ಆ ಸ್ಥಾನದಲ್ಲಿ ಮುಂದುವರಿಯಬಹುದೆಂದು ಸಂವಿಧಾನದ ೬೭ನೇ (ಸಿ) ಉಪವಿಧಿ ಆ ಬಗ್ಗೆ ಸ್ಪಷ್ಟಪಡಿಸುತ್ತದೆ.

## ಸವಲತ್ತುಗಳು

ಭಾರತ ಸಂವಿಧಾನದ ೬೫ (೩)ನೇ ಉಪವಿಧಿ ಈ ಬಗ್ಗೆ ಸ್ಪಷ್ಟಪಡಿಸುತ್ತದೆ. ಉಪರಾಷ್ಟ್ರಪತಿಯವರು ಮಾಸಿಕವಾಗಿ ಪ್ರತಿತಿಂಗಳಿಗೆ ರೂ. ೭,೫೦೦ ರೂ. ವೇತನ ಮತ್ತು ರೂ. ೧೦೦೦ ಇತರೆ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ. ಜೊತೆಗೆ ೧೯೯೦ರ ಕಾಯ್ದೆ ಅನ್ವಯ ಸಂಸತ್ತಿನ ಸದಸ್ಯರಂತೆ ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ. ಇವುಗಳ ಜೊತೆಗೆ ಉಚಿತ ವಸತಿ, ಉಚಿತ ವೈದ್ಯಕೀಯ, ಉಚಿತ ಟೆಲಿಫೋನ್ ಮತ್ತು ಟೆಲಿಗ್ರಾಫ್, ವಾಹನ ಸೌಕರ್ಯ ಒದಗಿಸಲಾಗಿರುತ್ತದೆ. ಉಪರಾಷ್ಟ್ರಪತಿ ಹಂಗಾಮಿ ರಾಷ್ಟ್ರಪತಿಯಾಗಿ ಅಧಿಕಾರ ವಹಿಸಿಕೊಂಡಾಗ ಆಗ ರಾಷ್ಟ್ರಪತಿ ಪಡೆಯುವಂತಹ ಎಲ್ಲಾ ರೀತಿಯ ಸೇವಾ ಸವಲತ್ತುಗಳನ್ನು ಪಡೆಯಲು ಅರ್ಹರಾಗಿರುತ್ತಾರೆ.

## ರಕ್ಷಣೆಗಳು

ರಾಷ್ಟ್ರಪತಿಗೆ ಯಾವ ರೀತಿಯ ರಕ್ಷಣೆಗಳನ್ನು ನೀಡಲಾಗುತ್ತದೆಯೋ, ಅದೇ ರೀತಿ ಇವರಿಗೂ ಸಹ ನೀಡಲಾಗುತ್ತದೆ.

೧. ಉಪರಾಷ್ಟ್ರಪತಿ ಚಲಾಯಿಸಿದ ಅಧಿಕಾರ ಮತ್ತು ಕರ್ತವ್ಯಗಳನ್ನು ರಾಷ್ಟ್ರದ ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನಿಸುವಂತಿಲ್ಲ.

೨. ಇವರ ಅಧಿಕಾರಾವಧಿಯಲ್ಲಿ ಯಾವುದೇ ಅಪರಾಧಕ್ಕಾಗಿ ಬಂಧಿಸಿ ಬಂಧನದಲ್ಲಿಡಲು ಬರುವಂತಿಲ್ಲ.

೩. ಅಪರಾಧ ಅಥವಾ ಸಿವಿಲ್ ಮೊಕದ್ದಮೆಗಳನ್ನು ಅವರ ವಿರುದ್ಧ ಹೂಡಲು ಬರುವಂತಿಲ್ಲ.

ಒಂದು ಪಕ್ಷ ಹೂಡಬೇಕಾದರೆ ಎರಡು ತಿಂಗಳ ಮುಂಚಿತವಾಗಿ ಅವರಿಗೆ ಆ ಬಗ್ಗೆ ನೋಟೀಸ್‌ನ್ನು ನೀಡಬೇಕಾಗಿರುತ್ತದೆ.

## ಪದಚ್ಯುತಿಗೊಳಿಸುವ ವಿಧಾನ

ರಾಷ್ಟ್ರದ ರಾಷ್ಟ್ರಪತಿಯವರನ್ನು ಮಹಾಭಿಯೋಗದ ಮೂಲಕ ಹೇಗೆ ಪದಚ್ಯುತಿಗೊಳಿಸಲಾಗುತ್ತದೆಯೋ ಅದೇ ವಿಧಾನವನ್ನು ಇವರಿಗೂ ಸಹ ಅನ್ವಯಿಸುತ್ತದೆಂದು ಸಂವಿಧಾನದ ೬೭ (೨)ನೇ ಉಪವಿಧಿ ಆ ಬಗ್ಗೆ ಸ್ಪಷ್ಟಪಡಿಸುತ್ತದೆ.

### ಭಾರತದ ಈವರೆಗಿನ ಉಪರಾಷ್ಟ್ರಪತಿಗಳು

| | |
|---|---|
| ೧. ಡಾ.ಎಸ್.ರಾಧಾಕೃಷ್ಣನ್ | ೧೯೫೨ ರಿಂದ ೧೯೬೨ |
| ೨. ಡಾ. ಜಾಕೀರ್ ಹುಸೇನ್ | ೧೯೬೨ ರಿಂದ ೧೯೬೭ |
| ೩. ವರಹಗಿರಿ ವೆಂಕಟಗಿರಿ | ೧೯೬೭ ರಿಂದ ೧೯೬೯ |
| ೪. ಜಿ.ಎಸ್.ಪಾಠಕ್ | ೧೯೬೯ ರಿಂದ ೧೯೭೪ |
| ೫. ಬಿ.ಡಿ. ಜತ್ತಿ | ೧೯೭೪ ರಿಂದ ೧೯೭೯ |
| ೬. ಹಿದಾಯತ್ ಉಲ್ಲಾ | ೧೯೭೯ ರಿಂದ ೧೯೮೪ |
| ೭. ಆರ್.ವೆಂಕಟರಾಮನ್ | ೧೯೮೪ ರಿಂದ ೧೯೮೭ |
| ೮. ಡಾ. ಎಸ್.ಡಿ.ಶರ್ಮಾ | ೧೯೮೭ ರಿಂದ ೧೯೯೨ |
| ೯. ಕೆ.ಆರ್.ನಾರಾಯಣ | ೧೯೯೨ ರಿಂದ ೧೯೯೭ |
| ೧೦. ಕೃಷ್ಣಕಾಂತ್ | ೧೯೯೭ ರಿಂದ |

ಉಪರಾಷ್ಟ್ರಪತಿಯವರನ್ನು ಮಹಾಭಿಯೋಗದ ಹೊರತುಪಡಿಸಿ ಬೇರೆ ಯಾವುದೇ ಕಾರಣದಿಂದ ಪದಚ್ಯುತಿಗೊಳಿಸಲು ಬರುವಂತಿಲ್ಲ. ಒಂದು ಪಕ್ಷ ರಾಷ್ಟ್ರದ್ರೋಹವೆಸಗಿದಾಗ ಅಥವಾ ಸಂವಿಧಾನದ ವಿರುದ್ಧವಾಗಿ ವರ್ತಿಸಿದಂತಹ ಸಂದರ್ಭದಲ್ಲಿ ಆ ಬಗ್ಗೆ ಕ್ರಮಕೈಗೊಳ್ಳುವ ಸಲುವಾಗಿ ಮೊದಲು ಅವರ ವಿರುದ್ಧ ನಿರ್ಣಯವನ್ನು ರಾಜ್ಯ ಸಭೆಯಲ್ಲಿ ಕೈಗೊಳ್ಳಲಾಗುತ್ತದೆ. ಅದಕ್ಕೂ ಮುಂಚಿತವಾಗಿ (೧೪ ದಿನಗಳೊಳಗಾಗಿ) ಅವರಿಗೆ ಒಂದು ನೋಟೀಸನ್ನು ನೀಡಬೇಕಾಗಿರುತ್ತದೆ. ನಂತರ ನಿಗದಿಪಡಿಸಿದ ದಿನಾಂಕದಂದು ಚರ್ಚೆಗೆ ತೆಗೆದುಕೊಳ್ಳಲಾಗುತ್ತದೆ. ಅವರ ವಿರುದ್ಧ ಚರ್ಚೆ ನಡೆಯುವ ಸಂದರ್ಭದಲ್ಲಿ ಉಪರಾಷ್ಟ್ರಪತಿಯವರೇ ರಾಜ್ಯಸಭೆಯ ಛೇರಮನ್ ಆಗಿರುತ್ತಾರೆ. ಆದರೆ ಸಂವಿಧಾನದ ೯೨ (೨)ನೇ ವಿಧಿ ಪ್ರಕಾರ ಇವರಿಗೆ ಮತ ಚಲಾಯಿಸುವ ಅಧಿಕಾರವಿರುವುದಿಲ್ಲ.

ಹೀಗೆ ರಾಜ್ಯಸಭೆಯಲ್ಲಿ ೨-೩ ಶೇ. ಬಹುಮತದ ಮೇರೆಗೆ ಆ ನಿರ್ಣಯವನ್ನು ಲೋಕಸಭೆಯ ಒಪ್ಪಿಗೆಗಾಗಿ ಕಳುಹಿಸಿಕೊಡಲಾಗುತ್ತದೆ. ಲೋಕಸಭೆ ಉಪರಾಷ್ಟ್ರಪತಿಯ ಮಹಾಭಿಯೋಗದ ಬಗ್ಗೆ ಕುರಿತಂತೆ ಚರ್ಚೆಗೆ ಗುರಿಪಡಿಸುತ್ತದೆ. ನಂತರ ಮತಕ್ಕೆ ಹಾಕಲಾಗುತ್ತದೆ. ದೋಷಾರೋಪಣೆಯ ಪರವಾಗಿ ೨-೩ ಶೇ. ಸದಸ್ಯರು ಮತ ಚಲಾಯಿಸಿದ್ದೇ ಆದರೆ ಉಪರಾಷ್ಟ್ರಪತಿ ಅಧಿಕಾರ ತ್ಯಜಿಸಿ ಹೊರಬರಬೇಕಾಗುತ್ತದೆ. ಒಂದು ಪಕ್ಷ ಕೆಳಮನೆಯಲ್ಲಿ ೨-೩ ರಷ್ಟು ಬಹುಮತ ಸಿಗದಿದ್ದರೆ ಮಹಾಭಿಯೋಗ ಸಾಭೀತಾಗಿಲ್ಲ ಎಂದು ತಿಳಿಯಲಾಗುವುದು. ಆಗ ಉಪರಾಷ್ಟ್ರಪತಿ ಯಥಾ ಪ್ರಕಾರ ಆ ಸ್ಥಾನದಲ್ಲಿ ಮುಂದುವರಿಯಬಹುದಾಗಿದೆ.

ಭಾರತ ಸಂವಿಧಾನದ ೬೮ನೇ ವಿಧಿ ಅನ್ವಯ ಉಪರಾಷ್ಟ್ರಪತಿ ಅವಧಿ ಮುಗಿಯುವುದಕ್ಕಿಂತ ಮುಂಚಿತವಾಗಿ ಆ ಸ್ಥಾನಕ್ಕೆ ಚುನಾವಣೆ ನಡೆಸಬೇಕೆಂದು ಈ ವಿಧಿ ಸ್ಪಷ್ಟಪಡಿಸುತ್ತದೆ. ಉಪರಾಷ್ಟ್ರಪತಿ ನಿಧನರಾದರೆ, ರಾಜೀನಾಮೆ ನೀಡಿದರೆ ಮತ್ತು ಪದಚ್ಯುತಿಗೊಂಡರೆ ಅತೀ ಶೀಘ್ರವಾಗಿ ಆ ಸ್ಥಾನಕ್ಕೆ ಚುನಾವಣೆ ನಡೆಸಬೇಕಾಗಿರುತ್ತದೆ.

## ಹಂಗಾಮಿ ರಾಷ್ಟ್ರಪತಿಗಳು

೧. ೧೯೬೦ ರಲ್ಲಿ ೧೫ ದಿನಗಳ ಪ್ರವಾಸಕ್ಕಾಗಿ ಡಾ॥ ಬಾಬುರಾಜೇಂದ್ರ ಪ್ರಸಾದ್‌ರವರು ರಷ್ಯಾಕ್ಕೆ ಭೇಟಿ ನೀಡಿದಾಗ ಉಪರಾಷ್ಟ್ರಪತಿಯಾಗಿದ್ದ ಡಾ॥ ರಾಧಾಕೃಷ್ಣನ್ ಪ್ರಪ್ರಥಮ ಬಾರಿಗೆ ಹಂಗಾಮಿ ರಾಷ್ಟ್ರಪತಿಯಾಗಿ ಕೆಲಸ ನಿರ್ವಹಿಸುವಂತೆ ಮಾಡಲಾಯಿತು. ಡಾ॥ರಾಜೇಂದ್ರ ಪ್ರಸಾದ್‌ರವರು ತೀವ್ರ ಖಾಯಿಲೆಗೆ ಗುರಿಯಾದಾಗ ಆ ಸಂದರ್ಭದಲ್ಲಿಯೂ ಸಹ ರಾಧಕೃಷ್ಣನ್ ಎರಡನೆ ಭಾರಿಗೆ ಹಂಗಾಮಿ ರಾಷ್ಟ್ರಾಧ್ಯಕ್ಷರಾಗಿ ಅಧಿಕಾರ ಚಲಾಯಿಸಿದ್ದನ್ನು ಕಾಣಬಹುದಾಗಿದೆ.

೨. ರಾಷ್ಟ್ರಪತಿ ಡಾ॥ರಾಧಾಕೃಷ್ಣನ್ ಕಣ್ಣಿನ ಶಸ್ತ್ರ ಚಿಕಿತ್ಸೆಗೆಂದು ಲಂಡನ್‌ಗೆ ಹೋದಾಗ ಉಪರಾಷ್ಟ್ರಪತಿಯಾಗಿದ್ದ ಡಾ॥ ಜಾಕೀರ್

ಹುಸೇನ್ ಹಂಗಾಮಿ ರಾಷ್ಟ್ರಾಧ್ಯಕ್ಷರಾಗಿ ಅಧಿಕಾರ ಚಲಾಯಿಸಿದ್ದನ್ನು ಮನಗಾಣಬಹುದಾಗಿದೆ.

೩. ರಾಷ್ಟ್ರಪತಿ ಜಾಕೀರ್ ಹುಸೇನ್ ನಿಧನರಾದಾಗ ಆಗ ಉಪರಾಷ್ಟ್ರಪತಿಯಾಗಿದ್ದ ವರಹಗಿರಿ ವೆಂಕಟಗಿರಿಯವರು ೩.೫.೧೯೬೯ ರಿಂದ ೨೦.೭.೧೯೬೯ರವರೆಗೆ ಹಂಗಾಮಿ ರಾಷ್ಟ್ರಪತಿಯಾಗಿ ಕೆಲಸ ನಿರ್ವಹಿಸಿದರು.

೪. ೧೯೬೯ರಲ್ಲಿ ರಾಷ್ಟ್ರಪತಿ ಹುದ್ದೆಗೆ ಚುನಾವಣೆ ಘೋಷಿಸಿದ್ದರಿಂದ ವಿ.ವಿ. ಗಿರಿಯವರು ಹಂಗಾಮಿ ರಾಷ್ಟ್ರಪತಿ ಹುದ್ದೆಯನ್ನು ತ್ಯಜಿಸಿ ಚುನಾವಣೆ ಸ್ಪರ್ಧಿಸಲು ಮುಂದಾಗಿದ್ದರಿಂದ ಆಗ ಏಕಕಾಲದಲ್ಲಿ ರಾಷ್ಟ್ರಪತಿ ಮತ್ತು ಉಪರಾಷ್ಟ್ರಪತಿ ಎರಡು ಸ್ಥಾನಗಳು ಖಾಲಿಯಾಗಿದ್ದರಿಂದ ಸುಪ್ರೀಂ ಕೋರ್ಟಿನ ಮುಖ್ಯ ನ್ಯಾಯಾಧೀಶರಾಗಿದ್ದ ಶ್ರೀ ಹಿದಾಯತ್‌ಉಲ್ಲಾರವರು ೨೦.೭.೧೯೬೯ ರಿಂದ ೨೪.೮.೧೯೬೯ರವರೆಗೆ ಹಂಗಾಮಿ ರಾಷ್ಟ್ರಪತಿಯಾಗಿ ಅಧಿಕಾರ ವಹಿಸಿಕೊಂಡು ಕರ್ತವ್ಯ ನಿರ್ವಹಿಸಿರುವುದನ್ನು ಕಾಣಬಹುದಾಗಿದೆ.

೫. ರಾಷ್ಟ್ರಪತಿಯಾಗಿದ್ದ ಪಕ್ರುದಿನ್ ಆಲಿ ಅಹಮದ್ ಅವಧಿಗೆ ಮುನ್ನ ಮರಣ ಹೊಂದಿದ್ದರಿಂದ ಆಗ ಉಪರಾಷ್ಟ್ರಪತಿಯಾಗಿದ್ದ ಕರ್ನಾಟಕದವರೇ ಆದ ಬಿ.ಡಿ. ಜತ್ತಿಯವರು ಫೆಬ್ರವರಿ ೧೧.೧೯೭೭ ರಿಂದ ಜುಲೈ ೨೪. ೧೯೭೭ರವರೆಗೆ ಹಂಗಾಮಿ ರಾಷ್ಟ್ರಪತಿಯಾಗಿ ಕರ್ತವ್ಯವನ್ನು ನಿರ್ವಹಿಸಿದ್ದನ್ನು ಕಾಣಬಹುದು.

ಹೀಗೆ ಮೇಲ್ಕಾಣಿಸಿದಂತೆ ಉಪರಾಷ್ಟ್ರಪತಿಗಳು ವಿವಿಧ ಸಂದರ್ಭಗಳಲ್ಲಿ ಹಂಗಾಮಿ ರಾಷ್ಟ್ರಪತಿಯಾಗಿ ರಾಷ್ಟ್ರಪತಿ ನಿರ್ವಹಿಸುವಂತ ಕಾರ್ಯಗಳನ್ನು ಇವರು ಚಲಾಯಿಸುತ್ತಾರೆ. ಹೀಗೆ ಈ ರೀತಿ ಹಂಗಾಮಿ ರಾಷ್ಟ್ರಪತಿಯಾಗಿ ಅಧಿಕಾರ ವಹಿಸಿಕೊಂಡಾಗ ಆ ಸ್ಥಾನದಲ್ಲಿ ೬ ತಿಂಗಳ ಅವಧಿಗಿಂತ ಹೆಚ್ಚಿಗೆ ಮುಂದುವರಿಯಲು ಬರುವಂತಿಲ್ಲ. ಆ ಅವಧಿ ಮುಗಿಯುವುದರೊಳಗಾಗಿ ಅದಕ್ಕೆ ಪರ್ಯಾಯ ವ್ಯವಸ್ಥೆಯನ್ನು ಮಾಡಬೇಕಾಗಿರುತ್ತದೆ. ಅಂದರೆ ಚುನಾವಣೆ ನಡೆಸಿ ಹೊಸ ರಾಷ್ಟ್ರಾಧ್ಯಕ್ಷರನ್ನು ಆಯ್ಕೆ ಮಾಡಿಕೊಳ್ಳಬೇಕಾಗಿರುತ್ತದೆ.

೧೯೯೭ ಆಗಸ್ಟ್ ೧೬ ರಂದು ನಡೆದ ಚುನಾವಣೆ ಉಪರಾಷ್ಟ್ರಪತಿಯ ಹನ್ನೊಂದನೆಯ ಚುನಾವಣೆಯಾಗಿದೆ. ಕೃಷ್ಣಕಾಂತ ಅತ್ಯಧಿಕ ಮತ ಅಂತರದಲ್ಲಿ ಜಯಶೀಲರಾಗಿ ಇದೀಗ ತಾನೇ ಅಧಿಕಾರ ವಹಿಸಿಕೊಂಡಿದ್ದಾರೆ. ಕೃಷ್ಣಕಾಂತ ಅಧಿಕಾರವಧಿಯಲ್ಲಾದರೆ ಇವರು ಹನ್ನೊಂದನೆಯವರಾಗಿದ್ದಾರೆ. ವ್ಯಾಕ್ತಿಯಲ್ಲಾದರೆ ಇವರು ಹತ್ತನೆಯವರಾಗಿದ್ದಾರೆ. ಡಾ. ರಾಧಾಕೃಷ್ಣನ್ ಇವರನ್ನು ಬಿಟ್ಟರೆ ಉಳಿದವರೆಲ್ಲರೂ ಒಂದೇ ಬಾರಿಗೆ ಆಯ್ಕೆಯಾಗಿರುವುದನ್ನು ಕಾಣಬಹುದಾಗಿದೆ. ಅದರಲ್ಲೂ ಉಪರಾಷ್ಟ್ರಪತಿಯಾದವರೇ ಬಹುತೇಕವಾಗಿ ಮುಂದೆ ರಾಷ್ಟ್ರಪತಿಯಾಗಿ ಚುನಾಯಿತವಾಗುತ್ತಿರುವುದು ಒಂದು ರೀತಿಯಲ್ಲಿ ಸಂಪ್ರದಾಯವಾಗಿ ಬೆಳೆದುಕೊಂಡು ಬರುತ್ತಿರುವುದನ್ನು ಇಂದು ನಾವು ಕಾಣಬಹುದಾಗಿದೆ.

## ಅಧಿಕಾರ ಮತ್ತು ಕಾರ್ಯಗಳು

ಭಾರತ ಸಂವಿಧಾನವು ಉಪರಾಷ್ಟ್ರಪತಿ ಸ್ಥಾನದ ಹುದ್ದೆಗೆ ಅವಕಾಶ ಕಲ್ಪಿಸಿದರೂ ಸಹ ಅವರ ಅಧಿಕಾರ ಮತ್ತು ಕಾರ್ಯಗಳೇನು ಎಂಬುದರ ಬಗ್ಗೆ ಎಲ್ಲಿಯೂ ಸ್ಪಷ್ಟಪಡಿಸಿಲ್ಲ. ಆದರೂ ಸಹ ಸಂವಿಧಾನದ ೬೪ ಮತ್ತು ೬೫ನೇ ವಿಧಿ ಅನ್ವಯ ಎರಡು ರೀತಿಯಲ್ಲಿ ತಮ್ಮ ಕರ್ತವ್ಯವನ್ನು ನಿರ್ವಹಿಸುತ್ತಾರೆ.

೧. ಭಾರತ ಸಂವಿಧಾನದ ೬೪ನೇ ವಿಧಿ ಅನ್ವಯ ಉಪರಾಷ್ಟ್ರಪತಿ ರಾಜ್ಯಸಭೆಯ Ex-officio ಛೇರಮನ್ ಆಗಿ ಸದನದ ಅಧ್ಯಕ್ಷತೆಯನ್ನು ವಹಿಸುವ ಮೂಲಕ ಯಾವುದೇ ಕಾರ್ಯರೂಪ ಸುಗಮವಾಗಿ, ಸುಸೂತ್ರವಾಗಿ, ಕ್ರಮಬದ್ಧವಾಗಿ ನಡೆಯುವಂತೆ ನೋಡಿಕೊಳ್ಳುವ ಅಧಿಕಾರ ಇವರಿಗಿರುತ್ತದೆ.

೨. ಸಂವಿಧಾನದ ೬೫ (೧)ನೇ ವಿಧಿ ಪ್ರಕಾರ ರಾಷ್ಟ್ರಪತಿ ಅವಧಿಗೆ ಮುನ್ನ ರಾಜೀನಾಮೆ ನೀಡಿದಾಗ, ವಿದೇಶಗಳಿಗೆ ದೀರ್ಘಕಾಲ ಭೇಟಿ ನೀಡಿದಾಗ, ತೀವ್ರ ಖಾಯಿಲೆಗೆ ಗುರಿಯಾದಾಗ, ಮರಣ ಹೊಂದಿದಾಗ ಅಥವಾ ಮಹಾಭಿಯೋಗದ ಮೂಲಕ ಅಧಿಕಾರ ತ್ಯಜಿಸಿದಾಗ ಹೀಗೆ ಈ ಮೇಲ್ಕಂಡಂತೆ ಯಾವುದೇ ಸಂದರ್ಭದಲ್ಲಿ ರಾಷ್ಟ್ರಪತಿ ಸ್ಥಾನ ಖಾಲಿಯಾದಾಗ ಉಪರಾಷ್ಟ್ರಪತಿ ಹಂಗಾಮಿ ರಾಷ್ಟ್ರಪತಿಯಾಗಿ ಅಧಿಕಾರ ವಹಿಸಿಕೊಳ್ಳುವ ಮೂಲಕ ರಾಷ್ಟ್ರಪತಿ ಹೊಂದಿರುವಂತ ಅಧಿಕಾರ ಮತ್ತು ಕರ್ತವ್ಯಗಳನ್ನು ಚಲಾಯಿಸುವವರಾಗಿರುತ್ತಾರೆ. ಈ ಮೇಲಿನ ಅಧಿಕಾರಗಳ ಜೊತೆಗೆ ಉಪರಾಷ್ಟ್ರಪತಿಯವರು ಕೇಂದ್ರ ಸರಕಾರ ವಹಿಸಿಕೊಟ್ಟ ಇತರೆ ಕೆಲಸಗಳನ್ನು ನಿರ್ವಹಿಸುತ್ತಾರೆ. ಅಂದರೆ ಉನ್ನತ ಸೇವೆ ಸಲ್ಲಿಸಿದವರಿಗೆ ಪ್ರಶಸ್ತಿ ನೀಡುವ ಸಮಿತಿಯ ಅಧ್ಯಕ್ಷರು ಇವರೇ ಆಗಿದ್ದು ಪ್ರಶಸ್ತಿಗೆ ಅರ್ಹರಾದವರನ್ನು ಆಯ್ಕೆ ಮಾಡುವ ಅಧಿಕಾರ ಇವರಿಗಿರುತ್ತದೆ. ಜೊತೆಗೆ ಕೆಲವು ವಿಶ್ವವಿದ್ಯಾನಿಲಯಗಳಿಗೆ ಕುಲಪತಿಗಳಾಗಿ ಕಾರ್ಯನಿರ್ವಹಿಸುವವರಾಗಿರುತ್ತಾರೆ. ಹಾಗೂ ಹೊರ ರಾಷ್ಟ್ರಗಳಲ್ಲಿ ಭಾರತವನ್ನು ಪ್ರತಿನಿಧಿಸುವರು. ಹೀಗೆ ಇನ್ನು ಹಲವು ರೀತಿಯ ಕಾರ್ಯಗಳನ್ನು ನಿರ್ವಹಿಸುತ್ತಾರೆ.




"...ಬಿಹಾರದ 'ಮೇವು ಹಗರಣ'ವೇ ಉತ್ತಮ ಸಾಕ್ಷಿ!"

## ಉಪಸಂಹಾರ

ಭಾರತದ ರಾಷ್ಟ್ರರಾಜಕಾರಣದಲ್ಲಿ ಉಪರಾಷ್ಟ್ರಪತಿ ಹೇಳಿಕೊಳ್ಳುವಂತಹ ಸ್ಥಾನಮಾನ ಹೊಂದದೆ ಇದ್ದರು ಸಹ ರಾಷ್ಟ್ರಪತಿಯ ನಂತರದ ಸ್ಥಾನಮಾನವನ್ನು ಆಕ್ರಮಿಸಿಕೊಂಡಿದ್ದಾರೆ. ಯಾವುದೇ ಕಾರಣದಿಂದ ಅವಧಿಗೆ ಮುನ್ನ ರಾಷ್ಟ್ರಪತಿ ಸ್ಥಾನ ಖಾಲಿಯಾದಾಗ ಅಂತಹ ಸಂದಿಗ್ಧ ಸಮಯದಲ್ಲಿ ಇವರು ಹಂಗಾಮಿ ರಾಷ್ಟ್ರಪತಿಯಾಗಿ ಕಾರ್ಯನಿರ್ವಹಿಸುವಾಗ ಆಗ ಮಾತ್ರ ಇವರಿಗೆ ಉನ್ನತವಾದ ಸ್ಥಾನಮಾನ ಸಿಗುತ್ತದೆ. ಆದರೆ ಇದು ಕ್ಷಣಿಕ ಅಂದರೆ ೬ ತಿಂಗಳು ಮಾತ್ರವಾಗಿರುತ್ತದೆ. ಉಳಿದಂತೆ ಇವರು ರಾಜ್ಯಸಭೆಯ Ex-officio ಛೇರಮನ್ ಆಗಿ ತಮ್ಮದೇ ಆದ ರೀತಿಯಲ್ಲಿ ಬಹುಮುಖ ವ್ಯಕ್ತಿತ್ವವನ್ನು ಪ್ರತಿಬಿಂಬಿಸುವುದರಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ.

# ಸುದ್ದಿಗೆ ಗುದ್ದು

**ದೇ**ಶದ ರಾಜಧಾನಿಯನ್ನು ದೆಹಲಿಯಿಂದ ಆಗ್ರಾಕ್ಕೆ ಹಾಗೆ ಆಗ್ರಾದಿಂದ ದೆಹಲಿಗೆ ವರ್ಗಾಯಿಸಿದ ತುಘಲಕ್‌ನ ಇತಿಹಾಸ ಎಲ್ಲರಿಗೂ ನೆನಪಿರಬೇಕಲ್ಲ. ಮರೆತು ಹೋಗಿದ್ದರೆ ಅದನ್ನು ನೆನಪಿಸುವ ಕಾರ್ಯವನ್ನು ನಮ್ಮ ವರ್ಣರಂಜಿತ ಮುಖ್ಯಮಂತ್ರಿ ಜೆ.ಎಚ್. ಪಟೇಲರು ಈಚೆಗೆ ಮಾಡಿದ್ದಾರೆ.

ಉತ್ತರ ಕರ್ನಾಟಕವನ್ನು ನಿರ್ಲಕ್ಷಿಸಲಾಗಿದೆ ಎಂದು ಆರೋಪಿಸಿದರೆ ಪಟೇಲರು ಸಚಿವ ಸಂಪುಟ ಸಭೆಯನ್ನು ಉತ್ತರ ಕರ್ನಾಟಕದಲ್ಲಿಯೇ ಮಾಡಿಬಿಡುವಾ ಎಂದು ಅಪ್ಪಣೆ ಕೊಡಿಸಿದ್ದೇ ಅಲ್ಲದೇ ಸೆಪ್ಟೆಂಬರ್ ೨೨ರಂದು ಹುಬ್ಬಳ್ಳಿಯಲ್ಲಿ ಸಚಿವ ಸಂಪುಟ ಸಭೆಯನ್ನು ನಡೆಸಿಯೂ ಬಿಟ್ಟರು. ಇದರಿಂದ ರಾಜಧಾನಿಯನ್ನು ಹುಬ್ಬಳ್ಳಿಗೇ ವರ್ಗಾಯಿಸಿದಂತಾಯಿತಲ್ಲವೇ?

ಯಾಕೆಂದರೆ ಈವರೆಗೆ ರಾಜಧಾನಿಯನ್ನು ಬಿಟ್ಟು ಉಳಿದ ಕಡೆ ಸಚಿವ ಸಂಪುಟ ಸಭೆ ನಡೆದಿರಲಿಲ್ಲ. ಮುಖ್ಯಮಂತ್ರಿಗಳ ಈ ಕಾರ್ಯದಿಂದ ಅವರು ಉತ್ತರ ಕರ್ನಾಟಕಕ್ಕೆ ಅನ್ಯಾಯವಾಗಿದೆ ಎಂಬುದನ್ನು ಒಪ್ಪಿಕೊಂಡಂತಾಯಿತು.

ಉತ್ತರ ಕರ್ನಾಟಕವನ್ನು ಎಲ್ಲ ದೃಷ್ಟಿಯಿಂದಲೂ ಕಡೆಗಣಿಸಲಾಗಿದೆ ಎನ್ನುವುದು ಸತ್ಯ. ಅದಕ್ಕೆ ಪುರಾವೆಗಳನ್ನು ಸೃಷ್ಟಿಸುವ ಅಗತ್ಯವೇ ಇಲ್ಲ. ಯಾಕೆಂದರೆ ಅದು ಕಣ್ಣಿಗೆ ಕಾಣುತ್ತದೆ. ಅದನ್ನು ಹೋಗಲಾಡಿಸಲು ಹುಬ್ಬಳ್ಳಿಯಲ್ಲಿ ಸಚಿವ ಸಂಪುಟ ಸಭೆ ನಡೆಸಿದರೆ ಅನ್ಯಾಯಕ್ಕೆ ನ್ಯಾಯ ದೊರಕಿಸಿಕೊಟ್ಟಂತಾಗುತ್ತದೆಯೇ?

ಉತ್ತರ ಕರ್ನಾಟಕದ ಅಭಿವೃದ್ಧಿಗಾಗಿ ೪೫೦ ಕೋಟಿ ರೂಪಾಯಿ ಯೋಜನೆ ಕೈಗೊಳ್ಳಲು ಈ ಸಂಪುಟ ಸಭೆಯಲ್ಲಿ ತೀರ್ಮಾನ ಕೈಗೊಳ್ಳಲಾಯಿತು. ಇದೇನೋ ಸ್ವಾಗತಾರ್ಹ ವಿಷಯವಾದರೂ ಅನ್ಯಾಯವನ್ನು ಸರಿಪಡಿಸುವ ಪಟೇಲರ ರೀತಿ ಮಾತ್ರ ಊಟ ಆಯಿತಾ ಎಂದು ಕೇಳಿದರೆ ಮುಂಡಾಸು ಮೂವತ್ತು ಮೂರು ಮೊಳ ಎಂದ ಹಾಗಾಯಿತು.

◆

**ಮಾ**ತು ಬಲ್ಲವನಿಗೆ ಜಗಳವಿಲ್ಲ, ಊಟ ಬಲ್ಲವನಿಗೆ ರೋಗವಿಲ್ಲ ಎಂಬ ಗಾದೆ ಉಂಟಲ್ಲ, ಆ ಗಾದೆ ಮತ್ತೊಮ್ಮೆ ನಮ್ಮ ನೆನಪಿಗೆ ಬರಲು ಮಾತಿನ ಮಲ್ಲ ಎಂದೇ ಖ್ಯಾತರಾದ ಮುಖ್ಯಮಂತ್ರಿ ಪಟೇಲರು ಕಾರಣರಾಗಿದ್ದಾರೆ.

ಪಟೇಲರು ಮಾತಿನಲ್ಲಿ ಚತುರರು ನಿಜ. ಆದರೆ ಅವರು ಮಾತು ಬಲ್ಲವರಲ್ಲ ಎಂಬುದಕ್ಕೆ ಈಚೆಗೆ ಉತ್ತರ ಕರ್ನಾಟಕದ ಪ್ರವಾಸದಲ್ಲಿ ಅವರು ಆಡಿದ ಮಾತಿನಿಂದ ಉಂಟಾದ ಜಗಳವೇ ಸಾಕ್ಷಿ.

ಬೆಳಗಾವಿಯ ಕಾರ್ಯಕರ್ತರ ಸಭೆಯಲ್ಲಿ

## ರಸ್ತೆ ಕೆಟ್ಟರೆ ಕುದುರೆ ಮೇಲೆ ಹೋಗಿ !

ಮುಖ್ಯಮಂತ್ರಿ ಅವರು ಪಾಲ್ಗೊಂಡ ಸಂದರ್ಭದಲ್ಲಿ ಕಾರ್ಯಕರ್ತನೊಬ್ಬ ಊರಲ್ಲೆಲ್ಲ ರಸ್ತೆ ತುಂಬಾ ಹದಗೆಟ್ಟಿದೆ, ಈ ಬಗ್ಗೆ ಕ್ರಮಕೈಗೊಳ್ಳಿ ಎಂದು ಮುಖ್ಯಮಂತ್ರಿ ಅವರನ್ನು ಒತ್ತಾಯಿಸಿದರು. ಅದಕ್ಕೆ ಪ್ರತಿಯಾಗಿ ಮುಖ್ಯಮಂತ್ರಿಗಳು 'ರಸ್ತೆ ಕೆಟ್ಟಿದ್ದರೆ ಕುದುರೆ ಮ್ಯಾಲೆ ಹೋಗರಪಾ' ಎಂದು ಹೇಳಿದರು. ತಾವು ಈ ರೀತಿಯ ಉತ್ತರವನ್ನು ಕೊಟ್ಟಿರುವುದಾಗಿ ಹುಬ್ಬಳ್ಳಿಯ ಸಭೆಯಲ್ಲಿ ಹೆಮ್ಮೆಯಿಂದಲೇ ಹೇಳಿಕೊಂಡರು.



ಪಟೇಲರ ಈ ಮಾತು ಈಗ ವಿವಾದಕ್ಕೆ ಕಾರಣವಾಗಿದೆ. ಈ ಹಿಂದೆ ವಿಶ್ವಸುಂದರಿ ಸ್ಪರ್ಧೆಯ ಸಮಯದಲ್ಲಿ ಸುಂದರಿಯರ ಬಗ್ಗೆ ಮಾತನಾಡಿ ವಿವಾದಕ್ಕೆ ಕಾರಣರಾಗಿದ್ದ ಪಟೇಲರು ಈಗ ಕುದುರೆ ಮ್ಯಾಲೆ ಓಡಾಡಿ ಎಂದು ಕರೆ ನೀಡಿರುವುದು ಮತ್ತೆ ಚರ್ಚೆಗೆ ಗ್ರಾಸ ಒದಗಿಸಿದೆ.

ಪಟೇಲರ ಮಾತನ್ನು ಕಟುವಾಗಿ ಟೀಕಿಸಿರುವ ವಿರೋಧ ಪಕ್ಷದ ನಾಯಕ ಮಲ್ಲಿಕಾರ್ಜುನ ಖರ್ಗೆ ಅವರು 'ರಸ್ತೆ ಸರಿ ಇಲ್ಲ ಎಂದರೆ ಕುದುರೆ ಮ್ಯಾಲೆ ಹೋಗಿ, ಕರೆಂಟಿಲ್ಲ ಎಂದರೆ ಮೊಂಬತ್ತಿ ಹಚ್ಚಿ, ನೀರಿಲ್ಲ ಎಂದರೆ ಬೀರು ಕುಡೀರಿ' ಎಂದು ಹೇಳುವ ಈ ಮುಖ್ಯಮಂತ್ರಿ ಇಟ್ಟುಕೊಂಡು ಏನಪಾ ಮಾಡೋದು ಎಂದು ಪ್ರಶ್ನಿಸಿದ್ದಾರೆ.

'ನಾನು ಮದಿರೆ ಪ್ರಿಯ' ಎಂದು ಸ್ವತಃ ಘೋಷಿಸಿಕೊಂಡಿರುವ ಮುಖ್ಯಮಂತ್ರಿ ಅವರು ಕೆ.ಎಸ್.ಆರ್.ಟಿ.ಸಿ. ಸಂಚಾರಕ್ಕಿಂತ ಕುದುರೆ ಗಾಡಿ ಸಂಚಾರವೇ ಒಳಿತು ಎಂದುಕೊಂಡಿರಬಹುದೇ?

◆

**ಕೊ**ನೆಯದಾಗಿ ಮತ್ತೆ ನ್ಯಾಯಾಂಗಕ್ಕೆ ಬರುವಾ.

ನಮ್ಮ ಅಧಿಕಾರಿಗಳು ಮೇಲ್ವರ್ಗದ ರಾಜಕಾರಣಿಗಳನ್ನು ತೃಪ್ತಿಪಡಿಸಲು ಯಾವ ರೀತಿ ಕೆಲಸ ಮಾಡುತ್ತಾರೆ ಎನ್ನುವುದಕ್ಕೆ ತಾಜಾ ಉದಾಹರಣೆಯೊಂದು ದೆಹಲಿಯಿಂದ ಬಂದಿದೆ.

ಕಾಂಗ್ರೆಸ್ ಅಧ್ಯಕ್ಷ ಸೀತಾರಾಂ ಕೇಸರಿ ಅವರು ಆದಾಯಕ್ಕಿಂತ ಹೆಚ್ಚು ಆಸ್ತಿ ಹೊಂದಿದ್ದಾರೆ ಎಂದು ಆರೋಪಿಸಿ ಅದರ ಬಗ್ಗೆ ತನಿಖೆ ನಡೆಸಲು ಸಿಬಿಐಯನ್ನು ಕೇಳಿಕೊಳ್ಳಲಾಯಿತು. ತನಿಖೆ ನಡೆಸಿದ ಸಿಬಿಐ ಸೀತಾರಾಂ ಕೇಸರಿ ಅವರು ತಿಂಗಳಿಗೆ ೧೧೪೦ ರೂಪಾಯಿ ವೆಚ್ಚ ಮಾಡುತ್ತಾರೆ ಎಂದು ದೆಹಲಿ ಹೈಕೋರ್ಟಿಗೆ ತಿಳಿಸಿತು.

ಅದಕ್ಕೆ ನ್ಯಾಯಾಧೀಶರು 'ಅವರು ತಿಂಗಳಿಗೆ ಎಷ್ಟಾದರೂ ಖರ್ಚು ಮಾಡಲಿ, ಅದು ನಮಗೆ ಬೇಕಿಲ್ಲ, ಅವರ ತಿಂಗಳ ಆದಾಯ ಎಷ್ಟು ಎಂಬುದನ್ನು ತನಿಖೆ ಮಾಡಿ' ಎಂದು ಸಿಬಿಐಗೆ ಆದೇಶಿಸಿದರು.

ಆದಾಯಕ್ಕೂ ಖರ್ಚಿಗೂ ಸಂಬಂಧ ಇರಲೇಬೇಕು ಎಂದೇನೂ ಇಲ್ಲವಲ್ಲ.

– ನಿಕೇತನ

# ವೆಂಕಟೇಶ ಶಿಕ್ಷಣ ಸಂಸ್ಥೆ

1970ರಲ್ಲಿ ಅಸ್ತಿತ್ವಕ್ಕೆ ಬಂದ ವೆಂಕಟೇಶ ಶಿಕ್ಷಣ ಸಂಸ್ಥೆಯ ರೂವಾರಿಯ ಹೆಸರು ಡಾ. ಎಂ.ವಿ. ಜಯರಾಮನ್. ಅವರು ''ಎಂ.ವಿ.ಜೆ.'' ಎಂದೇ ಖ್ಯಾತರು. 'ಎಂ.ವಿ.ಜೆ.' ಯವರ ಸಮರ್ಥ ಮಾರ್ಗದರ್ಶನ ಮತ್ತು ಕರ್ತೃತ್ವ ಶಕ್ತಿಯ ಫಲವಾಗಿ ಈ ಸಂಸ್ಥೆಯಿಂದು ಏಳು ಕಾಲೇಜುಗಳನ್ನು ನಡೆಸುತ್ತಿದೆ:



1. ಎಂ.ವಿ.ಜೆ. ಕಾಲೇಜ್ ಆಫ್ ಇಂಜಿನಿಯರಿಂಗ್
2. ಎಂ.ವಿ.ಜೆ. ಪಾಲಿಟೆಕ್ನಿಕ್
3. ಎಂ.ವಿ.ಜೆ. ಕಾಲೇಜ್ ಆಫ್ ಎಜುಕೇಷನ್
4. ಬಾಲಚಂದರ್ ಟಿ.ಸಿ.ಎಚ್. ಕಾಲೇಜ್ ಫಾರ್ ವುಮೆನ್
5. ಜಯೇಂದ್ರ ಟಿ.ಸಿ.ಎಚ್. ಕಾಲೇಜು
6. ವೆಂಕಟೇಶ ಟಿ.ಸಿ.ಎಚ್. ಕಾಲೇಜು
7. ಎಂ.ವಿ.ಜೆ. ಇನ್‌ಸ್ಟಿಟ್ಯೂಟ್ ಆಫ್ ನರ್ಸಿಂಗ್

ಕರ್ನಾಟಕದ ವೃತ್ತಿ ಶಿಕ್ಷಣ ಕ್ಷೇತ್ರದಲ್ಲಿ ತನ್ನದೇ ಆದ ಛಾಪು ಒತ್ತಿರುವ ಈ ಸಂಸ್ಥೆ ಎರಡೂವರೆ ದಶಕಗಳ ಹಿಂದೆ ಮಾರತ್‌ಹಳ್ಳಿಯಲ್ಲಿ ಟಿ.ಸಿ.ಎಚ್. ಕಾಲೇಜು ಪ್ರಾರಂಭಿಸುವುದರೊಂದಿಗೆ ತನ್ನ ಸೇವೆಗೆ ನಾಂದಿ ಹಾಡಿತು. ಇಂದು ಈ ಸಂಸ್ಥೆ ಸಂಸ್ಥಾಪಕ ಡಾ.ಎಂ.ವಿ.ಜಯರಾಮನ್‌ರ ಪುತ್ರ ಡಾ.ಎಂ.ಜೆ.ಮೋಹನ್‌ರ ನೇತೃತ್ವದಲ್ಲಿ ಬೃಹದಾಕಾರದಲ್ಲಿ ಬೆಳೆದು ನಿಂತಿದೆ. ವೃತ್ತಿಯಿಂದ ವೈದ್ಯರಾದ ಡಾ.ಮೋಹನ್ ಪ್ರವೃತ್ತಿಯಿಂದ ಆಡಳಿತ ತಜ್ಞರು. ಅವರ ಆಸಕ್ತಿಯ ಪರಿಧಿ ಶಿಕ್ಷಣರಂಗದಾಚೆಗೂ ಹಿಗ್ಗಿ ಸಾಮಾಜಿಕ, ಜಾತ್ಯಾತೀತ ಚಟುವಟಿಕೆಗಳತ್ತಲೂ ಹೊರಳಿದೆ.

**– ರತ್ನಾಕರ ಕಾಮತ್**

*ಸಂಸ್ಥೆಯ ವಿಳಾಸ:*

ಕಾರ್ಯದರ್ಶಿ

**ವೆಂಕಟೇಶ ಶಿಕ್ಷಣ ಸಂಸ್ಥೆ**

125, ಆರ್ಮ್‌ಸ್ಟ್ರಾಂಗ್ ರಸ್ತೆ,

ಶಿವಾಜಿನಗರ, ಬೆಂಗಳೂರು – 560 001

ದೂರವಾಣಿ : **5561740** ಫ್ಯಾಕ್ಸ್ : **080-5543255**

## ನೀಗದ ನೀರಿನ ಬವಣೆ

**ಕೇ**ವಲ ೧೫ ಕಿ.ಮೀ. ದೂರದಲ್ಲಿರುವ ಕೃಷ್ಣೆಯ ನೀರನ್ನು ಪಡೆಯಲು ಕಳೆದ ಮೂರು ದಶಕದಿಂದಲೂ ಸತತ ಹೋರಾಟ ನಡೆಸಿದೆವು. ದಿ. ಜೆ.ಎಸ್. ದೇಶಮುಖ ಸಚಿವರಾಗಿದ್ದಾಗ ಮಾಡಿದ ಕಾರ್ಯ ಕಾಂಗ್ರೆ ಅಧಿಕಾರದಲ್ಲಿದ್ದಾಗ ಅನುಷ್ಠಾನಕ್ಕೆ ಬಂದು ಆಗಿನ ಮುಖ್ಯಮಂತ್ರಿ ಎಸ್.ಬಂಗಾರಪ್ಪ ಬಂದು ಅದ್ಧೂರಿಯಾಗಿ ನೀರಿನ ಶುದ್ಧಿಕರಣ ಕಾರ್ಯಾಗಾರ ಉದ್ಘಾಟಿಸಿದಾಗ ಜನರು ನೀರಿನ ಬವಣೆ ಹಿಂಗಿತೆಂದು ಹರ್ಷಪಟ್ಟರು. ನಗರದಲ್ಲೀಗ ೧೦-೧೨ ದಿನಗಳಿಗೊಮ್ಮೆ ನಲ್ಲಿಯಲ್ಲಿ ನೀರು! ಈ ಕುರಿತು ಸಾರ್ವಜನಿಕರ ಪ್ರಶ್ನೆಗೆ ಪುರಸಭೆಯರು ಜಲ ಮಂಡಳಿ ಮೇಲೆ, ಜಲ ಮಂಡಳಿಯವರು ಕ.ವಿ.ಮಂ. ಮೇಲೆ ಹೀಗೆ ಹೇಳುತ್ತಾ ಸಾಗುವುದು ಎಲ್ಲಿಯವರೆಗೆ? ಇದಕ್ಕೆ ಪರಿಹಾರ ಎಂದು?

**- ನಾಗರಾಜ ಎಸ್. ಚಕ್ರಮನಿ**
ಮುದ್ದೇಬಿಹಾಳ

## 'ಇಲ್ಲ'ದ ಊರು ನನ್ನೂರು!

**ನ**ನ್ನೂರು ಕೊಪ್ಪಳ ಜಿಲ್ಲೆಗೆ ಸೇರಿರುವ ಕುಷ್ಟಗಿ ತಾಲೂಕಿನ ಯಲಬುರ್ತಿ ಎಂಬ ಗ್ರಾಮ. ಕುಷ್ಟಗಿಯಿಂದ ೮ ಕಿ.ಮೀ. ದೂರದಲ್ಲಿದ್ದು ಗಜೇಂದ್ರ ಗಡದಿಂದ ೧೯ ಕಿ.ಮೀ. ದೂರವಿದೆ. ಕುಷ್ಟಗಿಯಿಂದ ಗಜೇಂದ್ರಗಡಕ್ಕೆ ಹೋಗುವ ಮುಖ್ಯ ರಸ್ತೆಗೆ ಯಲಬುರ್ತಿ ಕ್ರಾಸ್ ಇದ್ದು, ಕ್ರಾಸ್‌ನಿಂದ ೭ ಕಿ.ಮೀ. ನನ್ನೂರಿಗೆ ಕಾಲು ನಡಿಗೆಯಿಂದ ಬರಬೇಕಾಗುತ್ತದೆ. ಇದು ಕಾಲೇಜು ವಿದ್ಯಾರ್ಥಿಗಳಿಗೆ ತೊಂದರೆದಾಯಕವಾಗಿದೆ. ನನ್ನೂರಿಗೆ ಬಸ್ಸ್ ಸೌಕರ್ಯವಿಲ್ಲ. ಇದರ ಬಗ್ಗೆ ಯಾರೂ ಲಕ್ಷ್ಯ ವಹಿಸಿಲ್ಲ.

ನನ್ನೂರಲ್ಲಿ ಸುಮಾರು ೪೦೦ ರಿಂದ ೫೦೦ ಮನೆಗಳಿದ್ದು ಗ್ರಾಮ ಪಂಚಾಯಿತಿ ಇಲ್ಲ. ಪೋಸ್ಟ್ ಆಫೀಸ್‌ನ ಸ್ಥಾನ ಲಭಿಸಿಲ್ಲ. ಪಶು ಚಿಕಿತ್ಸಾಲಯ ಇಲ್ಲ. ಸಾರ್ವಜನಿಕ ಆಸ್ಪತ್ರೆ ಇಲ್ಲಾ.

ನನ್ನೂರಿನಲ್ಲಿ ಕೆಲವು ದೊಡ್ಡ ಮನುಷ್ಯರು ಇದ್ದಾರೆ. ಅವರು ಏನು ಮಾಡುವದಕ್ಕೂ ಹೇಸುವುದಿಲ್ಲ. ಊರಿಗೆ ಸಂಬಂಧಪಟ್ಟ ಅನೇಕ ಸೌಕರ್ಯಗಳನ್ನು ತಮ್ಮ ಸ್ವಾರ್ಥಕ್ಕಾಗಿ ಬಳಸಿಕೊಂಡವರಿವರು. ಊರಲ್ಲಿ ಬಿದ್ದ ಮನೆಗಳ ಮಂಜೂರಾತಿ ಹಣವನ್ನು ತಿಂದು ನೀರು ಕುಡಿದ ಭೂಪರಿವರು.

ನನ್ನೂರಿಗೆ ಇತ್ತೀಚೆಗೆ ಬರಗಾಲ ಬಂದಿದ್ದು ಊರಲ್ಲಿದ್ದ ಅನೇಕ ಜನರು ವಲಸೆ ಹೋಗುತ್ತಿದ್ದಾರೆ. ಇಸ್ಪೀಟ್ ಮತ್ತು ಪಚೆತ್ತೆ ಆಟ ರಾಜಾರೋಷವಾಗಿ ನಡೆದಿದೆ.

**- ಎಸ್. ವೈ. ಬುಕನಟ್ಟಿ**
ಯಲಬುರ್ತಿ

# ಆಂಟಿ - ಅಂಕಲ್ ರೋಗ!

**ಬೆ**ಳಗಾಗುತ್ತಲೂ ನಮ್ಮ ಮನೆಗೆ ಬಂದ ಸುಮಾರು ವಯಸ್ಸಾದ ಕೆಲಸದವಳು (ಹೊಸಬಳು) ''ಏನ್ರಾಂಟಿ ಪಾತ್ರೆ ಆಕ್ತೀರ'' ಎಂದಾಗ ನಾನು ಸುತ್ತ ತಿರುಗಿ ನೋಡಿದ್ದೆ. ಅವಳು ಅಂದದ್ದು ನನ್ನೇ. ನನಗೇಕೋ ಪಿತ್ತ ನೆತ್ತಿಗೇರಿತು.

ಇನ್ನೊಮ್ಮೆ ಹೀಗೆ ಮಾರ್ಕೆಟ್ಟಿನಲ್ಲಿ ತರಕಾರಿ ವ್ಯಾಪಾರ ಮಾಡುತ್ತಿದ್ದೆ. ಆಂಟಿ ಎಂದು ಓಡುತ್ತ ನನ್ನ ಬಳಿಗೆ ಬಂದಿದ್ದಳು ಶ್ಯಾಮಲ. ಪ್ರಿಯ ಓದುಗರೇ ಇಲ್ಲಿ ಶ್ಯಾಮಲ ಎಂದರೆ ಚಿಕ್ಕಪುಟ್ಟ ಮಗುವಲ್ಲ ವಯಸ್ಸಿನಲ್ಲೂ ಎತ್ತರದಲ್ಲೂ ನನಗಿಂತ ದೊಡ್ಡವಳಾದ ಇನ್ನು ಮದುವೆಯಾಗದ ನಮ್ಮ ನೆರೆ ಮನೆಯ ಶ್ಯಾಮಲ ನನಗೇಕೋ ಭಾರಿ ಬೇಸರವೆನಿಸಿತು. ಮುಖ ಊದಿಸಿಕೊಂಡೇ ಬಲವಂತದ ನಗೆ ನಕ್ಕು ಅವಳನ್ನು ಸಾಗಹಾಕಿದೆ. ಹೀಗೆ ಸಿಕ್ಕಿದವರ್ನೆಲ್ಲಾ ಕರೆದು ಆ ಪದಕ್ಕೆ ಅರ್ಥವನ್ನೇ ಕಳೆಯುತ್ತಿದ್ದಾರೆ ಕೆಲವರು. ಪರಕೀಯರಿಂದ ನಮಗೆ ಆಮದಾಗಿರುವ ಮಾತುಗಳು 'ಆಂಟಿ' 'ಅಂಕಲ್' ಎನ್ನುವುದು ಈಗೀಗಂತೂ ಸಾಂಕ್ರಾಮಿಕ ರೋಗದಂತೆ ಹರಡಿಬಿಟ್ಟಿದೆ. 'ಆಂಟಿ' 'ಅಂಕಲ್' ಎಂದು ಯಾರನ್ನು ಅನ್ನಬೇಕು ಎಂಬ ವಿವೇಚನೆ ಇರಬೇಕು. ಎಳೆಯ ಮಕ್ಕಳು ದೊಡ್ಡವರನ್ನು ಎಂದರೆ ಸುಮಾರು ೧೪ ವರ್ಷದ ವಯಸ್ಸಿನ ಮಕ್ಕಳವರೆಗೂ ಆಂಟಿ, ಅಂಕಲ್ ಎಂದರೆ ಕೇಳುವುದಕ್ಕೂ ಚೆನ್ನಾಗಿರುತ್ತದೆ. ಅದು ಬಿಟ್ಟು ಅವರ ಮುಖ ಮೂತಿ ನೋಡದೆ ಸಮವಯಸ್ಕರನ್ನೋ ತಮಗಿಂತಲೂ ಚಿಕ್ಕವರನ್ನೋ ಅಥವಾ ಒಂದು, ಎರಡು, ಮೂರು ವರ್ಷ ದೊಡ್ಡವರನ್ನೋ 'ಆಂಟಿ' ಎನ್ನುವುದು ಇಲ್ಲ ಅಂಕಲ್ ಎನ್ನುವುದು ಅಷ್ಟೊಂದು ಸಮಂಜಸವಲ್ಲ ಎಂದು ನನ್ನ ಭಾವನೆ. ಹಾಗೆಂದು ಎಲ್ಲರೂ ಎಲ್ಲರನ್ನು ಹಾಗೆ ಕರೆಯುವುದಿಲ್ಲ. ಕೆಲವರು ಅಕ್ಕ, ಅಣ್ಣ ಎನ್ನುತ್ತಾರೆ. ಅದು ಸಾವಿರ ಪಾಲು ಮೇಲು ಇನ್ನು ಕೆಲವರು ಏನು ಮಾಡುತ್ತಾರೆಂದರೆ ತಮ್ಮನ್ನಾಗಲೀ ತಮ್ಮ ಮನೆಯವರನ್ನಾಗಲೀ ಆಂಟಿ (ಅಂಕಲ್) ಎಂದು ಕರೆಸಿಕೊಳ್ಳುವುದಕ್ಕೆ ಸಿದ್ಧವಿರುವುದಿಲ್ಲ. ಆದರೆ ಬೇರೆಯವರನ್ನು ತಾವು ಬೇಕೆಂತಲೇ ''ಆಂಟಿ'' ಎಂದು ಕರೆದು ತಮ್ಮ ವಯಸ್ಸನ್ನು ಮುಚ್ಚಿಡಲು ನೋಡುತ್ತಾರೆ. ಇದು ತೀರಾ ಅಸಹ್ಯವೆನಿಸುತ್ತದೆ. ಇನ್ನು ಈಗಿನ ಹದಿವಯಸ್ಸಿನವರು ತಮ್ಮ ಜೊತೆಯ ವಯಸ್ಸಿನವರನ್ನೂ ಮದುವೆಯಾಗಿ ಒಂದು ಮಗುವಾಗಿದ್ದರೆ ಸಾಕು, ಆಂಟಿ ಎನ್ನುವುದೇ ಸರಿ. ಎಷ್ಟೋ ಕಡೆ ಹೀಗೆ ಕೂಗಿಸಿಕೊಂಡು ಬೇಸರಿಸಿಕೊಂಡ ಬಹಳಷ್ಟು ಮಂದಿಯನ್ನು ಗಮನಕ್ಕೆ ತೆಗೆದುಕೊಂಡು ಈ ಪತ್ರವನ್ನು ಬರೆಯುತ್ತಿದ್ದೇನೆ. ಈ ವಿಷಯವನ್ನು ಈ ಸಾಂಕ್ರಾಮಿಕ ರೋಗವುಳ್ಳವರು ಗಮನಿಸಿದರೆ ನನ್ನ ಶ್ರಮ ಸಾರ್ಥಕ.

**- ಸಿ.ಎಸ್. ಭಾರತಿ, ಬಾಗೇಪಲ್ಲಿ**



ಚಿತ್ರ - ೧ ↑ ಚಿತ್ರ - ೨ ↓



# ಬಸುರಿ ಬಾಣಂ ವ್ಯಾಯಾ

ಶಾರೀರಿಕ ವ್ಯಾಯಾಮಗಳಿಂದ ದೇಹವು ಸಡಿಲವಾಗುತ್ತದೆ. ಮನಸ್ಸಿಗೆ ಉತ್ಸಾಹಬಂದು ಆಲಸ್ಯ ಹೊರಟುಹೋಗುತ್ತದೆ. ದೇಹದ ಮಾಟ ಉಳಿಯುತ್ತದೆ. ಅಲ್ಲದೆ ಮನುಷ್ಯನಿಗೆ ತಾನು ಯಾವುದೇ ಕೆಲಸ ಮಾಡಬಲ್ಲೆಯೆಂಬ ಆತ್ಮವಿಶ್ವಾಸ ಹುಟ್ಟುತ್ತದೆ.

ಈ ವ್ಯಾಯಾಮಗಳನ್ನು ಬೇರೆ ಬೇರೆ ರೀತಿಯಲ್ಲಿ ಮಾಡಬಹುದು. ಕುಂಗ್‌ಫೂ ಕರಾಟೆಯಂಥ ಗಡುತರವಾದ ವ್ಯಾಯಾಮ ಇರಬಹುದು. ಇಲ್ಲವೆ ಮಾನಸಿಕ ಉಲ್ಲಾಸ ತರುವ ಈಜು, ಸೈಕಲ್ಲು ತುಳಿಯುವಿಕೆಯಂತಹ ಮಧ್ಯಮ ತರಗತಿಯರಿರಬಹುದು ಅಥವಾ ಯೋಗಾಸನ, ತಿರುಗಾಟ ಈ ತರಹದ ಸೌಮ್ಯ ಸಾಧನಗಳಿರಬಹುದು.

ಆದರೆ ಬಸಿರು ಇರುವಾಗ ಯಾವ ತರಹದ ವ್ಯಾಯಾಮಗಳನ್ನು ಮಾಡಬೇಕೆಂಬುದೇ ಒಂದು ಪ್ರಶ್ನೆ. ವ್ಯಾಯಾಮಗಳಿಂದ ಬಸಿರು ಹೆಂಗಸಿಗಾಗಲೀ, ಒಳಗಿರುವ ಮಗುವಿಗಾಗಲೀ ತೊಂದರೆಯಾಗದೇ ಹೆರಿಗೆಗೆ ಅನುಕೂಲವಾಗುವಂತಿರಬೇಕು. ಕಷ್ಟಕರವಾದ ವ್ಯಾಯಾಮಗಳಿಂದ ಅನಾಹುತಗಳಾಗಬಹುದು.

## ವ್ಯಾಯಾಮಗಳನ್ನು ಯಾರು ಮಾಡಬಾರದು?

೧. ಈ ಮೊದಲೇ ರಕ್ತಸ್ರಾವವಾಗಿ, ನಂತರ ಬಸಿರು ಉಳಿದುಕೊಂಡಿದ್ದರೆ,
೨. ಹಿಂದಿನಸಲ ಬಸಿರು ಇರುವಾಗ ಅಕಾಲ ಗರ್ಭಪಾತವಾಗಿದ್ದರೆ,

# ಮತ್ತು
# ತಿಯರ
# ಮಗಳು



ಚಿತ್ರ - ೬

೩. ಈ ಬಸಿರಿನಲ್ಲಿಯೂ ಹೊಟ್ಟೆನೋವು ಬರುತ್ತಿದ್ದರೆ.

ಗರ್ಭಸ್ಥ ಸ್ತ್ರೀಯರು ಕೆಲವು ವಿಶಿಷ್ಟವಾದ ವ್ಯಾಯಾಮಗಳನ್ನು ಮಾಡಬೇಕಾಗುತ್ತದೆ. ಈ ವ್ಯಾಯಾಮಗಳಿಂದ ಅವರ ಹೆರಿಗೆಯು ಸರಾಗವಾಗಬೇಕು. ಅಂತೆಯೇ ಹೊಟ್ಟೆಯ ಸ್ನಾಯುಗಳನ್ನು ಹಿಗ್ಗಿಸುವ-ಕುಗ್ಗಿಸುವ ವ್ಯಾಯಾಮ, ಕಟಿ ಪ್ರದೇಶದ ಸ್ನಾಯುಗಳ ವ್ಯಾಯಾಮ, ಬೆನ್ನಿನ ವ್ಯಾಯಾಮ ಮುಂತಾದವುಗಳು ಅಪೇಕ್ಷಣೀಯ.

**ವ್ಯಾಯಾಮ-೧.** ಕುರ್ಚಿಯಲ್ಲಿ ಕುಳಿತು ಎದೆಗೆ ಎರಡೂ ಕೈಗಳನ್ನು ಮಡಿಚಿ ಒತ್ತಿಕೊಂಡು ಜೋರಾಗಿ ಉಸಿರಾಡುವುದು.

**ವ್ಯಾಯಾಮ-೨.** ಎದ್ದು ನಿಂತುಕೊಂಡು ಕೈಗಳೆರಡನ್ನು ಚಾಚಿ ಉಸಿರನ್ನು ತೆಗೆದುಕೊಳ್ಳುತ್ತ ಹೋದಂತೆ ಕೈಗಳನ್ನು ಮೇಲೇರಿಸುವುದು ನಂತರ ಉಸಿರನ್ನು ಬಿಡುತ್ತಹೋದಂತೆ ಕೈಗಳನ್ನು ಕೆಳಗೆ ತರುವುದು.

**ವ್ಯಾಯಾಮ-೩.** ನೆಲದ ಮೇಲೆ ಚಕ್ಕಳಪಾಳ ಹಾಕಿಕುಳಿತು ಕೈಗಳೆರಡನ್ನು ಮಡಚಿ ಜೋರಾಗಿ ಉಸಿರಾಡಿ ಎದೆಯ ಚರ್ಮ ಕೈಗೆ ತಾಕುವಂತೆ ಮಾಡುವುದು.

**ವ್ಯಾಯಾಮ-೪.** ಕಾಲುಗಳನ್ನು ಮಡಚಿ ಹಿಂಬಡದ ಮೇಲೆ ಕುಳಿತುಕೊಂಡು ಕೈಗಳೆರಡನ್ನು ಮಂಡಿಯ ಮೇಲೆಯಿಟ್ಟು ಎದೆಯನ್ನು ಸೆಟಿಸಿ ಭುಜಗಳನ್ನು ನೇರವಾಗಿಟ್ಟು ಕಾಲ ಮೇಲೆ ಭಾರಹಾಕಿ ಸ್ವಲ್ಪ ಏಳುವದು ಹಾಗೂ ಕೂಡುವುದು.

ಇದೇ ರೀತಿ ಕುಳಿತು ಬೆನ್ನನ್ನು ಮುಂದಕ್ಕೆ



ಚಿತ್ರ - ೭



ಚಿತ್ರ - ೮

ಬಾಗಿಸಿ ನಂತರ ನೇರವಾಗಿ ಕುಳಿತು ಕೊಳ್ಳುವದು. ಹೆರಿಗೆಯಾದನಂತರ ಇದೇ ಆಸನದಲ್ಲಿ ಕುಳಿತು ಬೆನ್ನನ್ನು ಹಿಂದಕ್ಕೆ-ಮುಂದಕ್ಕೆ ಬಾಗಿಸುವುದು.

**ವ್ಯಾಯಾಮ-೫.** ನೆಲದ ಮೇಲೆ ಕುಳಿತು ಮಂಡಿಯನ್ನು ಮಡಚಿ ಎರಡೂ ಕಾಲುಗಳನ್ನು ನೇರ ಕೈಗಳಿಂದ ಕಾಲುಹಿಡಿದು ಕಾಲು ಹಾಗು ತೊಡೆಯನ್ನು ಚಿಟ್ಟೆಯಂತೆ ಮೇಲೆ ಕೆಳಗೆ ಮಾಡುವದು.



ಚಿತ್ರ - ೩

**ವ್ಯಾಯಾಮ-೬.** ನೆಲದ ಮೇಲೆ ಕುಳಿತು ಕಾಲುಗಳನ್ನು ಅಡ್ಡವಾಗಿ ಚಾಚಿ ಕೈಗಳೆರಡನ್ನು ಕಾಲುಗಳ ಮೇಲೆ ಇಟ್ಟು ನಂತರ ಬೆನ್ನನ್ನು ಬಾಗಿಸುತ್ತ ಸಾಧ್ಯವಾದಷ್ಟು ಕಾಲುಬೆರಳು ಹಿಡಿಯಲು ಪ್ರಯತ್ನ ಮಾಡುವುದು.

**ವ್ಯಾಯಾಮ-೭.** ನೆಲದ ಮೇಲೆ ಮಲಗಿ ಕಾಲುಗಳನ್ನು ಅರ್ಧ ಮಡಿಚಿ ಕೈಗಳೆರಡನ್ನು ಹೊಟ್ಟೆಯ ಮೇಲೆ ಇಟ್ಟು ನಂತರ ಬೆನ್ನಿನ ಪೊಳ್ಳು ಭಾಗ ಪೂರ್ತಿ ನೆಲಕ್ಕೆ ತಾಗುವಂತೆ ಒತ್ತುವದು.

**ವ್ಯಾಯಾಮ-೮.** ಅಂಗಾತ ಕಾಲು ಚಾಚಿ ಮಲಗಿ, ಕೈಗಳೆರಡನ್ನು ಉದ್ದಕ್ಕೆ ಮೇಲೆ ಚಾಚಿ ಏಳುವದು.

**ವ್ಯಾಯಾಮ-೯.** ಅಂಗಾತ ಮಲಗಿ ಹೊಟ್ಟೆಯ ಮೇಲೆ ಭಾರವಾದ ಪುಸ್ತಕಗಳನ್ನಿಟ್ಟು ಕಾಲುಗಳನ್ನು ನೆಲದಿಂದ ಸ್ವಲ್ಪ ಎತ್ತಿ ಹಾಗೆ ಚಾಚಿದ ಕಾಲುಗಳನ್ನು ಎತ್ತಿ ಹಿಡಿಯುವುದು.

**ವ್ಯಾಯಾಮ-೧೦.** ಮೇಲೆ ಹೇಳಿದ ರೀತಿ ಮಲಗಿ ಕೇವಲ ಕಾಲುಗಳನ್ನು ಎತ್ತಿ ಹಿಡಿಯುವದು. ಮಂಡಿಯನ್ನು ಮಡಚ ಬಾರದು, ಅಲ್ಲದೇ ಕೈಗಳೆರಡನ್ನು ಹೊಟ್ಟೆಯ ಮೇಲೆ ಇಟ್ಟುಕೊಂಡಿರಬೇಕು.

**ವ್ಯಾಯಾಮ-೧೧.** ಅಂಗಾತ ಮಲಗಿ ಕೊಂಡು ತಲೆ ಎತ್ತುವದು ಹಾಗು ಬಿಡುವದು. ಈ ಸಮಯದಲ್ಲಿ ಕೈ ನೆಲಕ್ಕೆ ಹಚ್ಚಬಾರದು. ಕೈಗಳೆರಡನ್ನೂ ಹೊಟ್ಟೆಯ ಮೇಲೆ ಇಟ್ಟು ಕೊಂಡಿರಬೇಕು.

**ವ್ಯಾಯಾಮ-೧೨.** ಅಂಗಾತ ಮಲಗಿ ಕಾಲುಗಳನ್ನು ಚಾಚಿ ಒಂದು ಕಾಲ ಮೇಲೆ ಇನ್ನೊಂದು ಕಾಲು ಹಾಕಿ, ಕೈಗಳೆರಡನ್ನೂ ಹೊಟ್ಟೆಯ ಮೇಲೆ ಕಟ್ಟಿಕೊಂಡು ಗುದದ್ವಾರ ವನ್ನು ಹಿಡಿದುಕೊಳ್ಳುವದು ಹಾಗೂ ಬಿಡುವದು.

**ವ್ಯಾಯಾಮ-೧೩.** ಕುರ್ಚಿಯ ಮೇಲ ಕುಳಿತುಕೊಂಡು ತಲೆಯನ್ನು ಬಾಗಿಸಿ ಪಾದಗ ಳನ್ನು ಮುಟ್ಟಿ ತಿರುಗಿ ಸಾವಕಾಶವಾಗಿ ಏಳುವದು.



ಚಿತ್ರ - ೪

**ಎಚ್ಚರಿಕೆ :**

*೧. ತೀರ ಕಷ್ಟಕರವಾದ ಕೆಲಸ, ಅಂದರೆ ಕೊಡದಿಂದ ನೀರು ತರುವದು, ಭಾರವಾದ ಸಾಮಾನು ಎತ್ತುವದು, ದೊಡ್ಡ ಮಕ್ಕಳನ್ನು ಎತ್ತಿಕೊಳ್ಳುವದನ್ನು ಬಸಿರು ಇರುವಾಗಾಗಲೀ, ಇಲ್ಲವೇ ಹೆರಿಗೆಯಾದ ನಂತರವಾಗಲೀ ಮಾಡಬಾರದು. ಇಂಥದ್ದು ಮಾಡಿದರೆ. ಗರ್ಭಕೋಶ ಜಾರಿ ಹೊರಬರಬಹುದು.*

*೨. ಆದರಲ್ಲೂ ಶಸ್ತ್ರಕ್ರಿಯೆಯಾಗಿ ಮಗು ವನ್ನು ಹಡೆದವರಂತೂ ಮಾಡಲೇಬಾರದು. ಶಸ್ತ್ರಕ್ರಿಯೆಯಾದವರು, ವೈದ್ಯರು ಅಪ್ಪಣೆ ಕೊಟ್ಟನಂತರವೇ ವ್ಯಾಯಾಮ ಮಾಡಬೇಕು.*

*೩. ಹೆರಿಗೆಯಾದ ನಂತರವ್ಯಾಯಾಮ ನಂ. ೧, ೨, ೩, ೪, ೯, ೧೦, ೧೧, ೧೨, ಮತ್ತು ೧೩ ಗಳನ್ನು ಮಾಡಬಹುದು. ವ್ಯಾಯಾಮ ನಂ. ೧ ರಿಂದ ೮ರವರೆಗೆ ಪ್ರಸೂತಿಯ ಮೊದಲು*



ಚಿತ್ರ - ೫

*ಮಾಡಬಹುದು. ಮೊದಲು ತಮಗೆ ಯಾವ ತರಹದ ವ್ಯಾಯಾಮ ಸರಿ ಹೊಂದುತ್ತದೆ ಯೆಂಬುದನ್ನು ನೋಡಲು ಪ್ರಸೂತಿ ಶಾಸ್ತ್ರಜ್ಞ ರನ್ನು ಕಾಣಬೇಕು.*

*ಹೊಟ್ಟೆಗೆ ಬಟ್ಟೆ (ಅರಿವೆ) ಕಟ್ಟುವದರಿಂದ ಬಾಣಂತಿಯರಲ್ಲಿ ಸ್ನಾಯುಗಳಿಗೆ ವಿಶ್ರಾಂತಿಸಿಕ್ಕಿ ಹೊಟ್ಟೆ ತೆಳ್ಳಗಾಗುವದೆಂದು ತಪ್ಪು ಗ್ರಹಿಕೆ ನಮ್ಮ ಜನರಲ್ಲಿದೆ. ಇದೊಂದು ತಪ್ಪು ಕಲ್ಪನೆ. ಹೆರಿಗೆಯಾದ ನಂತರ ಬಾಣಂತಿಯು ಯಾವ ಕೆಲಸ ಮಾಡಬಾರೆಂದು ಮೂಢ ನಂಬಿಕೆಯೂ ಇದೆ.*

*ಆದರೆ ಈಗಿನ ಯುಗದಲ್ಲಿ ಸ್ವಲ್ಪ ದಿನ ವಿಶ್ರಾಂತಿ ತೆಗೆದುಕೊಂಡು ನಂತರ ಸಾವಕಾಶವಾಗಿ ವ್ಯಾಯಾಮಗಳನ್ನು ಶುರುವು ಮಾಡಿಕೊಂಡು ದೇಹದ ಮಾಟ ಮರಳಿ ನೋಡಲು ಸುಂದರವಾಗಿ ಕಾಣಿಸುವದರಲ್ಲಿ ಸಂಶಯವಿಲ್ಲ.*

●

# ವಿಷ್ಣು ಗ್ಯಾಸ್

ಕರ್ನಾಟಕದ ಮಣ್ಣಿನ ಮಗ ಶ್ರೀ ಸಿ.ನಾಗರಾಜ್‌ರವರು ಕರ್ನಾಟಕದ ಮಣ್ಣಿನ ಮಕ್ಕಳಿಗಾಗಿ ನಿರ್ಮಿಸಿರುವ ಕರ್ನಾಟಕದಲ್ಲಿಯೇ ಅತಿ ದೊಡ್ಡ ವಿಸ್ತಾರವುಳ್ಳ 7 ಎಕರೆ ಜಮೀನಿನಲ್ಲಿ ನಿರ್ಮಿಸಿರುವ ವಿಷ್ಣು ಗ್ಯಾಸ್ ಅಡಿಗೆ ಅನಿಲ ಘಟಕ ದಿನವೊಂದಕ್ಕೆ 3600 ಸಿಲಿಂಡರ್ ಫಿಲ್ ಮಾಡುವ ಸಾಮರ್ಥ್ಯವುಳ್ಳದ್ದಾಗಿರುತ್ತದೆ. ಇದರ ಉಪಯೋಗವನ್ನು ಪಡೆದುಕೊಳ್ಳಿ.

ಶ್ರೀ ಸಿ. ನಾಗರಾಜ್

ಈಗಾಗಲೇ ಕರ್ನಾಟಕದ ಮೂಲೆ ಮೂಲೆಯಲ್ಲಿ ಹಂಚಿಕೆದಾರರನ್ನು ನೇಮಿಸಿ ಬಡವರ ಮತ್ತು ಮಧ್ಯಮ ವರ್ಗದ ಜನರ ಕೈಗೆಟುಕುವ ಬೆಲೆಗೆ ದೊರಕುವ ಸೌಲಭ್ಯಗಳನ್ನು ಮಾಡಿದ್ದೇವೆ. ಈ ಸದವಕಾಶವನ್ನು ಉಪಯೋಗಿಸಿಕೊಂಡು ತಮ್ಮ ಸಮೀಪದ ಅಧಿಕೃತ ಮಾರಾಟಗಾರರನ್ನು ಕೂಡಲೆ ಸಂಪರ್ಕಿಸಿ.

| | |
|---|---|
| **ಹೊಸ ಸಿಲಿಂಡರ್, ರೆಗ್ಯುಲೇಟರ್, ಟ್ಯುಬ್, ಲೈಟರ್** | **ರೂ. 2250** |
| **ಅಡಿಷನಲ್ ಸಿಲಿಂಡರ್ ಬೆಲೆ** | **ರೂ. 1250** |
| **ತಿಂಗಳ ರಿಫಿಲ್ಲಿಂಗ್ 12 ಕೆ.ಜಿ. ಬೆಲೆ** | **ರೂ. 185** |
| **ಶ್ರೀ ಕೃಷ್ಣ ಸ್ಕೀಮ್ 2 ಸಿಲಿಂಡರ್‌ಗೆ** | **ರೂ. 4500** |
| **ತಿಂಗಳ ರಿಫಿಲ್ಲಿಂಗ್ ಸಿಲಿಂಡರ್ (ಸರ್ಕಾರಿ ಬೆಲೆಗೆ)** | **ರೂ. 140** |

★ ಸರ್ಕಾರಿ ತತ್‌ಕಾಲ್ ಸ್ಕೀಮ್ ರೂ. 6,000/- ದಿಂದ 7,000/- ದಷ್ಟು ದುಬಾರಿಯಾದರೆ, ವಿಷ್ಣು ಗ್ಯಾಸ್ ಬಹಳ ಕಡಿಮೆ ಬೆಲೆಗೆ ದೊರೆಯುತ್ತದೆ.

★ ಸಬ್ಸಿಡಿ ತೆಗೆದರೆ ಉಂಟಾಗುವಂತಹ ಬೆಲೆ ಹೆಚ್ಚಳದ ಭಯ ವಿಷ್ಣುಗ್ಯಾಸ್‌ನಿಂದ ಇಲ್ಲ.

★ 21 ದಿವಸಗಳಿಂದ ಕಾಯುವ ಅವಶ್ಯಕತೆ ಇಲ್ಲ. ಸಿಲಿಂಡರ್ ತಕ್ಷಣ ದೊರೆಯುತ್ತದೆ.

★ ವಿಷ್ಣುಗ್ಯಾಸ್ ಭಾರತ್ ಷೆಲ್‌ನವರ ಜೊತೆ ಒಪ್ಪಂದ ಮಾಡಿಕೊಂಡಿರುವುದರಿಂದ ನಿರಂತರವಾಗಿ ಗ್ಯಾಸ್ ಸಪ್ಲೈ ಮಾಡಲು ಸಮರ್ಥವಾಗಿದೆ.

★ ಫ್ಲೇಮ್ ಪ್ರೂಫ್ ಎಲೆಕ್ಟ್ರಾನಿಕ್ ವೇಯಿಂಗ್ ಯಂತ್ರಗಳ ಅಳವಡಿಕೆಯಿಂದ ವಿಷ್ಣುಗ್ಯಾಸ್ 12 ಕೆ.ಜಿ., 15 ಕೆ.ಜಿ. ಮತ್ತು 17 ಕೆ.ಜಿ. ಸಿಲಿಂಡರ್‌ಗಳನ್ನು ಕರಾರುವಕ್ಕಾಗಿ ತುಂಬಿಸಿ ಸರಬರಾಜು ಮಾಡುತ್ತದೆ.

★ ಅತ್ಯುತ್ತಮವಾದ ವಿತರಣೆಯನ್ನು ವಿಷ್ಣು ಗ್ಯಾಸ್ ಮಾಡುತ್ತದೆ. ಯಾಕೆಂದರೆ ಮುಂಬಯಿ, ರತ್ನಗಿರಿ, ವಿಶಾಖಪಟ್ಟಣ, ಹಜಿರಾ, ಮಂಗಳೂರು, ಒಕಾ, ಕಾಕಿನಾಡ ಮುಂತಾದ ಬಂದರುಗಳಿಂದ ಗ್ಯಾಸ್ ಸುಲಭವಾಗಿ ದೊರೆಯುತ್ತದೆ.

| | | |
|---|---|---|
| Govt. of India Dept. of Explosive ಲೈಸೆನ್ಸ್ ನಂ. PV(SC)S137/KK GC (SC)F108/KK GC (SC)S - 214/KK. | | |
| ವಿಮೆ | : | (ಕಾರ್ಖಾನೆ, ಪಬ್ಲಿಕ್ ಲಯಬಿಲಿಟಿ, ಪ್ರಾಡಕ್ಟ್ ಲಯಬಿಲಿಟಿ ಮತ್ತು ಗ್ರಾಹಕರು). ಅಂದಾಜು 2 ಕೋಟಿ ರೂಪಾಯಿ. |
| ರೇಟಿಂಗ್ | : | ಎಂ.ಡಿ.ಆರ್.ಎ- 3 |
| ಸಿಲಿಂಡರ್ | : | 12 ಕೆ.ಜಿ. ISI Mark - 3196 |
| ರೆಗ್ಯುಲೇಟರ್ | : | 22 ಎಂ.ಎಂ. ISI Mark - 9798 |

| | | | | | |
|---|---|---|---|---|---|
| 1. ಎಸ್ಸಾರ್ ಆಯಿಲ್ ಲಿಮಿಟೆಡ್ | : | ರೂ. 13,250-00/M.T. | 3. ಶಕ್ತಿ ಗ್ಯಾಸ್ | : | ರೂ. 13,250-00/M.T. |
| 2. ಭಾರತ್ ಶೆಲ್ | : | ರೂ. 12,750-00/M.T. | 4. ರಿಲೆಯನ್ಸ್ ಕಂಪನಿ | : | ರೂ. 10,800-00/M.T. |

ಈಗ ಮೇಲ್ಕಂಡ ಬೆಲೆಗೆ ಬಲ್ಕ್ ಗ್ಯಾಸ್ ಸಿಗುತ್ತಿರುವುದರಿಂದ ನಮ್ಮ ವಿಷ್ಣು ಗ್ಯಾಸ್ ಕಂಪನಿಯು 195 ರೂಪಾಯಿಗೆ ಮಾರಾಟ ಮಾಡುತ್ತಿದ್ದ 12 ಕೆ.ಜಿ. ಸಿಲಿಂಡರ್‌ನ್ನು ಈಗ 185 ರೂಪಾಯಿಗೆ ಮಾರಾಟ ಮಾಡುತ್ತಿದ್ದೇವೆ. ಕೂಡಲೆ ನಿಮ್ಮ ಪ್ರದೇಶವಾರು ಮತ್ತು ಜಿಲ್ಲಾವಾರು ಹಂಚಿಕೆದಾರರನ್ನು ಸಂಪರ್ಕಿಸಿ ವಿಷ್ಣುಗ್ಯಾಸ್‌ನ ಉಪಯೋಗವನ್ನು ಪಡೆದುಕೊಳ್ಳಿ.

VISHNU GAS

*ವಿಳಾಸ:* **ಕೇಂದ್ರ ಕಛೇರಿ : ನಂ. 2954, ಮೊದಲ ಮಹಡಿ, ರಾಮದಾಸ್ ಕಾಂಪ್ಲೆಕ್ಸ್, ಮಹಾಕವಿ ಕುವೆಂಪು ರಸ್ತೆ, ನವರಂಗ್ ಟಾಕೀಸ್ ಹತ್ತಿರ, ರಾಜಾಜಿನಗರ, 2ನೇ ಹಂತ, ಬೆಂಗಳೂರು - 560 010. ಫೋನ್: 3422671, 3323221. ಫ್ಯಾಕ್ಸ್: 080-3422671**

# ವಿದ್ಯೆ-ಉದ್ಯೋಗ

## ಕೆ. ಪಿ. ಎಸ್. ಸಿ. ಪರೀಕ್ಷೆಗೆ ಸಿದ್ಧರಾಗಿ

**ನೀವು ತಹಶೀಲ್ದಾರರಾಗಬೇಕೆ?**
**ವಾಣಿಜ್ಯ ತೆರಿಗೆ ಅಧಿಕಾರಿಯಾಗಬೇಕೆ?**
**ಡಿ.ವೈ.ಎಸ್.ಪಿ. ಆಗಬೇಕೆ?**
**ಇಂಥ ಹಲವಾರು ಅವಕಾಶಗಳಿಗೆ ನಿಮ್ಮನ್ನು ಸಿದ್ಧಗೊಳಿಸಲು 'ಬಿಸಿಲ ಬದುಕು' ಸನ್ನದ್ಧವಾಗಿದೆ. ಮುಂಬರುವ ಸಂಚಿಕೆಗಳಲ್ಲಿ ಹರಿದುಬರಲಿರುವ ಕೆ.ಪಿ.ಎಸ್.ಸಿ. ಪರೀಕ್ಷೆಗಳ ಮಾಹಿತಿ ಮಾರ್ಗದರ್ಶನಕ್ಕೆ ಪೂರ್ವಭಾವಿಯಾಗಿ ಇಲ್ಲಿ ಕೆಲವು ಉಪಯುಕ್ತ ಮಾಹಿತಿ ನೀಡುತ್ತಿದ್ದೇವೆ.**

ಕರ್ನಾಟಕ ಲೋಕಸೇವಾ ಆಯೋಗವು ಶೀಘ್ರದಲ್ಲಿಯೇ ಗೆಜಿಟೆಡ್ ಪ್ರೊಬೆಷನರಿ (KAS) ಹುದ್ದೆಗಳಿಗೆ ಅರ್ಜಿಗಳನ್ನು ಕರೆಯುವ ಸಾಧ್ಯತೆ ಇದೆ. ಈ ಹುದ್ದೆಗಳನ್ನು ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ತುಂಬಲಾಗುವುದು.

### ಯಾರು ಅರ್ಹರು ?

೧. ೨೧ ವರ್ಷ ತುಂಬಿದ ೩೩ ವರ್ಷ ಮೀರದ ಎಲ್ಲಾ ಪದವೀಧರರೂ ಈ ಪರೀಕ್ಷೆಗೆ ಕೂರಲು ಅರ್ಹರಾಗಿದ್ದಾರೆ.

ಪರಿಶಿಷ್ಟ ಜಾತಿ ಮತ್ತು ವರ್ಗದವರು ಅಥವಾ ವಿಭಾಗ ಒಂದರಲ್ಲಿ ಬರುವ ಇತರ ಹಿಂದುಳಿದ ವರ್ಗದವರಿಗೆ ವಯೋಮಿತಿಯಲ್ಲಿ ಐದು ವರ್ಷದ ರಿಯಾಯಿತಿ ಇದೆ. ಹಿಂದುಳಿದ ವರ್ಗಗಳ ಇನ್ನಿತರ ವಿಭಾಗಗಳ ಅಭ್ಯರ್ಥಿಗಳಿಗೆ ೩ ವರ್ಷಗಳ ಸಡಿಲಿಕೆ ಉಂಟು. ಮಾಜಿ ಸೈನಿಕರಿಗೆ ಅವರು ಸೇನೆಯಲ್ಲಿ ಕಾರ್ಯ ನಿರ್ವಹಿಸಿದ ಅವಧಿಯ ಆಧಾರದ ಮೇಲೆ ವಯೋಮಿತಿಯ ಸಡಿಲಿಕೆ ಉಂಟು.

ಈ ಪರೀಕ್ಷೆಗೆ ಕೂರುವ ಪ್ರತಿಯೊಬ್ಬ ಅಭ್ಯರ್ಥಿಗೆ ಗರಿಷ್ಟ ಐದು ಅವಕಾಶಗಳನ್ನು ನೀಡಲಾಗುವುದು. ಪ್ರತಿ ಪೂರ್ವಭಾವಿ ಪರೀಕ್ಷೆಯನ್ನು ಒಂದು ಅವಕಾಶ ಎಂದು ಪರಿಗಣಿಸಲಾಗುವುದು.

ಪರಿಶಿಷ್ಟ ಜಾತಿ ವರ್ಗದವರಿಗೆ ಸರ್ಕಾರದ ಆದೇಶದಂತೆ ಮೀಸಲಾತಿ ಇರುತ್ತದೆ.

### ಪರೀಕ್ಷಾ ಪದ್ಧತಿ

ಈ ಹುದ್ದೆಗಳಿಗೆ ಆಯ್ಕೆ ಆಗಲು ಎರಡು ಹಂತದ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಉತ್ತೀರ್ಣ ರಾಗಬೇಕಾಗುತ್ತದೆ.

೧. **ಪೂರ್ವಭಾವಿ** ಪರೀಕ್ಷೆಯಲ್ಲಿ ಆಯ್ಕೆ ಆದ ಅಭ್ಯರ್ಥಿಗಳು ಮುಖ್ಯ ಪರೀಕ್ಷೆಗೆ ಅರ್ಹರಾಗುತ್ತಾರೆ.

ಪೂರ್ವಭಾವಿ ಪರೀಕ್ಷೆಯಲ್ಲಿ ಆಬ್‌ಜೆಕ್ಟೀವ್ ತರಹದ ಪ್ರಶ್ನೆಗಳಿರುತ್ತವೆ.

೨. **ಮುಖ್ಯ ಪರೀಕ್ಷೆ** (ಲಿಖಿತ ಪರೀಕ್ಷೆ ಮತ್ತು ವ್ಯಕ್ತಿತ್ವ ಪರೀಕ್ಷೆ)

ಈ ಪರೀಕ್ಷೆಯಲ್ಲಿ ಪಾಸಾದವರು ವಿವಿಧ ಹುದ್ದೆಗಳಿಗೆ ಆಯ್ಕೆಯಾಗುತ್ತಾರೆ.

### ಪೂರ್ವಭಾವಿ ಪರೀಕ್ಷೆಯ ವಿಧಾನ

ಈ ಪರೀಕ್ಷೆಯಲ್ಲಿ ಬಹು ಆಯ್ಕೆ ಪ್ರಶ್ನೆಗಳಿರುವ ಎರಡು ಪತ್ರಿಕೆಗಳಿರುತ್ತದೆ.

**ಪತ್ರಿಕೆ-೧.** ಸಾಮಾನ್ಯ ಅಧ್ಯಯನ (೧೫೦ ಅಂಕಗಳು)

**ಪತ್ರಿಕೆ-೨.** ಐಚ್ಛಿಕ ವಿಷಯಗಳಲ್ಲಿ ಅಭ್ಯರ್ಥಿ ಆಯ್ಕೆ ಮಾಡಿಕೊಂಡ ಯಾವುದಾದರೂ ಒಂದು ವಿಷಯ. (೩೦೦ ಅಂಕಗಳು)

ಪೂರ್ವಭಾವಿ ಪರೀಕ್ಷೆಯ ಒಟ್ಟು ಅಂಕಗಳು ೪೫೦

ಈ ಪರೀಕ್ಷೆಗೆ ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಪ್ರಶ್ನೆ ಪತ್ರಿಕೆ ಸಿದ್ಧಪಡಿಸಲಾಗುವುದು.

ಅಭ್ಯರ್ಥಿಗಳು ಪರೀಕ್ಷೆಯಲ್ಲಿ ಯಾವುದಾದರು ಒಂದು ಭಾಷೆಯಲ್ಲಿ ಮಾತ್ರ ಉತ್ತರಿಸಬೇಕು.

ಪೂರ್ವಭಾವಿ ಪರೀಕ್ಷೆಯು ಪದವಿ ಪರೀಕ್ಷೆ ಮಟ್ಟದಲ್ಲಿರುತ್ತದೆ. ಪ್ರತಿ ಪತ್ರಿಕೆಗೆ ಉತ್ತರಿಸಲು ೨ ಗಂಟೆಗಳ ಅವಧಿ ನೀಡಲಾಗುವುದು.

ಅಭ್ಯರ್ಥಿಗಳನ್ನು ಮುಖ್ಯ ಪರೀಕ್ಷೆಗೆ ಆಯ್ಕೆ ಮಾಡಿಕೊಳ್ಳುವಾಗ ಖಾಲಿ ಇರುವ ಹುದ್ದೆಗಳ ಆಧಾರದ ಮೇಲೆ 'ಪ್ರತಿ ಹುದ್ದೆಗೆ ೨೦ ಮಂದಿಯೆಂಬ' ಕ್ರಮವನ್ನು ಅನುಸರಿಸಲಾಗುವುದು.

ಇಲ್ಲಿಯೂ ಮೀಸಲಾತಿ ಅನ್ವಯವಾಗುತ್ತದೆ.

### ಮುಖ್ಯ ಪರೀಕ್ಷೆಯ ವಿಧಾನ

ಮುಖ್ಯ ಪರೀಕ್ಷೆಯು ಲಿಖಿತ ಪರೀಕ್ಷೆ ಹಾಗೂ ವ್ಯಕ್ತಿತ್ವ ಪರೀಕ್ಷೆಯನ್ನು ಒಳಗೊಂಡಿರುತ್ತದೆ.

### ಲಿಖಿತ ಪರೀಕ್ಷೆ

**ಪತ್ರಿಕೆ ೧** ಕನ್ನಡ ೧೫೦ ಅಂಕಗಳು

ಪತ್ರಿಕೆ ೨ ಇಂಗ್ಲಿಷ್ ೧೫೦ ಅಂಕಗಳು
ಪತ್ರಿಕೆ ೩ ಹಾಗೂ ೪ } ಸಾಮಾನ್ಯ ಅಧ್ಯಯನ ೩೦೦ ಅಂಕಗಳು (ಪ್ರತಿ ಪತ್ರಿಕೆಗೆ)

**ಪತ್ರಿಕೆ ೫, ೬, ೭ ಹಾಗೂ ೮**

ಐಚ್ಛಿಕ ವಿಷಯಗಳ ಪಟ್ಟಿಯಲ್ಲಿ ಎರಡು ವಿಷಯಗಳನ್ನು ಆರಿಸಿಕೊಳ್ಳಬೇಕು. ಪ್ರತಿ ವಿಷಯಕ್ಕೂ ಎರಡು ಪತ್ರಿಕೆಗಳು ಇರುತ್ತವೆ.

ಪ್ರತಿಯೊಂದು ಪತ್ರಿಕೆಗೂ ೩೦೦ ಅಂಕಗಳು

ಲಿಖಿತ ಪರೀಕ್ಷೆಯ ಒಟ್ಟು ಅಂಕಗಳು ೪೦೦

## ಸೂಚನೆ

ಅಭ್ಯರ್ಥಿಗಳು ಕನ್ನಡ ಮತ್ತು ಇಂಗ್ಲಿಷ್ ಪತ್ರಿಕೆಗಳಲ್ಲಿ ತಲಾ ಶೇಕಡಾ ೩೦ರಷ್ಟು ಅಂಕ (ಒಟ್ಟಾರೆ ಶೇಕಡಾ ೩೫) ಪಡೆದು ಪಾಸಾದರೆ ಸಾಕು. ಸೇವೆಗೆ ಆಯ್ಕೆ ಮಾಡುವಾಗ ಶ್ರೇಣಿ ನಿರ್ಧರಿಸುವ ಸಂದರ್ಭದಲ್ಲಿ ಈ ವಿಷಯಗಳಲ್ಲಿ ಪಡೆದ ಅಂಕಗಳನ್ನು ಪರಿಗಣಿಸುವುದಿಲ್ಲ. ಆದರೆ ವ್ಯಕ್ತಿತ್ವ ಪರೀಕ್ಷೆಗೆ ಅರ್ಹತೆ ಗಳಿಸಲು ಈ ಪತ್ರಿಕೆಗಳಲ್ಲಿ ನಿಗದಿಪಡಿಸಿದ ಕನಿಷ್ಠ ಅಂಕಗಳನ್ನು ಗಳಿಸಲೇಬೇಕು.

ಪ್ರಶ್ನೆ ಪತ್ರಿಕೆಗಳು ಕನ್ನಡ ಹಾಗೂ ಇಂಗ್ಲಿಷ್ ಭಾಷೆಗಳೆರಡರಲ್ಲೂ ಇದ್ದು ಅಭ್ಯರ್ಥಿ ಯಾವುದಾದರೊಂದು ಭಾಷೆಯಲ್ಲಿ ಉತ್ತರಿಸಬಹುದು.

ಮುಖ್ಯ ಪರೀಕ್ಷೆಯಲ್ಲಿ ಕನ್ನಡ ಹಾಗೂ ಇಂಗ್ಲಿಷ್ ಭಾಷಾ ಪತ್ರಿಕೆಗಳು ಎಸ್.ಎಸ್.ಎಲ್.ಸಿ. ಮಟ್ಟದವಾಗಿದ್ದು ಉಳಿದ ಪತ್ರಿಕೆಗಳು ಪದವಿ ಮಟ್ಟದಲ್ಲಿರುತ್ತವೆ.

## ವ್ಯಕ್ತಿತ್ವ ಪರೀಕ್ಷೆ

ಲಭ್ಯವಿರುವ ಹುದ್ದೆಗಳ ಆಧಾರದ ಮೇಲೆ ೧ ಹುದ್ದೆಗೆ ೫ ಅಭ್ಯರ್ಥಿಯಂತೆ ವ್ಯಕ್ತಿತ್ವ ಪರೀಕ್ಷೆಗೆ ಅಭ್ಯರ್ಥಿಗಳನ್ನು ಆಹ್ವಾನಿಸಲಾಗುವುದು.

ಈ ಅಭ್ಯರ್ಥಿಗಳ ಆಯ್ಕೆಯನ್ನು ಮುಖ್ಯ ಪರೀಕ್ಷೆಯ ಶ್ರೇಣಿ (ಮೆರಿಟ್) ಆಧಾರದ ಮೇಲೆ ಮಾಡಲಾಗುವುದು.

ವ್ಯಕ್ತಿತ್ವ ಪರೀಕ್ಷೆಯ ಗರಿಷ್ಠ ಅಂಕಗಳು ೨೦೦

## ಪರೀಕ್ಷೆಯ ಪಠ್ಯಕ್ರಮ

**ಪೂರ್ವಭಾವಿ ಪರೀಕ್ಷೆ**

**ಅ–ವಿಭಾಗ**

ಪೂರ್ವಭಾವಿ ಪರೀಕ್ಷೆಗೆ ಅಭ್ಯರ್ಥಿಗಳು ಕಡ್ಡಾಯವಾಗಿ ಈ ವಿಷಯಗಳನ್ನು ಅಭ್ಯಸಿಸಬೇಕು.

**ಪತ್ರಿಕೆ – ೧ : ಸಾಮಾನ್ಯ ಅಧ್ಯಯನ**

೧. ಸಾಮಾನ್ಯ ವಿಜ್ಞಾನ
೨. ರಾಜ್ಯ, ರಾಷ್ಟ್ರ, ಅಂತಾರಾಷ್ಟ್ರ ಮಹತ್ವದ ಪ್ರಚಲಿತ ವಿದ್ಯಮಾನಗಳು
೩. ಭಾರತೀಯ ಇತಿಹಾಸ
೪. ವಿಶ್ವ ಭೂಗೋಳ
೫. ಭಾರತದ ರಾಜಕೀಯ ಮತ್ತು ಆರ್ಥಿಕ ಪರಿಸ್ಥಿತಿ
೬. ಭಾರತದ ರಾಷ್ಟ್ರೀಯ ಚಳವಳಿ ಮತ್ತು ಸಾಮಾನ್ಯ ಬುದ್ಧಿ ಶಕ್ತಿ.

**ಪತ್ರಿಕೆ – ೨ ಐಚ್ಛಿಕಗಳು**

ಮುಖ್ಯ ಪರೀಕ್ಷೆಯ ವಿಷಯಗಳೇ ಇರುತ್ತವೆ.

## ಮುಖ್ಯ ಪರೀಕ್ಷೆ

**ಪತ್ರಿಕೆ – ೧ ಕನ್ನಡ**

ಪ್ರಶ್ನೆ ಪತ್ರಿಕೆಯು ಕೆಳಕಂಡ ಮಾದರಿಯಲ್ಲಿರುತ್ತದೆ.

೧. ವಿಷಯವನ್ನು ಸಂಕ್ಷಿಪ್ತಗೊಳಿಸುವುದು.
೨. ಭಾಷಾ ಬಳಕೆ
೩. ಸಾರಾಂಶ ಬರವಣಿಗೆ
೪. ಶಬ್ದ ಸಂಪತ್ತು (Vocabulary)
೫. ಪ್ರಬಂಧ
೬. ಇಂಗ್ಲೀಷ್‌ನಿಂದ ಕನ್ನಡಕ್ಕೆ ಭಾಷಾಂತರ

**ಪತ್ರಿಕೆ – ೨ ಇಂಗ್ಲಿಷ್**

1. ವಿಷಯವನ್ನು ಸಂಕ್ಷಿಪ್ತಗೊಳಿಸುವುದು ೨೫ ಅಂಕಗಳು
2. ಸಾರಾಂಶ ಬರವಣಿಗೆ ೨೫ ಅಂಕಗಳು
3. ಭಾಷಾ ಬಳಕೆ ೨೫ ಅಂಕಗಳು
4. ಶಬ್ದ ಸಂಪತ್ತು ೨೫ ಅಂಕಗಳು
5. ಪ್ರಬಂಧ ೨೫ ಅಂಕಗಳು
6. ಸಂವಹನ ಸಾಮರ್ಥ್ಯ ೨೫ ಅಂಕಗಳು

**ಪತ್ರಿಕೆ – ೩ ಸಾಮಾನ್ಯ ಅಧ್ಯಯನ**

೧. ಭಾರತದ ಆಧುನಿಕ ಇತಿಹಾಸ ಮತ್ತು ಭಾರತೀಯ ಸಂಸ್ಕೃತಿ. ವಿಶೇಷವಾಗಿ ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿಗೆ ಸಂಬಂಧಿಸಿದಂತೆ.
೨. ರಾಜ್ಯ, ರಾಷ್ಟ್ರ, ಅಂತಾರಾಷ್ಟ್ರ ಮಹತ್ವದ ಪ್ರಚಲಿತ ವಿದ್ಯಮಾನಗಳು
೩. ಸಂಖ್ಯಾ ವಿಶ್ಲೇಷಣೆ, ನಕ್ಷೆ ಮತ್ತು ರೇಖಾ ಚಿತ್ರಗಳು.

**ಪತ್ರಿಕೆ – ೪ ಸಾಮಾನ್ಯ ಅಧ್ಯಯನ**

೧. ಭಾರತದ ರಾಜಕೀಯ ಪರಿಸ್ಥಿತಿ ವಿಶೇಷವಾಗಿ ಕರ್ನಾಟಕಕ್ಕೆ ಸಂಬಂಧಿಸಿದಂತೆ
೨. ಭಾರತದ ಆರ್ಥಿಕ ಮತ್ತು ಭೌಗೋಳಿಕ ಸ್ಥಿತಿ. ವಿಶೇಷವಾಗಿ ಕರ್ನಾಟಕದ ಆರ್ಥಿಕ ಮತ್ತು ಭೌಗೋಳಿಕ ಪರಿಸ್ಥಿತಿಗೆ ಸಂಬಂಧಿಸಿದಂತೆ.
೩. ಕರ್ನಾಟಕ ಮತ್ತು ಭಾರತದ ಅಭಿವೃದ್ಧಿಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಪಾತ್ರ, ಪರಿಣಾಮ.




# ಅರ್ಜಿ ಆಹ್ವಾನ

ಬಾಯ್ಲರ್ ಆಪರೇಷನ್ ಎಂಜಿನಿಯರುಗಳ ಪರೀಕ್ಷಾ ಮಂಡಲಿಯು ಡಿಸೆಂಬರ್ ೧೨ ರಿಂದ ೧೫ರ ವರೆಗೆ ನಡೆಯಲಿರುವ ಬಾಯ್ಲರ್ ಆಪರೇಷನ್ ಎಂಜಿನಿಯರುಗಳ ಪರೀಕ್ಷೆಗೆ ಅಭ್ಯರ್ಥಿಗಳಿಂದ ಅರ್ಜಿ ಆಹ್ವಾನಿಸಿದೆ.

ಅಭ್ಯರ್ಥಿಗಳ ವಯಸ್ಸು ೨೩ ವರ್ಷಗಳಿಗಿಂತ ಕಡಿಮೆಯಿರಬಾರದು. ಬಾಯ್ಲರು, ಅದಕ್ಕೆ ಸಂಬಂಧಿಸಿದ ವಸ್ತುಗಳ ತಯಾರು ಅಥವಾ ದುರಸ್ತಿ ಮಾಡುವ ಕಾರ್ಯಾಗಾರದಲ್ಲಿ ಪೂರ್ಣ ಅವಧಿಯ ಅಪ್ರೆಂಟೀಸ್ ಎಂಜಿನಿಯರ್ ಕೋರ್ಸ್, ಇಲ್ಲವೇ ಎಲೆಕ್ಟ್ರಾನಿಕ್ ಅಥವಾ ಮೆಕ್ಯಾನಿಕಲ್ ಎಂಜಿನಿಯರಿಂಗ್ ಪದವಿ ಅಥವಾ ಡಿಪ್ಲೊಮಾ ಮಾಡಿರಬೇಕು ಹಾಗೂ ಬಾಯ್ಲರ್ ನಡೆಸುವಿಕೆಯಲ್ಲಿ ಕನಿಷ್ಠ ಎರಡು ವರ್ಷದ ಅನುಭವವಿರಬೇಕು.

ನಿಗದಿತ ಅರ್ಜಿ ನಮೂನೆ ಹಾಗೂ ಹೆಚ್ಚಿನ ವಿವರಗಳನ್ನು ಕಾರ್ಯದರ್ಶಿ, ಬಾಯ್ಲರ್ ಆಪರೇಷನ್ ಎಂಜಿನಿಯರುಗಳ ಪರೀಕ್ಷಾ ಮಂಡಲಿ, ನಂ. ೩, ಬಿ.ಬಿ. ನಾಯ್ಡು ರಸ್ತೆ, ಗಾಂಧಿನಗರ, ಬೆಂಗಳೂರು-೯ ಈ ವಿಳಾಸದಲ್ಲಿ ಪಡೆಯಬಹುದು. ನವೆಂಬರ್ ೨೫ ಅರ್ಜಿ ಸಲ್ಲಿಸಲು ಕೊನೆಯ ದಿನ.

ರವಿಕಿರಣ್, ಬೆಂಗಳೂರು

**ನಾನು ಅಂತಿಮ ಬಿ.ಕಾಂ. ಓದುತ್ತಿದ್ದು ನನಗೆ ಅಕೌಂಟ್ಸ್‌ನಲ್ಲಿ ಆಸಕ್ತಿ ಆದ್ದರಿಂದ ನಾನು ಆಲ್ ಇಂಡಿಯ ಇನಿಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಸ್ಟಡೀಸ್‌ನಲ್ಲಿ ೬ ತಿಂಗಳ ಡಿಪ್ಲೋಮಾ ಇನ್ ಫೈನಾನ್ಸಿಯಲ್ ಮ್ಯಾನೇಜ್‌ಮೆಂಟ್ ಕೋರ್ಸ್‌ಗೆ ಸೇರಬಯಸಿದ್ದೇನೆ. ಇಲ್ಲಿ ಡಿಪ್ಲೋಮಾ ಮಾಡಿದರೆ ಮುಂದೆ ಕೆಲಸಕ್ಕೆ ಉಪಯೋಗವಾಗುತ್ತದೆಯೇ? ಇಲ್ಲಿ ಪಡೆದ ಡಿಪ್ಲೋಮಾಗೆ ಮಾನ್ಯತೆ ಇದೆಯೇ, ಇದರ ಜೊತೆಯಲ್ಲಿ ಸಂಸ್ಥೆಯ ವಿಳಾಸವನ್ನು ಕಳುಹಿಸುತ್ತಿರುವೆ ಇಲ್ಲಿ ಕೋರ್ಸ್ ತೆಗೆದುಕೊಂಡರೆ ಯಾವುದೇ ರೀತಿ ಸಂಸ್ಥೆಯ ತೊಂದರೆ ಇಲ್ಲವೇ ಎಂದು ಖಂಡಿತ ತಿಳಿಸಿ.**

ನೀವು ಅವಶ್ಯವಾಗಿ ನಿಮ್ಮ ಇಚ್ಛೆಯಂತೆ ಡಿಪ್ಲೊಮಾ ಇನ್ ಫೈನಾನ್ಸಿಯಲ್ ಮ್ಯಾನೇಜ್‌ಮೆಂಟ್ ಕೋರ್ಸನ್ನು ಇನಿಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಸ್ಟಡಿಸ್ ಕೇಂದ್ರದಲ್ಲಿ ಮಾಡಬಹುದು. ಇದು additional ಕೋರ್ಸ್ ಆಗಿದ್ದು ಪದವಿಯವರಿಗೆ ಉದ್ಯೋಗ ದೊರಕಿಸುವಲ್ಲಿ ಸಹಕಾರಿಯಾಗುತ್ತದೆ. ಇದಕ್ಕೆ ಯಾವುದೇ ರೀತಿಯ ಸಂದೇಹ ಬೇಡ.

ರೇಣುಕಾಪ್ರಸಾದ್, ಕೊಳ್ಳೇಗಾಲ

**ನನ್ನ ಜನ್ಮದಿನಾಂಕ ೧-೭-೭೯ ಆಗಿದ್ದು ನಾನು ಈಗ ಹತ್ತನೇ ತರಗತಿ ಅನುತ್ತೀರ್ಣನಾಗಿ ಖಾಸಗಿ ಕಂಪ್ಯೂಟರ್ ತರಬೇತಿ ಪಡೆಯುತ್ತಿದ್ದೇನೆ. ನನಗೆ ವಿದ್ಯಾಭ್ಯಾಸದಲ್ಲಿ ತುಂಬಾ ಆಸಕ್ತಿ ಇದೆ. ಕಂಪ್ಯೂಟರ್ ಕ್ಷೇತ್ರದಲ್ಲಿ ಮುಂದುವರೆಯಲು ಇಷ್ಟವಿದೆ. ಈಗ ನಾನು ಅಂಚೆ ಶಿಕ್ಷಣದ ಮೂಲಕ ಅಥವಾ Distance Education ಮೂಲಕ ಯಾವುದಾದರೂ ನನಗೆ ಉಪಯೋಗಿಯಾದ ಕೋರ್ಸ್ ಮಾಡಬಹುದೇ?**

ನೀವು Distance Education ಮೂಲಕವಾಗಿ ಕಂಪ್ಯೂಟರ್‌ಗೆ ಸಂಬಂಧಪಟ್ಟ ಅಸೋಸಿಯೇಟ್ ಕಂಪ್ಯೂಟರ್ ಪ್ರೋಗ್ರಾಮರ್ ಅಥವಾ ಚಾರ್ಟೆರ್ಡ್ ಸಿಸ್ಟಮ್ಸ್ ಎನಾಲಿಸ್ಟ್ ಅಂತಹ ಕೋರ್ಸ್‌ಗಳನ್ನು ಮಾಡಬಹುದು. ಹೆಚ್ಚಿನ ವಿವರಗಳಿಗಾಗಿ ಮತ್ತು ಅರ್ಹತೆಗಳಿಗಾಗಿ ದಿ. ಡೈರೆಕ್ಟರ್ (ಸ್ಟಡಿಸ್) Institute of chartered computer professionals of India, 12-13-540, Nagarjuna Nagar, Tarvoka, Secunderabad - 17. ಇವರನ್ನು ಸಂಪರ್ಕಿಸುವುದು ಉತ್ತಮ.



# ಮಾರ್ಗದರ್ಶಿ

ಡಾ. ಎಸ್.ಸಿ. ಶರ್ಮಾ
ಪ್ರಾಧ್ಯಾಪಕರು
ಆರ್.ವಿ. ಇಂಜಿನಿಯರಿಂಗ್ ಕಾಲೇಜು,
ಮೈಸೂರು ರಸ್ತೆ, ಬೆಂಗಳೂರು - ೫೬೦ ೦೫೯

ರಮೇಶ್, ಶಿವಮೊಗ್ಗ

**ನಾನು ಅಂತಿಮ ಬಿ.ಎ. ಓದುತ್ತಿದ್ದೇನೆ. ನನಗೆ ಸಿ.ಎ. (ಚಾರ್ಟರ್ಡ್ ಅಕೌಂಟೆಂಟ್) ಮಾಡಬೇಕೆನ್ನುವ ಆಸೆ ಇದೆ. ಅದಕ್ಕೆ ನೀವು ನನಗೆ ಸಿ.ಎ. ಯಾವ ಯಾವ ವಿಶ್ವವಿದ್ಯಾಲಯಗಳಲ್ಲಿ ಇದೆ. ಸೇರಬೇಕಾದರೆ ಫೀಜು ಎಷ್ಟು ಹಾಗೂ ಇನ್ನಿತರ ಮಾಹಿತಿ ಒದಗಿಸುವುದು.**

ನೀವು ಚಾರ್ಟೆಡ್ ಅಕೌಂಟೆಂಟ್ ಕೋರ್ಸ್ ಮಾಡಬೇಕಾದಲ್ಲಿ ನೀವು ಬಿ.ಎ. ಪದವೀಧರ ಇರುವದರಿಂದ ಒಂದು ವರ್ಷದ ಫೌಂಡೇಷನ್ ಕೋರ್ಸ್ ಮಾಡಬೇಕಾಗುವುದು. ಇದು ICAI ಅವರು ಈ ಕೋರ್ಸ್‌ನ್ನು ನೆಡೆಸುತ್ತಾರೆ. ಇನ್ನು ಹೆಚ್ಚಿನ ವಿವರಗಳಿಗಾಗಿ, Joint Director of Studies, The institue of chartered Accountants of India, 122, Nangombakkam, P.B. 3314, Channai - 34. ಇವರನ್ನು ಸಂಪರ್ಕಿಸಬಹುದು.

ಸುನಿಲಕುಮಾರ ನಾಯ್ಕ, ಹುಬ್ಬಳ್ಳಿ

**ಸಾರ್, ನಾನು ಈ ವರ್ಷ ಬಿ.ಎ. ಎರಡನೇ ವಿಭಾಗದಲ್ಲಿ ಓದುತ್ತಿದ್ದೇನೆ. ನಾನು ಬಿಜಿನೆಸ್ ಮ್ಯಾನೇಜ್‌ಮೆಂಟ್‌ನಲ್ಲಿ ಯಾವುದೇ ಕೋರ್ಸು ಮಾಡಿರುವುದಿಲ್ಲಾ. ಆದರೆ ನಾನು ಸಿಂಗಾಪುರದಲ್ಲಿ ನೌಕರಿ ಮಾಡಬೇಕೆಂದಿದ್ದೇನೆ. ಅಲ್ಲಿ ನೌಕರಿ ಸಿಗಬೇಕಾದರೆ ಅರ್ಹತೆಗಳೇನು? ಅಲ್ಲಿ ನೌಕರಿ ಹೇಗೆ ಸೇರುವುದು. ಅವರ ವಿಳಾಸವೇನು? ಒಂದು ವೇಳೆ ಅವರು ನೌಕರಿಗೆ ಆಹ್ವಾನಿಸಿದರೆ ನನ್ನಂತಹ ಬಡ ವಿದ್ಯಾರ್ಥಿಗಳಿಗೆ ಮತ್ತು ಎಸ್.ಸಿ., ಎಸ್.ಟಿ.ಯವರಿಗೆ ಸರಕಾರವೇನಾದರೂ ಸಹಾಯ ಧನ ಒದಗಿಸುವುದೇ? ಇದರ ಬಗ್ಗೆ ಮಾಹಿತಿ ಕೊಡುವಿರಾ?**

ನೀವು ವಿದೇಶದಲ್ಲಿ ಕಾರ್ಯ ನಿರ್ವಹಿಸಬೇಕಾದರೆ ಪತ್ರಿಕೆಗಳಲ್ಲಿ ಜಾಹಿರಾತುಗಳನ್ನು ವೀಕ್ಷಿಸುವುದು ಉತ್ತಮ. ನೀವು ಯಾವುದಾದರೂ ಉತ್ತಮ ಕೋರ್ಸ್ ಮಾಡಿದ್ದಲ್ಲಿ, ಅವರ Requirement ಅನುಗುಣವಾಗಿ ನೀವು ಅರ್ಜಿಯನ್ನು ಸಲ್ಲಿಸಬೇಕಾಗುವುದು. ವಿದೇಶಕ್ಕೆ ಹೋಗಬೇಕಾದರೆ ನೀವು Passport ಮಾಡಿಸಬೇಕಾಗುವುದು. ನೀವು ದಿನಪತ್ರಿಕೆಗಳನ್ನು ವೀಕ್ಷಿಸುವುದು ಉಪಯೋಗಕಾರಿ.

ರಾಜೇಶ್, ಬೆಂಗಳೂರು

**ನಾನು ಅಂದರೆ ರಾಜೇಶ್ ಬಿ.ಎ. ಅಂತಿಮ ವರ್ಷದ ವಿದ್ಯಾರ್ಥಿ. ಮುಂದೆ ಐ.ಎ.ಎಸ್. ಮಾಡಬೇಕೆಂದು ನಿರ್ಧಾರ ಮಾಡಿದ್ದೇನೆ. ಐ.ಎ.ಎಸ್. ಸೇರಲು ಅರ್ಹತೆ ಏನಿರಬೇಕು ಮತ್ತು ಬಿ.ಎ. ನಲ್ಲಿ ಶೇ. ಅಂಕಗಳೆಷ್ಟಿರಬೇಕು. ಇದರ ಆಯ್ಕೆಯ ವಿಧಾನ ಹೇಗೆ, ಇದರ ವಿಷಯಗಳಾವುವು, ಯಾವ ಮಾಧ್ಯಮದಲ್ಲಿ ಮಾಡಿದರೆ ಚೆನ್ನಾಗಿರುತ್ತೆ. ಐ.ಎ.ಎಸ್. ನಲ್ಲಿ ರ್‍ಯಾಂಕ್ ಪಡೆಯಲೇಬೇಕಾದ ಅವಶ್ಯಕತೆ ಇದೇಯಾ, ಇದರ ಬಗ್ಗೆ ತರಬೇತಿ ಎಲ್ಲಿ ನೀಡಲಾಗುತ್ತದೆ, ಬೆಂಗಳೂರಿನ "ಜಸ್ಟಿಸ್" ಸಂಸ್ಥೆಯಲ್ಲಿ ತರಬೇತಿ ನೀಡುವುದು ನಿಜವೇ, ಪ್ರತಿ ವರ್ಷ ಪರೀಕ್ಷೆ ಯಾವ ತಿಂಗಳಲ್ಲಿ ನಡೆಸುತ್ತಾರೆ. ಎನ್ನುವುದರ ಬಗ್ಗೆ ವಿವರವಾಗಿ ತಿಳಿಸಿಕೊಟ್ಟರೆ ನಾನು ನಿಮಗೆ ಸದಾ ಋಣಿಯಾಗಿರುತ್ತೇನೆ.**

ಐ.ಎ.ಎಸ್. ಮಾಡಬೇಕಾದಲ್ಲಿ ಕನಿಷ್ಠ ಅರ್ಹತೆ ಪದವಿಯಾಗಿದ್ದರೆ ಸಾಕು. ಇದನ್ನು ಕುರಿತು ಜಾಹಿರಾತು ಡಿಸೆಂಬರ್ ತಿಂಗಳಲ್ಲಿ ಎಂಪ್ಲಾಯ್‌ಮೆಂಟ್ ನ್ಯೂಸ್ ಮತ್ತು ಪ್ರಮುಖ ದಿನಪತ್ರಿಕೆಗಳಲ್ಲಿ ನೀಡಲಾಗುವುದು. ಇದಕ್ಕೆ ವಯೋಮಿತಿ ೨೧-೨೮. ಐ.ಎ.ಎಸ್. ಆಫೀಸರ್ ಆಗಬೇಕಾದಲ್ಲಿ ಮೊದಲ ೧೦೦ ರ್‍ಯಾಂಕ್‌ಗಳಲ್ಲಿ ಒಬ್ಬರಾಗಿರಬೇಕು. ರ್‍ಯಾಂಕಿಂಗ್ ವಿಧಾನದ ಮೇಲೆ ಆಯ್ಕೆ ಮಾಡಲಾಗುವುದು. ಬೆಂಗಳೂರಿನ ಜಸ್ಟಿಸ್ ಸಂಸ್ಥೆಯು ಈ ಬಗ್ಗೆ ಉಚಿತ ತರಬೇತಿ ನೀಡುತ್ತದೆ.

ಶಾಷಸಾಬು, ನಾಗರಹಾಳು

**ನಾನು ೧೯೮೧-೮೨ರಲ್ಲಿ ಎಸ್.ಎಸ್.ಎಲ್.ಸಿ.ಯಲ್ಲಿ ಅನುತ್ತೀರ್ಣನಾಗಿ ವಿದ್ಯಾಭ್ಯಾಸವನ್ನು ನಿಲ್ಲಿಸಿದವನು. ಆರ್ಥಿಕ ತೊಂದರೆ ಕಾರಣ ಮುಂದೆ ಕಲಿಯಲು ಆಗಿಲ್ಲ. ಈಗ ಸ್ವಯಂ ಉದ್ಯೋಗದಿಂದ ಆರ್ಥಿಕ ಪರಿಸ್ಥಿತಿ ಸ್ವಲ್ಪ ಸುಧಾರಿಸಿದೆ. ನನಗೆ ಪತ್ರಿಕೋದ್ಯಮದೆಡೆಗೆ ಒಲವಿದೆ. ಎಸ್.ಎಸ್.ಎಲ್.ಸಿ. ಅನುತ್ತೀರ್ಣನಾದ ನಾನು ಪತ್ರಿಕೋದ್ಯಮ ಸೇರಬಹುದೇ? ಕಲಿಸುವ ಸಂಸ್ಥೆಗಳು ಇವೆಯೇ? ಎಲ್ಲೆಲ್ಲಿ ಇವೆ? ಖರ್ಚು ಎಷ್ಟು ಬರಬಹುದು? ದಯವಿಟ್ಟು ಇದರ ಬಗ್ಗೆ ಪೂರ್ಣ ಮಾಹಿತಿ ಒದಗಿಸಬೇಕಾಗಿ ತಮ್ಮಲ್ಲಿ ವಿನಂತಿಸುತ್ತೇನೆ.**

ನೀವು ಪತ್ರಿಕೋದ್ಯಮ ಸೇರಬೇಕಾದಲ್ಲಿ ಕನಿಷ್ಠ ಪಿ.ಯು.ಸಿ. ಆಗಿರಬೇಕು. ಈ ವಿಷಯದಲ್ಲಿ ಪದವಿ ಪಡೆಯಬೇಕಾದರೆ ಯಾವುದಾದರೂ ಪದವಿಯನ್ನು ಮುಗಿಸಿರಬೇಕು. ಆದುದರಿಂದ ನೀವು ಇಂದಿರಾಗಾಂಧಿ ಮುಕ್ತ ವಿಶ್ವವಿದ್ಯಾಲಯದ ಮೂಲಕ ಯಾವುದಾದರೂ ಪದವಿಯನ್ನು ಮುಗಿಸಿಕೊಳ್ಳುವುದು ಉತ್ತಮ.

ಕೆ. ಮೊಹಮ್ಮದ್, ಆನಂದಪುರ

**ನಾನು ದ್ವಿತೀಯ ಪಿ.ಯು.ಸಿ. (ಸೈನ್ಸ್) ದ್ವಿತೀಯ ಶ್ರೇಣಿಯಲ್ಲಿ ಪಾಸಾಗಿದ್ದು ಈಗ ನನಗೆ ೧೯ ವಯಸ್ಸು ನಡೆಯುತ್ತಿವೆ. ನನಗೆ G.T.T.C. (Govt. Tool & Training Centre) ಕೋರ್ಸ್ ಮಾಡಬೇಕೆಂಬ ಆಸೆ. ಆದರೆ, ಬೆಂಗಳೂರಿನ ಕೇಂದ್ರದಲ್ಲಿ ವಿಚಾರಿಸಿದರೆ, ೧೮ ವಯಸ್ಸು ಕೊನೆಯ ವಯಸ್ಸು ಎಂದು ಹೇಳುತ್ತಾರೆ. ಆದರೆ ಬೇರೆ ಕೇಂದ್ರಗಳಾದ, ಹಾಸನ, ಹೊಸಪೇಟೆ, ದಾಂಡೇಲಿ, ಗುಲ್ಬರ್ಗಾ ಕೇಂದ್ರಗಳಲ್ಲಿ ವಯಸ್ಸಿನ ಮಿತಿಯನ್ನು ತಿಳಿಸಬೇಕು ಮತ್ತು ವರ್ಷದಲ್ಲಿ ಎಷ್ಟು ಸಲ ಕರೆಯುತ್ತಾರೆ ಎಂಬುದನ್ನು ತಿಳಿಸಬೇಕು.**

ನೀವು ಅವಶ್ಯವಾಗಿ GTTC ರವರು ನಡೆಸುವ Diploma ಕೋರ್ಸನ್ನು ಮಾಡಬಹುದು. ಪ್ರತಿ ವರ್ಷ ಜೂನ್ ತಿಂಗಳಲ್ಲಿ ಈ ಬಗ್ಗೆ ಎಲ್ಲಾ ಪ್ರಮುಖ ಪತ್ರಿಕೆಗಳಲ್ಲಿ ಜಾಹಿರಾತು ನೀಡಲಾಗುವುದು. ಲಿಖಿತ ಪರೀಕ್ಷೆಯ ಮೂಲಕ ಆಯ್ಕೆ ಮಾಡಲಾಗುವುದು. ಇನ್ನು ಹೆಚ್ಚಿನ ವಿವರಗಳಿಗಾಗಿ GTTC, Rajajinagar Industrial Area, West of Card Road, Bangalore-10. ಇವರನ್ನು ಸಂಪರ್ಕಿಸಬಹುದು.

ಚಂದ್ರಪ್ಪ, ಉಯಳಿ ಹೊಸೂರು

**ನಾನು ಅಂಚೆ ಮೂಲಕ ಪದವಿ ಶಿಕ್ಷಣ ಮಾಡಿಕೊಳ್ಳಬೇಕೆಂದಿರುವೆ. ಹೀಗೆ ಪದವೀಧರನಾಗುವುದರಿಂದ I.F.S., I.P.S., I.A.S. ಮುಂತಾದ ಪದವಿ ಆಧಾರಿತ ಪರೀಕ್ಷೆಗಳನ್ನು ತೆಗೆದುಕೊಳ್ಳಲು ಅರ್ಹನಾಗುವೆನೋ ಇಲ್ಲವೋ? ಹಾಗೆಯೇ ಮುಂದೆ ಸ್ನಾತಕೋತ್ತರ ಪದವಿ ಪೂರೈಸಲು ವಿಶ್ವವಿದ್ಯಾಲಯದಲ್ಲಿ ಪ್ರವೇಶ ಪಡೆಯಲು ಸಾಧ್ಯವಾಗುವುದೇ? ದಯವಿಟ್ಟು ವಿಶ್ಲೇಷಿಸಿ.**

ನೀವು ಅವಶ್ಯವಾಗಿ ಅಂಚೆ ಮೂಲಕ ಪದವಿಯನ್ನು ಮುಂದುವರಿಸಿ, ಇದರ ಆಧಾರದ ಮೇಲೆ ನೀವು ಎಲ್ಲಾ ಸ್ಪರ್ಧಾತ್ಮಕ ಪರೀಕ್ಷೆಗಳನ್ನು ಬರೆಯಬಹುದು. ಇದಕ್ಕೆ ಯಾವ ರೀತಿಯ ಸಂದೇಹ ಬೇಡಾ. ನಿಮ್ಮ ಇಚ್ಛೆಯಂತೆ ನೀವು ಮುಂದಿನ ಅಭ್ಯಾಸವು ಕೂಡ ಮಾಡಬಹುದು.

ಈಶ್ವರ್ ಎನ್ ಪಾಟೀಲ, ಸುರೇಬಾನ

**ನನ್ನ ಜನ್ಮವು ೨೫-೧೧-೧೯೭೭ರಂದು ಆಯಿತು. ನನಗೆ ಈಗ ೧೮ ವರ್ಷ ೭ ತಿಂಗಳು ನಡೆಯುತ್ತಿವೆ. ಏಪ್ರಿಲ್-೯೭ರಂದು ಎಸ್.ಎಸ್.ಎಲ್.ಸಿ. ಯನ್ನು ಮುಗಿಸಿದೆ. ಪಿ.ಯು.ಸಿ. II ಕಲಾ ವಿಭಾಗದಲ್ಲಿ ನೇರವಾಗಿ ಪರೀಕ್ಷೆ ಕಟ್ಟಲು ಉದ್ದೇಶಿಸಿದ್ದೇನೆ. ಇದಕ್ಕೆ ನಾನು ಹತ್ತಿರದ ಕಾಲೇಜಿನಲ್ಲಿ ಮಾಹಿತಿ ಕೇಳಿದಾಗ ೧೯ ವರ್ಷ ತುಂಬಿದಲ್ಲಿ ಪರೀಕ್ಷೆ ಕಟ್ಟಬಹುದು ಎಂದು ಹೇಳಿದರು. ಆದರೆ ಡಾ. ಎಸ್.ಸಿ. ಶರ್ಮ ರವರು ೧೯ ವರ್ಷ ತುಂಬಿದಲ್ಲಿ ಪರೀಕ್ಷೆ ಕಟ್ಟಬಹುದು ಎಂದು ಹೇಳಿದ್ದಾರೆ. ಆದ್ದರಿಂದ ದಯವಿಟ್ಟು ಈ ನನ್ನ ಪ್ರಶ್ನೆಗೆ ಸಮರ್ಪಕ ಉತ್ತರ ತಿಳಿಸುವುದು.**

ನಿಮಗೆ ೧೯ ವರ್ಷ ವಯಸ್ಸಾದಲ್ಲಿ ನೀವು ನೇರವಾಗಿ ಪಿ.ಯು.ಸಿ. ಪರೀಕ್ಷೆಯನ್ನು ಕಟ್ಟಬಹುದು. ಈ ಬಗ್ಗೆ ಆಗಸ್ಟ್-ಸೆಪ್ಟೆಂಬರ್ ತಿಂಗಳಲ್ಲಿ ಪ್ರಮುಖ ದಿನಪತ್ರಿಕೆಗಳಲ್ಲಿ ಜಾಹೀರಾತು ಬರುತ್ತದೆ. ನಿಮ್ಮ ಹತ್ತಿರದ ಸರಕಾರಿ ಪಿ.ಯು. ಕಾಲೇಜನ್ನು ಹೆಚ್ಚಿನ ವಿವರಗಳಿಗಾಗಿ ಸಂಪರ್ಕಿಸಿರಿ.

ಅರವಿಂದ್ ಎನ್. ಮಹಾಲೇ, ಹೊನ್ನಾವರ

**ನನ್ನ ತಮ್ಮನು ಈ ಶಿಕ್ಷಣದ ವರ್ಷ (೯೭-೯೮)ರಿಂದ ಪಿ.ಯು.ಸಿ. I ವಿಜ್ಞಾನ ವಿಭಾಗದಲ್ಲಿ ಓದುತ್ತಿದ್ದಾನೆ. ಏರೋನಾಟಿಕ್ಸ್ ಇಂಜಿನಿಯರಿಂಗ್‌ನ್ನು ಮಾಡಲು ಉದ್ದೇಶ ಇಟ್ಟುಕೊಂಡಿದ್ದಾನೆ. ಆದ್ದರಿಂದ ಈ ಕೋರ್ಸ್ ಮಾಡಲು ಅವನಿಗೆ ಯಾವ ಅರ್ಹತೆಗಳು ಇರಬೇಕು ಮತ್ತು ಈ ಕೋರ್ಸ್ ಮಾಡಲು ಯಾವ ನಗರದಲ್ಲಿ ಕಾಲೇಜ್‌ಗಳು ಇವೆ ಎಂಬುದನ್ನು ದಯವಿಟ್ಟು ತಿಳಿಸುವುದು.**

ನೀವು ಅವಶ್ಯವಾಗಿ ಪಿ.ಯು.ಸಿ.ಯಲ್ಲಿ ಒಳ್ಳೆಯ ಅಂಕ ಪಡೆದಲ್ಲಿ Aeronatical Engineering ಕೋರ್ಸ್‌ನ್ನು ಮಾಡಬಹುದು. ಇದಕ್ಕೆ ಅರ್ಹತೆ ಎಂದರೆ P.U.C. 50% ಲಿಖಿತ ಪರೀಕ್ಷೆಯನ್ನು ಬರೆಯಬೇಕಾಗುವುದು. ಕಾಲೇಜುಗಳ ವಿವರಗಳಿಗಾಗಿ ಮುಂದಿನ ಸಂಚಿಕೆಯನ್ನು ವೀಕ್ಷಿಸಿ.

ಪ್ರಮೋದ ಹ. ಪಾಟೀಲ್, ಜಾಲಿಹಾಳ

**ನಾನು ದ್ವಿತೀಯ ಪಿ.ಯು.ಸಿ. (ವಿಜ್ಞಾನ) ವಿದ್ಯಾರ್ಥಿ. ಮುಂದೆ ಬಿಸಿನೆಸ್ ಮ್ಯಾನೇಜ್‌ಮೆಂಟ್ ಕೋರ್ಸ್ ಮಾಡಬೇಕೆಂದಿದ್ದೇನೆ. ದಯವಿಟ್ಟು ಅದರ ಅರ್ಹತೆಯನ್ನು ತಿಳಿಸಿರಿ.**

ನೀವು ಅಗತ್ಯವಾಗಿ ಪಿ.ಯು.ಸಿ. ಆಧಾರದ ಮೇಲೆ B.B.M. ಕೋರ್ಸ್‌ನ್ನು ಮುಂದುವರಿಸಬಹುದು. ಇದು ಸಾಮಾನ್ಯವಾಗಿ ಎಲ್ಲಾ ವಿಶ್ವವಿದ್ಯಾಲಯಗಳಲ್ಲಿ ಲಭ್ಯವಿದ್ದು ಒಳ್ಳೆಯ ಅಂಕಗಳು ಇರುವುದು ಉತ್ತಮ.

ಪ್ರಸನ್ನ, ಜಾಲಿಹಾಳ

**ನಾನು ದ್ವಿತೀಯ ಪಿ.ಯು.ಸಿ. (ವಿಜ್ಞಾನ) ವಿದ್ಯಾರ್ಥಿಯಾಗಿದ್ದು, ಮುಂದೆ N.T.T.F.ಕೋರ್ಸ್ ಮಾಡಬೇಕೆಂದಿರುವೆ. ದಯವಿಟ್ಟು ಅದರ ವಿಳಾಸ ಮತ್ತು ಅರ್ಹತೆಗಳನ್ನು ತಿಳಿಸಿರಿ.**

ಅವಶ್ಯವಾಗಿ ನೀವು N.T.T.F.ರವರು ನಡೆಸುವ ಮೂರು ವರ್ಷದ ಡಿಪ್ಲೋಮಾ ಕೋರ್ಸ್‌ನ್ನು ಮಾಡಬಹುದು. ಇದಕ್ಕೆ ಕನಿಷ್ಠ ಶೇ. ೫೦ರಷ್ಟು ಅಂಕಗಳು P.U.ದಲ್ಲಿ ಪಡೆದಿರಬೇಕು. ಲಿಖಿತ ಪರೀಕ್ಷೆಯ ಮೂಲಕ ಪ್ರವೇಶ ತೆಗೆದುಕೊಳ್ಳಲಾಗುವುದು. ಪರೀಕ್ಷೆಯು ಸಾಮಾನ್ಯವಾಗಿ ಫೆಬ್ರವರಿ ತಿಂಗಳಲ್ಲಿ ನಡೆಯುತ್ತದೆ. ಹೆಚ್ಚಿನ ವಿವರಗಳಿಗಾಗಿ N.T.T.F., Hava Khas, New Delhi ಇವರನ್ನು ಸಂಪರ್ಕಿಸಬಹುದು.

# ಅತಿ ಬೇಡಿಕೆಯ 'ಮೆಡಿಕಲ್ ಎಲೆಕ್ಟ್ರಾನಿಕ್ಸ್' ಕೋರ್ಸು

ಮನುಷ್ಯನ ಆರೋಗ್ಯ ತಪಾಸಣೆ ಮತ್ತು ಚಿಕಿತ್ಸೆಗೆ ಬಳಸುವ ಅತ್ಯಾಧುನಿಕ ಎಲೆಕ್ಟ್ರಾನಿಕ್ ಉಪಕರಣಗಳ ನಿರ್ವಹಣೆಗೆ ಸಂಬಂಧಿಸಿದಂತೆ ಬೆಂಗಳೂರಿನ ವಿಶ್ವ ಭಾರತಿ ಸಂಸ್ಥೆ ''ಕ್ಲಿನಿಕಲ್ ಇಂಜಿನಿಯರಿಂಗ್ ಟೆಕ್ನಾಲಜಿ'' ಎಂಬ ವಿನೂತನವಾದ ಕೋರ್ಸೊಂದನ್ನು ಪ್ರಾಯೋಜಿಸುತ್ತಿದೆ. ಶುಶ್ರುತಾ ಇನ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಎಲೆಕ್ಟ್ರಾನಿಕ್ಸ್ ಮತ್ತು ಬಯೋ ಮೆಡಿಕಲ್ ಇಂಜಿನಿಯರಿಂಗ್ ವತಿಯಿಂದ ನಡೆಯುವ ಈ ಕೋರ್ಸ್‌ನ ಅವಧಿ ಒಂದು ವರ್ಷ ಮಾತ್ರ.



## ಅಗತ್ಯ

ತಾಲೂಕು ಹಾಗೂ ಜಿಲ್ಲಾ ಕೇಂದ್ರಗಳಲ್ಲಿನ ಸರ್ಕಾರಿ ಆಸ್ಪತ್ರೆಗಳಲ್ಲಿ, ಖಾಸಗಿ ನರ್ಸಿಂಗ್ ಹೋಂಗಳಲ್ಲಿ ರೋಗ ಚಿಕಿತ್ಸೆ ಹಾಗೂ ತಪಾಸಣೆಗೆಂದು ಎಕ್ಸ್‌ರೇ, ಸ್ಕ್ಯಾನಿಂಗ್, ಶಸ್ತ್ರ ಚಿಕಿತ್ಸಾ ಘಟಕ ಸೇರಿದಂತೆ ಅನೇಕ ರೀತಿಯ ಎಲೆಕ್ಟ್ರಾನಿಕ್ ಉಪಕರಣಗಳನ್ನು ನಾವು ಕಾಣುತ್ತೇವೆ. ದೊಡ್ಡ ನಗರಗಳಲ್ಲಂತೂ ಹೈಟೆಕ್ ಆಸ್ಪತ್ರೆಗಳಲ್ಲಿ ಪ್ರತಿ ಹಂತದಲ್ಲಿ ಎಲೆಕ್ಟ್ರಾನಿಕ್ ಉಪಕರಣಗಳ ಬಳಕೆ ಇದ್ದೇ ಇರುತ್ತದೆ.

ವೈದ್ಯಕೀಯ ಕಾಲೇಜುಗಳನ್ನೊಳಗೊಂಡ ಆಸ್ಪತ್ರೆಯಲ್ಲಂತೂ ಎಲೆಕ್ಟ್ರಾನಿಕ್ ಉಪಕರಣ ಬಳಕೆ ಇರದ ದಿನವೇ ಇಲ್ಲ. ಇನ್ನು ವಿದೇಶಗಳಲ್ಲಂತೂ ಇವುಗಳ ಬಳಕೆ ಸವಿಸ್ತಾರವಾಗಿದೆ.

ಹೀಗೆ ಆಸ್ಪತ್ರೆಗಳಲ್ಲಿ ಬಳಸುವ ಅತ್ಯಾಧುನಿಕವಾದ ಎಲೆಕ್ಟ್ರಾನಿಕ್ ಉಪಕರಣಗಳ ನಿರ್ವಹಣೆ, ರಿಪೇರಿಯ ಬಗ್ಗೆ ಸಿದ್ಧಿ ಸಾಧಿಸುವ ವಿದ್ಯೆಗೆ 'ಕ್ಲಿನಿಕಲ್ ಇಂಜಿನಿಯರಿಂಗ್ ಟೆಕ್ನಾಲಜಿ' ಎಂದು ಕರೆಯಲಾಗುತ್ತದೆ. ಇದಕ್ಕೆ ಚಿಕಿತ್ಸಾಲಯದ ಇಂಜಿನಿಯರಿಂಗ್ ತಂತ್ರಜ್ಞಾನ ಎಂದು ಕನ್ನಡದಲ್ಲಿ ಹೇಳಬಹುದು.

ಆಸಕ್ತ ಅರ್ಹ ಅಭ್ಯರ್ಥಿಗಳು ಪ್ರಾಸ್ಪೆಕ್ಟಸ್‌ಗಾಗಿ ಈ ಕೆಳಕಂಡ ವಿಳಾಸವನ್ನು ಸಂಪರ್ಕಿಸಬಹುದು.
Director (Admission)
SUSRUTA
Institute of Medical Electronics
and Bio Medical Engineering

Care : Vishwa Bharati Institute
36, Church Street,
BANGALORE - 560 001

## ಉದ್ಯೋಗ ಭರವಸೆ

ಆಸ್ಪತ್ರೆಯಲ್ಲಿ ಬಳಸಬಹುದಾದ ಈ ಅತ್ಯಾಧುನಿಕವಾದ ಎಲೆಕ್ಟ್ರಾನಿಕ್ ಉಪಕರಣಗಳು ದುರಸ್ಥಿಗೊಂಡರೆ ಅದನ್ನು ರಿಪೇರಿ ಮಾಡಲು ತಂತ್ರಜ್ಞರು ಸಿಗುವುದು ತೀರಾ ದುಸ್ತರ. ಅದರಲ್ಲೂ ರಾಜಧಾನಿಯಿಂದ ಬಹುದೂರವಿರುವ ಪಟ್ಟಣಗಳಲ್ಲಂತೂ ಈ ಸಮಸ್ಯೆ ಹೇಳತೀರದು. ಅಷ್ಟೇ ಏಕೆ? ಸಿಂಗಾಪುರ್, ಮಲೇಷಿಯಾ, ಕೆನಡಾ, ಅಮೆರಿಕಾದಂತಹ ಅಭಿವೃದ್ಧಿ ರಾಷ್ಟ್ರಗಳಲ್ಲಿ ಕ್ಲಿನಿಕಲ್ ಇಂಜಿನಿಯರಿಂಗ್ ಟೆಕ್ನಾಲಜಿ ಪದವಿ ಪಡೆದವರಿಗೆ ಉತ್ತಮ ವೇತನದ ಹಾಗೂ ವಿಶೇಷ ಸವಲತ್ತಿನ ಉದ್ಯೋಗ ಸಿಗುವ ಭರವಸೆಗಳಿವೆ. ಶುಶ್ರೂತಾ ಸಂಸ್ಥೆಯು ಈ ಕೋರ್ಸ್ ಮುಗಿದ ನಂತರ ಕ್ಯಾಂಪಸ್ ಸಂದರ್ಶನ ಏರ್ಪಡಿಸುತ್ತದೆ. ಮೊದಲ ಐದು ವರ್ಷಗಳಲ್ಲಿ ಶೇ. ೧೦೦ರಷ್ಟು ಉದ್ಯೋಗ ಭರವಸೆ ಇರುವ ಸಾಧ್ಯತೆ ಇದೆ.

ವೈದ್ಯಕೀಯ ಕ್ಷೇತ್ರದಲ್ಲಿ ಎಲೆಕ್ಟ್ರಾನಿಕ್ ಉಪಕರಣಗಳ ಬಳಕೆ ದಿನದಿನಕ್ಕೂ ಹೆಚ್ಚಾಗುತ್ತಿರುವ ಸಂದರ್ಭದಲ್ಲಿ ಇವುಗಳ, ಬಳಕೆ, ನಿರ್ವಹಣೆ, ರಿಪೇರಿಯ ಸಮಸ್ಯೆ ಕೂಡ ಉದ್ಭವವಾಗಿದೆ. ಈ ಕಾರಣದಿಂದ 'ಕ್ಲಿನಿಕಲ್ ಇಂಜಿನಿಯರಿಂಗ್ ಟೆಕ್ನಾಲಜಿ'' ಕೋರ್ಸ್‌ನಲ್ಲಿ ಈ ಕ್ಷೇತ್ರಕ್ಕೆ ಅಗತ್ಯವಿರುವ ಕೆಲಸಗಳಲ್ಲಿ ನೈಪುಣ್ಯತೆ ಪಡೆಯಲು ಬೇಕಾದ ಅಗತ್ಯತೆಯನ್ನು ಕಲ್ಪಿಸಲಾಗಿದೆ.

## ಕಲಿಕೆ ವಿವರ

ಶುಶ್ರೂತಾ ಮೆಡಿಕಲ್ ಎಲೆಕ್ಟ್ರಾನಿಕ್ಸ್ ಮತ್ತು ಬಯೋ ಮೆಡಿಕಲ್ ಎಂಜಿನಿಯರಿಂಗ್ ಸಂಸ್ಥೆಯು ವೈದ್ಯಕೀಯೇತರ ಸಿಬ್ಬಂದಿಯನ್ನು ತಯಾರು ಮಾಡುವ ನಿಟ್ಟನಲ್ಲಿ ವಿಶೇಷ ಪ್ರಯತ್ನ ನಡೆಸುತ್ತಿದೆ. ವೈದ್ಯಕೀಯ ಸಿಬ್ಬಂದಿಗೆ ನೆರವಾಗಬಲ್ಲವರು ಅವರ ಕಾರ್ಯದಲ್ಲಿ

ನೈಪುಣ್ಯತೆ ಸಾಧಿಸಿರಲೇಬೇಕು. ಹೀಗಾದಲ್ಲಿ ಮಾತ್ರ ಯಶಸ್ವಿ ಚಿಕಿತ್ಸೆ ಸಾಧ್ಯ ಎಂದು ಮನಗಂಡಿರುವ ಶುಶ್ರೂಷಾ ಸಂಸ್ಥೆ ''ಕ್ಲಿನಿಕಲ್ ಇಂಜಿನಿಯರಿಂಗ್ ಟೆಕ್ನಾಲಜಿ ಕೋರ್ಸ್‌ನಲ್ಲಿ'' ಪಠ್ಯ ಪ್ರವಚನ ಮತ್ತು ಪ್ರಾಯೋಗಿಕ ತರಬೇತಿಯ ನಡುವೆ ಸಮತೋಲನ ಕಾಪಾಡುತ್ತದೆ.

ಕೋರ್ಸಿನ ಅವಧಿಯಲ್ಲಿ ಮನುಷ್ಯನ ಅಂಗರಚನಾಶಾಸ್ತ್ರ ಮತ್ತು ಶರೀರ ವಿಜ್ಞಾನ (Anatamy and Physiology) ಬಗ್ಗೆ ತಿಳಿವಳಿಕೆ ಮೂಡಿಸುವ ಮೂಲಕ ವೈದ್ಯಕೀಯ ಶಾಸ್ತ್ರದ ಪರಿಚಯ ಮಾಡಿಕೊಡಲಾಗುತ್ತದೆ. ನಂತರ ನುರಿತ ತಂತ್ರಜ್ಞರ ಮೂಲಕ ಆರೋಗ್ಯ ತಪಾಸಣೆ ಬಳಸುವ ಉಪಕರಣಗಳ ಬಗ್ಗೆ ಪ್ರಾಯೋಗಿಕವಾದ ಪ್ರವಚನ ನಡೆಸಲಾಗುತ್ತದೆ. ಇದರ ಬಳಕೆಯ ಪರಿವೀಕ್ಷಣೆಯ ಸಲುವಾಗಿ ಆಸ್ಪತ್ರೆ ಭೇಟಿ ಹಾಗೂ ಉಪಕರಣಗಳ ತಯಾರಿಕೆಯ ಪರಿಚಯ ಮಾಡಿಕೊಡುವ ಸಲುವಾಗಿ ಕೈಗಾರಿಕಾ ಘಟಕಕ್ಕೂ ಕಳುಹಿಸುವ ಕಾರ್ಯಕ್ರಮ ಈ ಕೋರ್ಸ್‌ನಲ್ಲಿದೆ.

ಈ ಉಪಕರಣಗಳ ವಿಲೇವಾರಿಗೆ ಅಗತ್ಯವಿರುವ ಮಾರುಕಟ್ಟೆಯ ವ್ಯವಸ್ಥೆ ಬಗ್ಗೆಯೂ ಈ ಕೋರ್ಸ್‌ನಲ್ಲಿ ಮಾಹಿತಿ ಸಿಗುತ್ತದೆ. ಒಟ್ಟಾರೆಯಾಗಿ ಈ ಕೋರ್ಸ್‌ನಲ್ಲಿ ವೈದ್ಯಕೀಯ ಉಪಕರಣಗಳ ಬಳಕೆ, ನಿರ್ವಹಣೆ, ರಿಪೇರಿ ಮತ್ತು ಇವುಗಳ ಮಾರಾಟದ ಬಗ್ಗೆ ವಿಶೇಷವಾಗಿ ತರಬೇತಿ ನೀಡಲಾಗುತ್ತದೆ.

### ಕೋರ್ಸಿನ ಪ್ರವೇಶಕ್ಕೆ ಅರ್ಹತೆ

ಕ್ಲಿನಿಕಲ್ ಇಂಜಿನಿಯರಿಂಗ್ ಟೆಕ್ನಾಲಜಿಗೆ ಪ್ರವೇಶ ಬಯಸುವವರು ಪಿ.ಸಿ.ಎಂ.ಬಿ-ಇ ಐಚ್ಛಿಕ ವಿಷಯಗಳಲ್ಲಿ ಪಿಯುಸಿ ಅಥವಾ ಭೌತಶಾಸ್ತ್ರ ಗಣಿತ ಮತ್ತು ರಸಾಯನಶಾಸ್ತ್ರ ಅಥವಾ ಭೌತಶಾಸ್ತ್ರ ಗಣಿತ ಮತ್ತು ಎಲೆಕ್ಟ್ರಾನಿಕ್ಸ್ ವಿಷಯಗಳಲ್ಲಿ ಬಿಎಸ್ಸಿ ಪದವಿ ಪಡೆದಿರಬೇಕು. ಅಭ್ಯರ್ಥಿಯು ಈ ಪರೀಕ್ಷೆಗಳಲ್ಲಿ ಕನಿಷ್ಠ ೬೦ರಷ್ಟು ಅಂಕಗಳಿಸಿರಲೇಬೇಕು.




### ಆಯ್ಕೆ ವಿಧಾನ

ಅರ್ಜಿ ಸಲ್ಲಿಸಿದವರಲ್ಲಿ ಅರ್ಹ ಅಭ್ಯರ್ಥಿಗಳಿಗೆ ಬೆಂಗಳೂರಿನಲ್ಲಿ ಪ್ರವೇಶ ಪರೀಕ್ಷೆ ನಡೆಸಲಾಗುವುದು. ಪ್ರವೇಶ ಪರೀಕ್ಷೆಯ ದಿನಾಂಕ, ವೇಳೆ ಸ್ಥಳವನ್ನು ಮುಂಚಿತವಾಗಿ ತಿಳಿಸಲಾಗುವುದು. ಪ್ರವೇಶ ಪರೀಕ್ಷೆಯಲ್ಲಿ ಅರ್ಹರಾದವರಿಗೆ ಸಂದರ್ಶನ ಹಾಗೂ ಚರ್ಚಾಕೂಟವನ್ನು ನಡೆಸಿದ ನಂತರ ಆಯ್ಕೆಯ ಅಂತಿಮ ತೀರ್ಮಾನವನ್ನು ಪ್ರಕಟಿಸಲಾಗುವುದು.

### ಮೀಸಲಾತಿ

ಪರಿಶಿಷ್ಟ ಜಾತಿ ಮತ್ತು ಪಂಗಡದ ಅಭ್ಯರ್ಥಿಗಳಿಗೆ ಶೇ. ೨೫ರಷ್ಟು ಮೀಸಲಾತಿ ನೀಡಲಾಗುವುದು. ಈ ವಿದ್ಯಾರ್ಥಿಗಳಿಗೆ ವ್ಯಾಸಂಗ ವೆಚ್ಚ ಭರಿಸುವಂತೆ ಮನವೊಲಿಸಲು ವಿಶ್ವ ಭಾರತಿ ಸಂಸ್ಥೆ ಸರ್ಕಾರದೊಂದಿಗೆ ಮಾತುಕತೆ ನಡೆಸುತ್ತಿದೆ.

# ಅಣ್ಣಾಮಲೈ ವಿಶ್ವವಿದ್ಯಾಲಯದ ಅಂಚೆ ಶಿಕ್ಷಣ

ಅಣ್ಣಾಮಲೈ ವಿಶ್ವವಿದ್ಯಾಲಯದ ಅಂಚೆ ತೆರಪಿನ ಶಿಕ್ಷಣ ನಿರ್ದೇಶನಾಲಯವು ಈ ಕೆಳಕಂಡ ಕೋರ್ಸ್‌ಗಳಿಗೆ ಅರ್ಜಿ ಆಹ್ವಾನಿಸಿದೆ.

ಇತಿಹಾಸ, ಸಮಾಜಶಾಸ್ತ್ರ, ಮನಶಾಸ್ತ್ರ ಅರ್ಥಶಾಸ್ತ್ರ, ಇಂಗ್ಲೀಷ್, ತಮಿಳಿನಲ್ಲಿ ಪದವಿ ಹಾಗೂ ಸ್ನಾತಕೋತ್ತರ ಪದವಿ.

ಬಿಬಿಎ, ಎಂಬಿಎ, ಬಿಕಾಂ, ಗಣಿತದಲ್ಲಿ ಬಿಎಸ್ಸಿ ಮತ್ತು ಎಂ.ಎಸ್ಸಿ, ಜನಸಂಖ್ಯಾ ಅಧ್ಯಯನದಲ್ಲಿ ಎಂಎ, ಕಾನೂನು ವಿಷಯದಲ್ಲಿ ಪದವಿ ಮತ್ತು ಸ್ನಾತಕೋತ್ತರ ಪದವಿ, ಕಾರ್ಮಿಕ ಕಾನೂನು, ತೆರಿಗೆ ಕಾನೂನಿನಲ್ಲಿ ಡಿಪ್ಲೋಮಾ, ವಿವಿಧ ಮ್ಯಾನೇಜ್‌ಮೆಂಟ್ ಕೋರ್ಸ್‌ಗಳ ಡಿಪ್ಲೋಮ, ತಾಂತ್ರಿಕ ಮತ್ತು ವಿವಿಧ ಇಂಜಿನಿಯರಿಂಗ್‌ಗೆ ಸಂಬಂಧಿಸಿದ ಕೋರ್ಸ್‌ಗಳು ಹೀಗೆ ಹಲವಾರು ಕೋರ್ಸ್‌ಗಳಿಗೆ ಅರ್ಜಿ ಆಹ್ವಾನಿಸಲಾಗಿದೆ.

ಎಂಬಿಎ ಪದವಿಗೆ ಕಡೆಯ ದಿನಾಂಕ : ಈಗಾಗಲೇ ಮುಗಿದಹೋಗಿದೆ.

ಇತರ ಕೋರ್ಸುಗಳಿಗೆ

ಅರ್ಜಿ ಪಡೆಯಲು : ೫.೧೧.೧೯೯೭

ಅರ್ಜಿ ಸ್ವೀಕರಿಸಲು : ೫.೧೧.೧೯೯೭

ಅರ್ಜಿ ನಮೂನೆಯ ಬೆಲೆ: ರೂ. ೫೦/-

ಅಂಚೆ ಮೂಲಕ ಅರ್ಜಿ ತರಿಸಿಕೊಳ್ಳುವವರು Director, D.D.E., Annamalai University ಹೆಸರಿನಲ್ಲಿ Annamalainagar / Chidambaram ನಲ್ಲಿ ಸಂದಾಯವಾಗುವಂತೆ ಕ್ರಾಸ್ ಮಾಡಿದ ಡಿ.ಡಿ. ತೆಗೆಸಿ ೨೫ಸೆಂ.ಮಿ.X೧೨ಸೆಂ.ಮಿ. ಅಳತೆಯ ಸ್ವವಿಳಾಸದ ಲಕೋಟೆಯೊಂದಿಗೆ ಈ ಕೆಳಗಿನ ವಿಳಾಸಕ್ಕೆ ಮನವಿ ಸಲ್ಲಿಸಬೇಕು. ಮನವಿ ಸಲ್ಲಿಸುವಾಗ ವಿದ್ಯಾರ್ಥಿಗಳು ತಮಗೆ ಯಾವ ಕೋರ್ಸಿಗೆ ಅರ್ಜಿ ಬೇಕಾಗಿದೆ ಎಂಬುದನ್ನು ಸ್ಪಷ್ಟವಾಗಿ ನಮೂದಿಸಬೇಕು.

ವಿಳಾಸ :
Director,
Directorate of Distance Education,
Annamalai University,
Annamalainagar - 608 002

## ತೋಟಗಾರಿಕೆ ತರಬೇತಿ

ರಾಜ್ಯ ತೋಟಗಾರಿಕೆ ಇಲಾಖೆಯ ಸಾರ್ವಜನಿಕರಿಗೆ ತೋಟಗಾರಿಕೆ ವಿಷಯದಲ್ಲಿ ಹತ್ತು ದಿನಗಳ ತರಬೇತಿ ನೀಡುತ್ತಿದೆ. ಪ್ರತಿ ತಿಂಗಳು ೪ನೇ ತಾರೀಖು ಈ ತರಬೇತಿ ಆರಂಭವಾಗುತ್ತದೆ.

ಲಾಲ್‌ಬಾಗ್‌ನಲ್ಲಿರುವ ತೋಟಗಾರಿಕಾ ತರಬೇತಿ ಕೇಂದ್ರದಲ್ಲಿ ಮಧ್ಯಾಹ್ನ ೩ರಿಂದ ೫.೩೦ರ ವರೆಗೆ ಈ ತರಬೇತಿ ನಡೆಯುತ್ತದೆ. ಆಸಕ್ತರು, ಸಹಾಯಕ ನಿರ್ದೇಶಕರು, ತೋಟಗಾರಿಕೆ (ತರಬೇತಿ) ತೋಟಗಾರಿಕೆ ತರಬೇತಿ ಕೇಂದ್ರ, ಲಾಲ್‌ಬಾಗ್, ಬೆಂಗಳೂರು ಇಲ್ಲಿ ಸಂಪರ್ಕಿಸಬಹುದು.

# ಎಂ.ಬಿ.ಎ. ಮಾಡುವುದು ಹೇಗೆ?

## ಮ್ಯಾನೇಜ್‌ಮೆಂಟ್‌ನಲ್ಲಿ ಪದವಿ ಹಾಗೂ ಸ್ನಾತಕೋತ್ತರ ಪದವಿ ಗಳಿಸುವ ಮಾರ್ಗ

**ಆಯಾ ವೃತ್ತಿ, ಹುದ್ದೆಗಳಲ್ಲಿ ಯಶಸ್ವಿಯಾದವರ ಮೂಲಕವೇ ವಿದ್ಯಾರ್ಥಿಗಳಿಗೆ ಅಧಿಕೃತವಾಗಿ ವೃತ್ತಿ ಮಾರ್ಗದರ್ಶನ ಮಾಡಿಸುವ ವಿನೂತನ ಪ್ರಯೋಗವಿದು.**

**ಈ ಬಾರಿ ಎಂ.ಬಿ.ಎ. ಪದವೀಧರರಾದ ಮಹದೇವಪ್ಪ ಆವಿನ ಅವರು ನಿಮಗೆ ಈ ಮಾಹಿತಿ ನೀಡಿದ್ದಾರೆ.**

ಎಲ್ಲಾ ವಿದ್ಯಾರ್ಥಿಗಳು ತಾವು ಓದು ಮುಗಿಸಿದ ತಕ್ಷಣ ಒಳ್ಳೆಯ ಹುದ್ದೆಗಳಿಗೆ ಹೋಗುವ ಹಂಬಲ ಹೊತ್ತು ಕಾತುರರಾಗಿರುತ್ತಾರೆ. ಆದರೆ ಅವಕಾಶಗಳು ದೊರೆಯದೆ, ಹಾಗೂ ದೊರೆತರೂ ಅವಕಾಶ ಫಲಕಾರಿಯಾಗದೆ ತುಂಬಾ ನಿರಾಶರಾಗುವುದು ಸರ್ವೇಸಾಮಾನ್ಯ.

ಇತ್ತೀಚಿನ ದಿನಗಳಲ್ಲಿ ಕೇವಲ ಪದವಿಗಳನ್ನು ಪಡೆದ ತಕ್ಷಣ ಹುದ್ದೆಗಳು ದೊರೆಯುವುದು ಕಠಿಣ ಸಂಗತಿ. ಇದಕ್ಕೆ ಕಾರಣ ಸರಕಾರಿ ಕ್ಷೇತ್ರದ ಹುದ್ದೆಗಳು ದಿನದಿನಕ್ಕೆ ಕಡಿಮೆ ಆಗುತ್ತಲಿವೆ. ಹಾಗೂ ಇದ್ದ ಕೆಲವು ಸ್ಥಾನಗಳಿಗೆ ಸ್ಪರ್ಧೆಗಳು ಜಾಸ್ತಿ. ಅಂಥಹ ಪರಿಸ್ಥಿತಿಯಲ್ಲಿ ಕೆಲಸ ದೊರಕುವ ಅವಕಾಶ ತುಂಬಾ ಕಡಿಮೆ.

ಆದರೆ ಈಗ ಕೆಲವು ವರ್ಷಗಳಿಂದ ಭಾರತ ಸರಕಾರದ ಸುಧಾರಿತ ಆರ್ಥಿಕ ನೀತಿಯಿಂದ ಔದ್ಯೋಗಿಕರಣ ಭರದಿಂದ ನಡೆಯುತ್ತಲಿದೆ. ಎಲ್ಲಾ ರಂಗದಲ್ಲೂ ಹೊಸ ಹೊಸ ಬೃಹತ್ ಕೈಗಾರಿಕೆಗಳೂ, ಮಧ್ಯಮ ವರ್ಗದ ಕೈಗಾರಿಕೆಗಳೂ ಹಾಗೂ ಚಿಕ್ಕ ಕೈಗಾರಿಕೆಗಳೂ ಸ್ಥಾಪಿತಗೊಳ್ಳುತ್ತಲಿವೆ. ವ್ಯವಹಾರಿಕ ರಂಗವು ಬೆಳೆಯುತ್ತಲಿದೆ ಹಾಗೂ ಹೆಚ್ಚುತ್ತಲಿದೆ. ಸರಕಾರಿ ಹುದ್ದೆಗಳು ಕಡಿಮೆಯಾಗುತ್ತಿದ್ದರೆ ಈಗ ಕೈಗಾರಿಕಾ ಹಾಗೂ ವಾಣಿಜ್ಯ ರಂಗದಲ್ಲಿ ಹುದ್ದೆಗಳು ಹೆಚ್ಚುತ್ತಲಿವೆ.

ಕೈಗಾರಿಕಾ ಮತ್ತು ವಾಣಿಜ್ಯ ರಂಗಗಳಲ್ಲಿ ಅವಕಾಶವಿರುವ ಹುದ್ದೆಗಳು ಬಹು ವಿಧದವು. ಬೇರೆ ಬೇರೆ ವಿಧದ ಹುದ್ದೆಗೆ ಬೇರೆ ಬೇರೆ ತರಹದ ವಿದ್ಯಾರ್ಹತೆ ಹಾಗೂ ಕೌಶಲ್ಯಗಳು ಬೇಕಾಗುತ್ತವೆ. ಇಂತಹ ಅರ್ಹತೆಗಳು ಕೇವಲ ಪದವಿ ಶಿಕ್ಷಣದಿಂದ ದೊರೆಯುವುದು ಕಷ್ಟಕರ.

ಕೈಗಾರಿಕೆ ಹಾಗೂ ವಾಣಿಜ್ಯ ರಂಗದಲ್ಲಿಯ ಹುದ್ದೆಗಳು ಕಡಿಮೆ ವೇತನದಿಂದ ಹಿಡಿದು ಅತಿ ಹೆಚ್ಚು ವೇತನ ಗಿಟ್ಟಿಸುವಂತಹವು ಇವೆ. ಕೆಲವು ಕೈಗಾರಿಕೆಗಳಲ್ಲಿ ವೇತನಕ್ಕೆ ಮಿತಿಯೇ ಇಲ್ಲ. ಅಭ್ಯರ್ಥಿಯ ಅರ್ಹತೆ ಹಾಗೂ ಕೌಶಲ್ಯತೆಯ ಮೇಲೆ ವೇತನ ನಿರ್ಣಿತವಾಗುತ್ತವೆ. ಕೆಲವು ಖಾಸಗಿ ಕ್ಷೇತ್ರದ ಕೈಗಾರಿಕೆ ಹಾಗೂ ವ್ಯವಹಾರ ಸಂಸ್ಥೆಗಳಲ್ಲಿ ವೇತನದ ಜೊತೆ ಸಂಸ್ಥೆಯ ಲಾಭಾಂಶದಲ್ಲಿ ಪುಟ್ಟ ಭಾಗವನ್ನು ತಮ್ಮ ವ್ಯವಹಾರ ನೋಡಿಕೊಂಡ ನಿರ್ವಹಣಗಾರರಿಗೆ ಕೊಡುವುದುಂಟು. ಇದನ್ನೆಲ್ಲ ನೋಡಿದರೆ ಖಾಸಗೀ ರಂಗದ ವೇತನವು ಇತ್ತೀಚಿನ ದಿನಗಳಲ್ಲಿ ಬೇರೆ ರಂಗಕ್ಕಿಂತ ತುಂಬಾ ಆಕರ್ಷಣೀಯವಾಗಿವೆ ಅಲ್ಲದೆ ಬಹಳ ಗೌರವ ಪ್ರಧಾನವು ಆಗಿವೆ.

ಅನೇಕ ವಿದ್ಯಾರ್ಥಿಗಳು ಒಳ್ಳೆಯ ಪ್ರಖ್ಯಾತ ಸಂಸ್ಥೆಗಳಲ್ಲಿ ಉನ್ನತ ಹುದ್ದೆಗೆ ಹೋಗುವ ಹಂಬಲ ಹೊತ್ತು ಕಾತರರಾಗಿರುತ್ತಾರೆ. ಈ ಹುದ್ದೆಗಳಿಗೆ ಇರಬೇಕಾದ ಅರ್ಹತೆ, ಪಠ್ಯಕ್ರಮ ಹಾಗೂ ವಿಧಾನಗಳ ಸರಿಯಾದ ಮಾಹಿತಿ ಮತ್ತು ಮಾರ್ಗದರ್ಶನವಿಲ್ಲದೆ ಈ ಆಸೆ ಕನಸಾಗಿಯೇ ಉಳಿಯುವ ಸಂಭವ ಹೆಚ್ಚು.

### ಮ್ಯಾನೇಜ್‌ಮೆಂಟ್ ವಿದ್ಯಾಭ್ಯಾಸ

ಈ ಓದು ಅನೇಕ ವಿಷಯಗಳನ್ನುಳ್ಳದ್ದಾಗಿದೆ. ವಿದ್ಯಾರ್ಥಿಗಳು ತಮಗೆ ಇಷ್ಟವಾದ ವಿಷಯದಲ್ಲಿ ಪರಿಣತಿ ಪಡೆಯಬಹುದು. ಮುಖ್ಯವಾದ ವಿಷಯಗಳೆಂದರೆ :

ಹಣಕಾಸಿನ ನಿರ್ವಹಣೆ (Finance Management)

ಉತ್ಪಾದನಾ ನಿರ್ವಹಣೆ (Production Management)

ಸರಕು ಸಾಮಾಗ್ರಿ ನಿರ್ವಹಣೆ (Materials Management)

ಸಿಬ್ಬಂದಿ ನಿರ್ವಹಣೆ (Personnel Management)

ಮಾನವ ಸಂಪನ್ಮೂಲ ನಿರ್ವಹಣೆ (H.R. Management)

ನಿರ್ವಹಣಾ ಮಾಹಿತಿ ವ್ಯೂಹ ನಿರ್ವಹಣೆ (M.S. Management)

ಸಂಸ್ಥಾ ನಿರ್ವಹಣೆ (Corporate Management)

ಸಂಶೋಧನ ಹಾಗೂ ಅಭಿವೃದ್ಧಿ ನಿರ್ವಹಣೆ (R&D Management)

ಮಾರುಕಟ್ಟೆ ನಿರ್ವಹಣೆ (Marketing Management)

ಸಾಮಾನ್ಯ ನಿರ್ವಹಣೆ (General Management)

ಮಾರುಕಟ್ಟೆ ನಿರ್ವಹಣೆಯಲ್ಲಿ ಅನೇಕ ಉಪಭಾಗಗಳಿವೆ. ಅವುಗಳಲ್ಲಿ ಮುಖ್ಯವಾದುವುಗಳೆಂದರೆ ಅಂತಾರಾಷ್ಟ್ರೀಯ ಮಾರುಕಟ್ಟೆ ನಿರ್ವಹಣೆ, ಗ್ರಾಮೀಣ ಮಾರುಕಟ್ಟೆ ನಿರ್ವಹಣೆ, ಜಾಹೀರಾತು ನಿರ್ವಹಣೆ ಮುಂತಾದವುಗಳು.

ಮೇಲಿನ ವಿಷಯಗಳಲ್ಲಿ ಅನೇಕ ವಿದ್ಯಾ

# ಮಹಾದೇವಪ್ಪ ಆವಿನ

ಪ್ರಸ್ತುತ ಬೆಂಗಳೂರಿನಲ್ಲಿರುವ ಆಂಧ್ರ ಬ್ಯಾಂಕ್ ವಲಯ ಕಚೇರಿಯಲ್ಲಿ ಹಿರಿಯ ವ್ಯವಸ್ಥಾಪಕರಾಗಿರುವ ಮಹಾದೇವಪ್ಪನವರ ಸ್ವಂತ ಗ್ರಾಮ ದಾವಣಗೆರೆ ಜಿಲ್ಲೆ ಹರಪನಹಳ್ಳಿ ತಾಲೂಕಿನ ಕಡಬಗೆರೆ. ಅವರು ತಮ್ಮ ಪ್ರಾಥಮಿಕ ವಿದ್ಯಾಭ್ಯಾಸ ಪೂರೈಸಿದ್ದು ಕಡಬಗೆರೆಯಲ್ಲಿಯೇ. ಹುಬ್ಬಳ್ಳಿಯ ಬಾಸೆಲ್ ಮಿಷನ್ ಹೈಸ್ಕೂಲು, ಹಾವೇರಿಯ ಗುದ್ದೆಪ್ಪ ಹಳ್ಳಿಕೇರಿ ಕಾಲೇಜು, ಹುಬ್ಬಳ್ಳಿಯ ಜಾಬೀನ್ ಕಾಲೇಜು ಮುಂತಾದೆಡೆ ತಮ್ಮ ವಿದ್ಯಾಭ್ಯಾಸ ಮುಂದುವರಿಸಿದ ಅವರು ಕರ್ನಾಟಕ ವಿ.ವಿ.ಯಿಂದ ಬಿ.ಎಸ್ಸಿ. ಹಾಗೂ ಬಿ.ಲಿಬ್ ಪದವಿ ಪಡೆದಿದ್ದಾರೆ. ತರುವಾಯ ಬೆಂಗಳೂರಿನ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್‌ನಲ್ಲಿ ಸ್ನಾತಕೋತ್ತರ ಪದವಿ (ಪಿ.ಜಿ.ಡಿ.ಎಂ.) ಪಡೆದಿದ್ದಾರೆ.

ಭಾರತೀಯ ಸ್ಟೇಟ್‌ಬ್ಯಾಂಕ್‌ನಲ್ಲಿ ಕ್ಯಾಷಿಯರ್ ಆಗಿ ತಮ್ಮ ವೃತ್ತಿ ಬದುಕು ಆರಂಭಿಸಿದ ಮಹಾದೇವಪ್ಪನವರು ಪದವಿ ನಂತರ ನಿರುದ್ಯೋಗಿಯಾಗಿದ್ದ ಅವಧಿ ಕೇವಲ ಒಂದು ದಿನ ಮಾತ್ರ! ಮುಂದೆ ವಾಯುಪಡೆ ತಾಂತ್ರಿಕ ಕಾಲೇಜಿನಲ್ಲಿ ಹಾಗೂ ಐ.ಐ.ಎಂ.ನಲ್ಲಿ ಗ್ರಂಥಪಾಲಕರಾಗಿ ಸೇವೆ ಸಲ್ಲಿಸಿದ ಅನುಭವವೂ ಅವರಿಗಿದೆ. ನಲವತ್ತೆಂಟು ವರ್ಷ ವಯಸ್ಸಿನ ಇವರು ಕ್ರಿಯಾಶೀಲ ಅಧಿಕಾರಿ. ಕಳೆದ ೧೯ ವರ್ಷಗಳಿಂದ ಆಂಧ್ರ ಬ್ಯಾಂಕ್‌ನಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಗ್ರಾಮೀಣ ಹಿನ್ನೆಲೆಯ ಸಾಮಾನ್ಯ ಕೃಷಿಕ ಕುಟುಂಬದಿಂದ ಬಂದ ಮಹಾದೇವಪ್ಪನವರು ಸ್ವಂತ ಪರಿಶ್ರಮದಿಂದ ತಮ್ಮ ಬದುಕು ರೂಪಿಸಿಕೊಂಡ ಅಪರೂಪದ ವ್ಯಕ್ತಿ. ಸರಳ ಸಜ್ಜನಿಕೆಯ ಈ ವ್ಯಕ್ತಿ ಹಳ್ಳಿಗಾಡಿನ ಜನರ ಬಗ್ಗೆ ಅಪಾರ ಕಳಕಳಿ ಹೊಂದಿದ್ದಾರೆ.

ಇವರ ಮಡದಿ ಉಷಾದೇವಿಯವರು ಬೆಂಗಳೂರಿನ ಸರ್ಕಾರಿ ಬಾಲಕಿಯರ ಶಾಲೆಯಲ್ಲಿ ಶಿಕ್ಷಕಿಯಾಗಿದ್ದಾರೆ. ಈ ದಂಪತಿಗೆ ವಿನಯ್ (೧೫) ಹಾಗೂ ವಿಕ್ರಮ್ (೧೦) ಎಂಬ ಇಬ್ಬರು ಮಕ್ಕಳಿದ್ದಾರೆ.

**ಮಹಾದೇವಪ್ಪ ಆವಿನ**
ಹಿರಿಯ ವ್ಯವಸ್ಥಾಪಕರು
(ಕ್ರೆಡಿಟ್ ಕಾರ್ಡ್ ವಿಭಾಗ)
ಆಂಧ್ರ ಬ್ಯಾಂಕ್ ವಲಯ ಕಚೇರಿ
೬೬/೧, ಜೆ.ಸಿ. ರಸ್ತೆ, ಬೆಂಗಳೂರು - ೫೬೦ ೦೦೨

ಸಂಸ್ಥೆಗಳು ಶಿಕ್ಷಣ ಹಾಗೂ ತರಬೇತಿ ನೀಡುತ್ತವೆ. ಅಲ್ಲದೆ, ಬೇರೆ ಬೇರೆ ಹಂತಗಳ ವರೆಗೆ ಸಹ ಶಿಕ್ಷಣ ದೊರೆಯುತ್ತದೆ.

ಅಲ್ಪಕಾಲದ Certificate Course
Diplome course
Graduation Course
Post Graduation Course
P.hd Course

ಅಲ್ಪಕಾಲದ ಸರ್ಟಿಫಿಕೇಟು Courseಗಳು ಹಾಗೂ ಮಧ್ಯ ಕಾಲದ ಡಿಪ್ಲೊಮಾ ಕೋರ್ಸುಗಳು ಅನೇಕ ಸಂಘ ಸಂಸ್ಥೆಗಳು ಹಾಗೂ ಖಾಸಗಿ ಶಿಕ್ಷಣ ಸಂಸ್ಥೆಗಳು ನೀಡುತ್ತವೆ. ಪದವಿ ಶಿಕ್ಷಣ (BBM)ವನ್ನು ಅನೇಕ ಮಹಾವಿದ್ಯಾಲಯಗಳು (Colleges) ನೀಡುತ್ತಲಿವೆ. ಸ್ನಾತಕೋತ್ತರ ಪದವಿ ಹಾಗೂ ಶಿಕ್ಷಣವನ್ನು ಮುಖ್ಯವಾಗಿ ಎಲ್ಲಾ ವಿಶ್ವವಿದ್ಯಾಲಯಗಳೂ, ರಾಷ್ಟ್ರಮಟ್ಟದಲ್ಲಿ ಪ್ರಖ್ಯಾತ ವಿದ್ಯಾಸಂಸ್ಥೆಗಳಾದ

Indian Institutes of Managements
Indian Institute of Technologies
Indian Institute of Science
Bajaj Institute of Management
Xevier Labour Research Institute (XLRI)

ಮುಂತಾದವುಗಳು ನೀಡುತ್ತಲಿವೆ.

ಈ ರಂಗದಲ್ಲಿ ಶಿಕ್ಷಣ ನೀಡುವ ವಿದ್ಯಾಸಂಸ್ಥೆಗಳಲ್ಲಿ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್‌ಗಳ ಪಾತ್ರ ಬಹು ಮುಖ್ಯ. ಅವುಗಳಲ್ಲಿ ಕೊಡುವ ಶಿಕ್ಷಣವು ದೇಶ ವಿದೇಶಗಳಲ್ಲಿ ಹೆಸರುವಾಸಿಯಾಗಿದೆ. ಈ ಸಂಸ್ಥೆಗಳಲ್ಲಿ ಶಿಕ್ಷಣ ಪಡೆದ ವಿದ್ಯಾರ್ಥಿಗಳಿಗೆ ಕೈಗಾರಿಕೆ ಹಾಗೂ ವ್ಯವಹಾರಿಕಾ ರಂಗದಲ್ಲಿ



ತುಂಬಾ ಬೇಡಿಕೆ ಇದೆ. ಭಾರಿ ಮೊತ್ತದ ವೇತನ ನೀಡಿ ವಿದ್ಯಾರ್ಥಿಗಳನ್ನು ಅವರ ವಿದ್ಯಾಭ್ಯಾಸ ಮುಗಿಯುವ ಮೊದಲೆ ನೌಕರಿಗೆ ಭರ್ತಿ ಮಾಡಲ್ಪಡುತ್ತಾರೆ.

**ಮುಂದಿನ ಸಂಚಿಕೆ ನಿರೀಕ್ಷಿಸಿ**

**ಜೀವನದಲ್ಲಿ ತುಂಬಾ ಮುಂದೆ ಬರಬೇಕೆಂಬ ಹಂಬಲ ಹೊತ್ತಿರುವ ವಿದ್ಯಾರ್ಥಿಗಳಿಗೆ ಇಂತಹ ಸಂಸ್ಥೆಗಳಲ್ಲಿ ಅಧ್ಯಯನ ಮಾಡುವುದು ಒಂದು ಸದಾವಕಾಶ. ಈ ಸಂಸ್ಥೆಗಳಲ್ಲಿ ಸ್ಥಳಾವಕಾಶ ದೊರಕಿಸಿಕೊಳ್ಳಲು ಯಾವ ತರಹದ ಸಿದ್ಧತೆ ಬೇಕು, ಅದಕ್ಕೆ ಬೇಕಾಗುವ ಅರ್ಹತೆಗಳು, ಎಲ್ಲೆಲ್ಲಿ ಅವಕಾಶಗಳಿವೆ, ಅದಕ್ಕೆ ತಗಲಬಹುದಾದ ಅಂದಾಜು ವೆಚ್ಚ, ಅಲ್ಲಿ ಕಲಿಯಬಹುದಾದ ವಿಷಯಾಂಶಗಳ ಬಗ್ಗೆ ಪೂರ್ಣ ವಿವರಗಳನ್ನು ಮುಂದಿನ ಸಂಚಿಕೆಯಲ್ಲಿ ತಿಳಿಸಲಾಗುವುದು.**

## ತುಮಕೂರಿನಲ್ಲಿ ಎಂ.ಬಿ.ಎ. ಕೋರ್ಸು

ತುಮಕೂರಿನ ಸಿದ್ಧಾರ್ಥ ಶಿಕ್ಷಣ ಸಂಸ್ಥೆಯು ಎಂಬಿಎ ಪದವಿಗೆ ಅರ್ಜಿಗಳನ್ನು ಆಹ್ವಾನಿಸಿದೆ. ಅಭ್ಯರ್ಥಿಗಳು ಯಾವುದೇ ವಿಶ್ವವಿದ್ಯಾಲಯದ ಪದವಿ/ಸ್ನಾತಕೋತ್ತರ ಪದವಿಯಲ್ಲಿ ಕನಿಷ್ಠ ಶೇ. ೫೦ ಅಂಕ ಪಡೆದಿರಬೇಕು. (ಎಸ್‌ಸಿ, ಎಸ್‌ಟಿ ವಿದ್ಯಾರ್ಥಿಗಳು ಶೇ. ೪೫ರಷ್ಟು ಅಂಕ ಗಳಿಸಿರಬೇಕು) ಅರ್ಜಿ ಸಲ್ಲಿಸಲು ಕಡೆಯ ದಿ. ೨೫.೧೦.೯೭ ಆಸಕ್ತರು ಅರ್ಜಿ ಹಾಗೂ ಪ್ರಾಸ್ಪೆಕ್ಟಸ್ ಶುಲ್ಕ ೩೦೦ ರೂ.ಗಳನ್ನು Drawn in favour of Sri Siddartha Institute of Management Studies, payable at Tumkur ಹೆಸರಿಗೆ ಡಿ.ಡಿ. ಪಡೆದು, Speical Officer, Sri Siddartha Institute of Management Studies, SSIT Campus, Tumkur-572 105 ಇಲ್ಲಿಗೆ ಕಳುಹಿಸಬೇಕು.

# ಮೈಸೂರು ಮುಕ್ತ ವಿ.ವಿ.ದಲ್ಲಿ ಎಂ.ಬಿ.ಎ

ಮೈಸೂರಿನಲ್ಲಿರುವ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯವು ಎಂಬಿಎ ಕನ್ನಡ, ಇಂಗ್ಲೀಷ್, ಸಮಾಜ ಶಾಸ್ತ್ರ, ಇತಿಹಾಸ ವಿಷಯಗಳ ಎಂ.ಫಿಲ್ ಪದವಿಗೆ ಅರ್ಜಿ ಆಹ್ವಾನಿಸಿದೆ.

* ಎಂಬಿಎ ಪದವಿಗೆ ಅರ್ಜಿ ಸಲ್ಲಿಸುವವರು ಪದವಿ ಅಥವಾ ಸ್ನಾತಕೋತ್ತರ ಪದವಿಯಲ್ಲಿ ಕನಿಷ್ಟ ಶೇ. ೫೦ರಷ್ಟು ಅಂಕ ಪಡೆದಿರಬೇಕು. ಶೇ. ೫೦ಕ್ಕಿಂತ ಕಡಿಮೆ ಅಂಕವುಳ್ಳವರು ಆಡಳಿತ, ವ್ಯವಸ್ಥಾಪಕತ್ವದ ನಿರ್ವಹಣೆಯಲ್ಲಿ ಕನಿಷ್ಟ ಮೂರು ವರ್ಷ ಅನುಭವ ಪಡೆದಿರಬೇಕು. ಅರ್ಹರು ಅ. ೨೦ರೊಳಗೆ ಅರ್ಜಿ ಸಲ್ಲಿಸಬಹುದು. ನ. ೧೬ರಕ್ಕೆ ಇದರ ಪ್ರವೇಶ ಪರೀಕ್ಷೆ ನಡೆಯುತ್ತದೆ. ಪ್ರಾಸ್ಪೆಕ್ಟಸ್ ಶುಲ್ಕ ೩೦೦ ರೂ.

* ಶಿಕ್ಷಣದ ವಿಷಯದ ಎಂಫಿಲ್ ಪದವಿ ಮಾಡಲು ಬಯಸುವವರು ಶಿಕ್ಷಣ ವಿಷಯದ ಸ್ನಾತಕೋತ್ತರ ಪದವಿಯಲ್ಲಿ ಶೇ. ೫೫ರಷ್ಟು ಅಂಕ ಗಳಿಸಿರಬೇಕು. ಅಥವಾ ಶೇ. ೫೦ರಷ್ಟು ಅಂಕಗಳೊಂದಿಗೆ ಮೂರು ವರ್ಷ ಅನುಭವ ಪಡೆದಿರಬೇಕು. ಅಥವಾ ಶಿಕ್ಷಣಕ್ಕೆ ಸಂಬಂಧಿಸಿದ ಯಾವುದಾದರೂ ವಿಷಯದಲ್ಲಿ ಶೇ. ೫೫ರಷ್ಟು ಅಂಕ ಪಡೆದು ಐದು ವರ್ಷಗಳ ಅನುಭವ ಪಡೆದಿರಬೇಕು.

ಈ ಪದವಿಯ ಪ್ರವೇಶಕ್ಕೆ ಯಾವುದೇ ಪರೀಕ್ಷೆ ಇರುವುದಿಲ್ಲ. ಅರ್ಜಿ ಸಲ್ಲಿಸಲು ಕಡೆಯ ದಿನಾಂಕ ಅ. ೩೧. ಪ್ರಾಸ್ಪೆಕ್ಟಸ್ ಶುಲ್ಕ ೨೦೦ ರೂ.

* ಕನ್ನಡ, ಇಂಗ್ಲೀಷ್, ಸಮಾಜ ಶಾಸ್ತ್ರ ಇತಿಹಾಸದಲ್ಲಿ ಎಂಫಿಲ್ ಪಡೆಯುವವರು ಆಯಾ ವಿಷಯದ ಸ್ನಾತಕೋತ್ತರ ಪದವಿಯಲ್ಲಿ ಶೇ. ೫೦ರಷ್ಟು ಅಂಕ ಗಳಿಸಿರಬೇಕು. ಈ ಪದವಿಗೆ ಯಾವುದೇ ಪ್ರವೇಶ ಪರೀಕ್ಷೆ ಇರುವುದಿಲ್ಲ. ಅರ್ಜಿ ಸಲ್ಲಿಸಲು ಕಡೆಯ ದಿನಾಂಕ ನ. ೨೫. ಪ್ರಾಸ್ಪೆಕ್ಟಸ್ ಶುಲ್ಕ ೨೦೦ ರೂ.

ಪ್ರವೇಶ ಬಯಸುವವರು ಪ್ರಾಸ್ಪೆಕ್ಟಸ್‌ಗಾಗಿ ಈ ಮೇಲೆ ನಮೂದಿಸಿದ ವೆಚ್ಚದಲ್ಲಿ Karnataka state open University Account, Manasagangotri, Mysore - 570 006 ಈ ಹೆಸರಿಗೆ ಡಿಡಿ ಪಡೆದು ಕಳುಹಿಸಬೇಕು.

# ಎಂ.ಬಿ.ಎ. ಕೋರ್ಸಿಗೆ ಅರ್ಜಿ ಹಾಕಿ

ದೆಹಲಿ ವಿಶ್ವವಿದ್ಯಾಲಯದ ಫೇಕಲ್ಟಿ ಆಫ್ ಮ್ಯಾನೇಜ್‌ಮೆಂಟ್ ಸಂಸ್ಥೆಯು ಎರಡು ವರ್ಷದ (ಪೂರ್ಣಾವಧಿಯ) ಎಂಬಿಎ ಕೋರ್ಸ್ ಪ್ರವೇಶಕ್ಕೆ ಅರ್ಜಿಗಳನ್ನು ಆಹ್ವಾನಿಸಿದೆ.

ಕಲೆ/ವಾಣಿಜ್ಯ/ಸಮಾಜವಿಜ್ಞಾನ ಪದವಿಯಲ್ಲಿ ಶೇ. ೫೦ ಅಂಕ ಅಥವಾ ವಿಜ್ಞಾನ ಪದವಿಯಲ್ಲಿ ಶೇ. ೫೫ ಅಂಕ ಅಥವಾ ಗಣಿತ/ಸಂಖ್ಯಾಶಾಸ್ತ್ರ/ಔಷಧ ಶಾಸ್ತ್ರ/ಎಂಜಿನಿಯರಿಂಗ್ ಪದವಿಯಲ್ಲಿ ಶೇ. ೬೦ರಷ್ಟು ಅಂಕ ಪಡೆದು, ೨೦ ವರ್ಷ ತುಂಬಿದವರು ಅರ್ಜಿ ಹಾಕಬಹುದಾಗಿದೆ.

೧೯೯೮ರ ಜೂನ್ ೧೫ರೊಳಗೆ ಪದವಿ ಪಡೆದು ಬರುವ ಸೆಪ್ಟೆಂಬರ್ ತಿಂಗಳಲ್ಲಿ ಪದವಿಯ ಅಂಕಪಟ್ಟಿ ಒದಗಿಸಲು ಸಾಧ್ಯವಿರುವವರೂ ಸಹ ಈ ಕೋರ್ಸಿಗೆ ಅರ್ಜಿ ಸಲ್ಲಿಸಬಹುದು.

ಈ ಕೋರ್ಸಿನ ಪ್ರವೇಶ ಅರ್ಜಿಗಳು ಅ. ೧೩ರಿಂದ ನ. ೨೬ರವರೆಗೆ ಬೆಂಗಳೂರಿನ ಸೇಂಟ್ ಮಾರ್ಕ್ಸ್ ರಸ್ತೆಯ ಭಾರತೀಯ ಸ್ಟೇಟ್ ಬ್ಯಾಂಕಿನಲ್ಲಿ (ಎಸ್‌ಬಿಐ) ಸಿಗುತ್ತವೆ. ಅರ್ಜಿ ಶುಲ್ಕ ೫೦೦ ರೂ.

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರು ಈ ಕೆಳಕಂಡ ವಿಳಾಸಕ್ಕೆ ೧೫೫ ರೂ.ಗಳ ಡಿ.ಡಿ. ಕಳುಹಿಸಿ ಅರ್ಜಿ ತರಿಸಿಕೊಳ್ಳಬಹುದು. To the Administrative Officer, Faculty of Management studies, University of Delhi, Delhi-110 007. ಡಿ.ಡಿ.ಯನ್ನು "Registrar University of Delhi" drawn in favour of State Bank of India, Delhi University Branch (Code No. 1067) ಎಂದು ಪಡೆಯಬೇಕು.

ಕೋರ್ಸ್‌ನ ಪ್ರವೇಶ ಪರೀಕ್ಷೆಯು ೧೯೯೮ನೇ ಜನವರಿ ೧೧ರ ಭಾನುವಾರ ಎರಡು ಗಂಟೆಗೆ ಬೆಂಗಳೂರು, ಚನ್ನೈ, ಹೈದರಾಬಾದ್ ಮುಂತಾದೆಡೆ ನಡೆಯಲಿದೆ.

# ಕಾನೂನು ತರಬೇತಿ

ಬೆಂಗಳೂರು ಗ್ರಾಮಾಂತರ ಜಿಲ್ಲಾ ವ್ಯಾಪ್ತಿಯಲ್ಲಿನ ಕಾನೂನು ಪದವಿ ಪಡೆದಿರುವ ೩೫ ವರ್ಷದೊಳಗಿನ ಮಹಿಳೆಯರಿಗೆ ಕಾನೂನು ಆಡಳಿತದಲ್ಲಿ ತರಬೇತಿಗಾಗಿ ಆರ್ಥಿಕ ಸಹಾಯಧನ ಪಡೆಯಲು ಅರ್ಜಿ ಆಹ್ವಾನಿಸಲಾಗಿದೆ. ಅರ್ಜಿದಾರರ ವಾರ್ಷಿಕ ವರಮಾನ ರೂ. ೪೦ ಸಾವಿರಕ್ಕಿಂತ ಕಡಿಮೆಯಿರಬೇಕು. ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೊಂದಾಯಿಸಿರಬೇಕು.

ತರಬೇತಿಯ ಅವಧಿಯಲ್ಲಿ ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್ ಅಥವಾ ಎರಡು ವರ್ಷ ವಕೀಲಿ ವೃತ್ತಿಯಲ್ಲಿ ಅನುಭವ ಇರುವ ವಕೀಲರ ಅಧೀನದಲ್ಲಿ ತರಬೇತಿ ಪಡೆಯಬೇಕು. ಆಯ್ಕೆಯಾದ ಅಭ್ಯರ್ಥಿಗೆ ತಿಂಗಳಿಗೆ ರೂ. ೭೫೦ ಆರ್ಥಿಕ ಧನಸಹಾಯವನ್ನು ನಾಲ್ಕು ವರ್ಷಗಳವರೆಗೆ ನೀಡಲಾಗುತ್ತದೆ. ಹೆಚ್ಚಿನ ವಿವರಗಳಿಗೆ ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕುಬೇರಾ ಮ್ಯಾನಷನ್, ವಿಶ್ವೇಶ್ವರಪುರ, ಬೆಂಗಳೂರು - ೪ ಇವರನ್ನು ಸಂಪರ್ಕಿಸಲು ಪ್ರಕಟಣೆ ತಿಳಿಸಿದೆ.

# ನಿಮ್ಮ ಸಾಮಾನ್ಯ ಜ್ಞಾನ ವೃದ್ಧಿಸಿಕೊಳ್ಳಿ !



೧. ಮ್ಯಾಗ್ಸೇಸ್ಸೆ ಪ್ರಶಸ್ತಿ ಪಡೆದ ಭಾರತದ ಖ್ಯಾತ ವ್ಯಂಗ್ಯ ಚಿತ್ರಕಾರನ ಹೆಸರೇನು?
೨. ಭಾರತ ಭೂಸೇನಾ ಪಡೆಯ ಮುಖ್ಯಸ್ಥರಾಗಿ ನೇಮಕಗೊಂಡವರು ಯಾರು?
೩. ಲಕ್ಷದ್ವೀಪದಲ್ಲಿರುವ ದ್ವೀಪಗಳ ಸಂಖ್ಯೆ ಎಷ್ಟು?
೪. ಅಮೇರಿಕಾ ದೇಶದ ಅಧ್ಯಕ್ಷರ ಗರಿಷ್ಠ ಅವಧಿ ಎಷ್ಟು?
೫. ಭಾರತ-ಶ್ರೀಲಂಕಾ ದೇಶಗಳ ಮಧ್ಯ ಇರುವ ಜಲಸಂಧಿ ಹೆಸರೇನು?
೬. ಭಾರತ ದೇಶದಲ್ಲಿ ಅಂತಾರಾಷ್ಟ್ರೀಯ ಭೂಸರಹದ್ದು ಹೊಂದಿದ ರಾಜ್ಯಗಳ ಸಂಖ್ಯೆ ಎಷ್ಟು?
೭. ನಮ್ಮ ದೇಶದಲ್ಲಿ ಕಡಿಮೆ ತೀರ ಪ್ರದೇಶ ಹೊಂದಿದ ರಾಜ್ಯ ಯಾವುದು?
೮. ಅತಿ ಹೆಚ್ಚು ತೀರ ಪ್ರದೇಶ ಹೊಂದಿದ ರಾಜ್ಯ ಯಾವುದು?
೯. ಭಾರತ ಪಾಕಿಸ್ತಾನ ದೇಶಗಳ ಮಧ್ಯೆ ಇರುವ ಸರಹದ್ದು ರೇಖೆ ಯಾವುದು?
೧೦. ಭಾರತ ಚೀನಾ ಮಧ್ಯೆ ಸರಹದ್ದು ರೇಖೆಯ ಹೆಸರೇನು?
೧೧. ಪೆಟ್ರೋಲಿಯಂ ರಿಸರ್ಚ್ ಇನ್‌ಸ್ಟಿಟ್ಯೂಟ್ ಎಲ್ಲಿದೆ?
೧೨. ಪ್ರಸ್ತುತ ಮಾನವ ಹಕ್ಕುಗಳ ಆಯೋಗದ ಅಧ್ಯಕ್ಷರು ಯಾರು?
೧೩. ಹಿಮಾಚಲ ಪ್ರದೇಶದ ನೂತನ ರಾಜ್ಯಪಾಲರು ಯಾರು?
೧೪. 'ಡೆತ್ ಆಫ್ ಎ ಸಿಟಿ' ಈ ಕೃತಿ ಯಾರದು?
೧೫. ಹಜಾರಿಬಾಗ್ ನ್ಯಾಷನಲ್ ಪಾರ್ಕ್ ಎಲ್ಲಿದೆ?
೧೬. ದೇಶದಲ್ಲಿ ವಿಶೇಷ ಸ್ಥಾನಮಾನ ಹೊಂದಿದ ಏಕೈಕ ರಾಜ್ಯ ಯಾವುದು?
೧೭. ಜಗತ್ತಿನಲ್ಲಿ ಅತಿ ಪುಟ್ಟ ಸಂವಿಧಾನ ಹೊಂದಿದ ದೇಶ ಯಾವುದು?
೧೮. ಇಂಗ್ಲೆಂಡ್ ದೇಶದ ಸಂವಿಧಾನ ಲಿಖಿತವೋ, ಅಲಿಖಿತವೋ?
೧೯. ಎರಡು ರಾಜಧಾನಿಗಳನ್ನು ಹೊಂದಿದ ರಾಜ್ಯ ಯಾವುದು?
೨೦. ಗ್ರಾಮ ಸ್ವರಾಜ್ಯಕ್ಕಾಗಿ ಹೋರಾಡಿದವರು ಯಾರು?
೨೧. ಗೋವಾ ರಾಜ್ಯವನ್ನು ಪೋರ್ಚುಗೀಸರಿಂದ ಯಾವಾಗ ವಶಪಡಿಸಿಕೊಳ್ಳಲಾಯಿತು?
೨೨. ತೆರಿಗೆ ವಿಧಿಸುವ ವಿಧಾನದ ಬಗ್ಗೆ ವರದಿ ನೀಡಲು ನೇಮಕಗೊಂಡಿದ್ದ ಸಮಿತಿ ಯಾವುದು?
೨೩. ಪ್ರಕಾಶಮಾನವಾಗಿ ಹೊಳೆಯುವ ಗ್ರಹ ಯಾವುದು?
೨೪. ಸೌರವ್ಯೂಹದ ಅತಿ ಚಿಕ್ಕ ಗ್ರಹ ಯಾವುದು?
೨೫. ಭೂಮಿಯು ಯಾವ ದಿಕ್ಕಿನಿಂದ ಯಾವ ದಿಕ್ಕಿಗೆ ತಿರುಗುತ್ತದೆ?
೨೬. ಗ್ರೀನ್‌ವಿಚ್ (ಸಮಮಧ್ಯರೇಖೆ ೧೮೦) ಯಾವ ದೇಶದಲ್ಲಿ ಹಾದುಹೋಗಿದೆ?
೨೭. ಕರ್ನಾಟಕದ ಆಲಮಟ್ಟಿ ಆಣೆಕಟ್ಟನ್ನು ಯಾವ ನದಿಗೆ ಕಟ್ಟಲಾಗಿದೆ?
೨೮. ಭೂಕಂಪ ಮಾಪನ ಉಪಕರಣದ ಹೆಸರೇನು?
೨೯. ಭಾರತದ ಅತಿ ದೊಡ್ಡ ನದಿ ಯಾವುದು?
೩೦. ದೇಶದಲ್ಲಿ ಅತಿ ಹೆಚ್ಚು ಯುರೇನಿಯಂ ದೊರೆಯುವ ಸ್ಥಳ ಯಾವುದು?
೩೧. ತಾರಾಪುರ ಅಣುಶಕ್ತಿ ಕಾರ್ಖಾನೆ ಎಲ್ಲಿದೆ?
೩೨. ಒಂದು ರೂಪಾಯಿ ನೋಟಿಗೆ ಯಾರು ಸಹಿ ಮಾಡಿರುತ್ತಾರೆ?
೩೩. ಗಾಂಧಿ ಅಂತಾರಾಷ್ಟ್ರೀಯ ಶಾಂತಿ ಪ್ರಶಸ್ತಿ ಮೊದಲ ಬಾರಿ ಪಡೆದವರು ಯಾರು?
೩೪. ಕಳಿಂಗ ಪ್ರಶಸ್ತಿ ಯಾವ ರಾಜ್ಯಕ್ಕೆ ಸೇರಿದ್ದು?
೩೫. ಮೊದಲ ಬಾರಿ ಭಾರತ ರತ್ನ ಪ್ರಶಸ್ತಿ ಪಡೆದವರು ಯಾರು?
೩೬. ಭೂಮಿಯ ಮೇಲ್ಮೈಯಿಂದ ೪೦೦ ಕಿ.ಮೀ. ದೂರದ ವಾತಾವರಣಕ್ಕೆ ಏನೆಂದು ಕರೆಯುತ್ತಾರೆ?
೩೭. ಪ್ರಪಂಚದಲ್ಲಿಯೇ ಕಡಿಮೆ ಜನಸಂಖ್ಯೆ ಇರುವ ದೇಶ ಯಾವುದು?
೩೮. ಕಡಿಮೆ ಜನಸಂಖ್ಯೆ ಹೊಂದಿದ ದೇಶದ ಏಕೈಕ ರಾಜ್ಯ ಯಾವುದು?
೩೯. ಅತ್ಯಧಿಕ ಸಾಕ್ಷರತೆಯುಳ್ಳ ರಾಜ್ಯ ಯಾವುದು?
೪೦. ಅತ್ಯಂತ ಕಡಿಮೆ ಸಾಕ್ಷರತಾ ರಾಜ್ಯ ಯಾವುದು?
೪೧. ಯೋಜನಾ ಆಯೋಗದ ಪ್ರಥಮ ಅಧ್ಯಕ್ಷರು ಯಾರು?
೪೨. ಸ್ವಾತಂತ್ರ್ಯೋತ್ತರ ಭಾರತದ ಪ್ರಥಮ ಚುನಾವಣೆ ನಡೆದದ್ದು ಯಾವಾಗ?
೪೩. ಮಣಿಪುರ ರಾಜ್ಯದ ರಾಜಧಾನಿ ಯಾವುದು?
೪೪. ಎರಡು ರಾಜ್ಯಗಳಿಗೆ ಒಂದೇ ರಾಜಧಾನಿ ಯಾವುದು?
೪೫. ಭಾರತದ ಏಕೈಕ ವಜ್ರದ ಗಣಿ ಎಲ್ಲಿದೆ?
೪೬. ಭಾರತ ಸಾಂಬಾರು ಮಂಡಳಿ ಯಾವ ನಗರದಲ್ಲಿದೆ?
೪೭. ದೇಶದ ಭೂ ಸರಹದ್ದು ಉದ್ದ ಎಷ್ಟು?
೪೮. ಪ್ರಪಂಚ ವೈಶಾಲ್ಯತೆಯಲ್ಲಿ ನಮ್ಮ ದೇಶದ ವೈಶಾಲ್ಯತೆ ಎಷ್ಟು?
೪೯. ಅಸ್ಪೃಶ್ಯತಾ ನಿರ್ಮೂಲನಾ ಕಾನೂನು ಯಾವಾಗ ಮಾಡಲಾಯಿತು?
೫೦. ದೇಶದಲ್ಲಿ ಕಮ್ಯುನಿಸ್ಟ್ ಸರ್ಕಾರ ಹೊಂದಿದ ಮೊದಲ ರಾಜ್ಯ ಯಾವುದು?

## ಉತ್ತರಗಳು :

೧. ಆರ್.ಕೆ. ಲಕ್ಷ್ಮಣ
೨. ವೇದ ಪ್ರಕಾಶ್ ಮಲ್ಲಿಕ್
೩. ೨೭
೪. ೪ ವರ್ಷ
೫. ಪಾಕ್ ಜಲಸಂಧಿ
೬. ೧೪
೭. ಗೋವಾ
೮. ಗುಜರಾತ್
೯. ರಾಡ್ ಕ್ಲಿಫ್
೧೦. ಮೆಕ್ ಮೋಹನ್ ರೇಖೆ
೧೧. ಡೆಹ್ರಾಡೂನ್
೧೨. ಎಂ.ಎನ್. ವೆಂಕಟಾಚಲಯ್ಯ
೧೩. ಬಿ.ಎಸ್. ರಮಾದೇವಿ
೧೪. ಅಮೃತ ಪ್ರೀತಂ
೧೫. ಬಿಹಾರ
೧೬. ಜಮ್ಮು ಮತ್ತು ಕಾಶ್ಮೀರ
೧೭. ಅಮೆರಿಕ
೧೮. ಅಲಿಕಿತ
೧೯. ಜಮ್ಮು ಮತ್ತು ಕಾಶ್ಮೀರ
೨೦. ಮಹಾತ್ಮಾ ಗಾಂಧೀಜಿ
೨೧. ೧೯೬೧
೨೨. ಚೆಲ್ಲಯ್ಯಾ ಸಮಿತಿ
೨೩. ಶುಕ್ರ
೨೪. ಬುಧ
೨೫. ಪಶ್ಚಿಮದಿಂದ ಪೂರ್ವಕ್ಕೆ
೨೬. ಇಂಗ್ಲಂಡ್
೨೭. ಕೃಷ್ಣ ನದಿ
೨೮. ರಿಕ್ಟರ್ ಸ್ಕೇಲ್
೨೯. ಗಂಗಾ ನದಿ
೩೦. ರೊಕ್ಕಿಲಾ
೩೧. ಬಾಂಬೆ
೩೨. ಹಣಕಾಸು ಕಾರ್ಯದರ್ಶಿ
೩೩. ಜೂಲಿಯಸ್ ನೈರೇರೆ
೩೪. ಓರಿಸ್ಸಾ
೩೫. ಡಾ. ಸರ್ವೆಪಲ್ಲಿ ರಾಧಾಕೃಷ್ಣನ್
೩೬. ಎಕ್ಸೊಸ್ಪಿಯರ್
೩೭. ವ್ಯಾಟಿಕನ್
೩೮. ಸಿಕ್ಕಿಂ
೩೯. ಕೇರಳ
೪೦. ಬಿಹಾರ
೪೧. ಗುಲ್ಜಾರಿಲಾಲ್ ನಂದಾ
೪೨. ೧೯೫೨
೪೩. ಇಂಫಾಲ್
೪೪. ಚಂಡಿಗಢ
೪೫. ಪನ್ನಾ (ಮಧ್ಯ ಪ್ರದೇಶ)
೪೬. ಕೊಚ್ಚಿನ್ (ಕೇರಳ)
೪೭. ೧೫,೨೦೦ ಕಿ.ಮೀ.
೪೮. ಶೇಕಡಾ ೨.೪
೪೯. ೧೯೫೫
೫೦. ಕೇರಳ

# ವಿದೇಶಿ ಶಿಕ್ಷಣದ ಸಿದ್ಧತೆ

○ ಡಾ. ಎಸ್.ಸಿ. ಶರ್ಮಾ

**ಪಾಸ್‌ಪೋರ್ಟ್ ಎಂದರೇನು?**
**ವೀಸಾ ಯಾರು ಕೊಡುತ್ತಾರೆ?**
**ಟೊಫೆಲ್ ಮಾಡುವುದು ಹೇಗೆ?**
**ಜಿ.ಆರ್.ಇ. ಪಾಸಾಗಲೇ ಬೇಕೆ?**

**ಬಿ.**ಇ. ಅಥವಾ ಯಾವುದೇ ಪದವಿಯ ನಂತರ ವಿದೇಶಗಳಲ್ಲಿ ಮುಖ್ಯವಾಗಿ ಅಮೇರಿಕ, ಯು.ಕೆ., ಆಸ್ಟ್ರೇಲಿಯಾ, ಜರ್ಮನಿ ಹಾಗೂ ಇನ್ನಿತರ ಯುರೋಪಿನ ರಾಷ್ಟ್ರಗಳಲ್ಲಿ ಉನ್ನತ ವ್ಯಾಸಂಗಕ್ಕೆ ಹಲವು ಅವಕಾಶಗಳಿವೆ. ಬಿ.ಇ. ಪದವೀಧರರು ಮಾಸ್ಟರ್ ಆಫ್ ಸೈನ್ಸ್ (ಎಂ.ಎಸ್) ಸ್ನಾತಕೋತ್ತರ ಪದವಿಗೆ ಸೇರಬಹುದು. ಇಲ್ಲಿ ಅವರು ತೆಗೆದುಕೊಳ್ಳುವ ಐಚ್ಛಿಕ ವಿಷಯ ಅವರ ಆಸಕ್ತಿ, ಕೆಲವು ಪ್ರವೇಶ ಪರೀಕ್ಷೆಗಳಲ್ಲಿ ಅವರು ಗಳಿಸುವ ಅಂಕಗಳ ಮೇಲೆ ಅವಲಂಬಿಸಿರುತ್ತದೆ. ಈಗ ಮುಖ್ಯವಾಗಿ ವಿದ್ಯಾರ್ಥಿಗಳು ಗಣಕ ಯಂತ್ರಕ್ಕೆ ಸಂಬಂಧಿಸಿದ ಕೋರ್ಸು ಗಳನ್ನು ತೆಗೆದುಕೊಳ್ಳಲು ಹೆಚ್ಚಿನ ಆಸಕ್ತಿ ವಹಿಸುವುದರಿಂದ ಸಹಜವಾಗಿ ಅವುಗಳಿಗೆ ಹೆಚ್ಚಿನ ಬೇಡಿಕೆ ಇದೆ. ಇದಲ್ಲದೆ ಮ್ಯಾನೇಜ್‌ಮೆಂಟ್‌ಗೆ ಸಂಬಂಧಿಸಿದ ಎಂಬಿಎ ಅಂತಹ ಕೋರ್ಸುಗಳಿಗೂ ಕೂಡ ಉತ್ತಮವಾದ ಬೆಲೆಯಿದ್ದು, ಇದಕ್ಕೂ ಕೂಡ ಹೆಚ್ಚಿನ ಬೇಡಿಕೆಯಿದೆ. ಎಂ.ಬಿ.ಎ. ಸ್ನಾತಕೋತ್ತರ ಪದವಿಯನ್ನು ತೆಗೆದುಕೊಳ್ಳಲು ವಿದ್ಯಾರ್ಥಿಗಳಿಗೆ ಯಾವುದೇ ಪದವಿಯಿದ್ದರೂ ನಡೆಯುತ್ತದೆ.

ವಿದೇಶಗಳಲ್ಲಿ ವ್ಯಾಸಂಗ ಮಾಡಲು ಆಸಕ್ತ ವಿದ್ಯಾರ್ಥಿಗಳ ಕನಿಷ್ಠ ಅರ್ಹತೆ ಅವರು ಕೈಗೊಳ್ಳುವ ವಿದ್ಯಾಭ್ಯಾಸದ ಮೇಲೆ ಆಧಾರವಾಗಿರುತ್ತದೆ. ಉದಾಹರಣೆ, ಡಾಕ್ಟರೇಟ್ ಪದವಿಗೆ ಹೋಗಬಯಸುವ ವಿದ್ಯಾರ್ಥಿಗಳು ಕನಿಷ್ಠ ಸ್ನಾತಕೋತ್ತರ ಪದವಿ ಹೊಂದಿರಬೇಕು. ಇದಲ್ಲದೆ ಕೆಲವು ಪ್ರವೇಶ ಪರೀಕ್ಷೆಗಳನ್ನು ಕೂಡ ಇವರು ತೆಗೆದುಕೊಂಡು ಉತ್ತೀರ್ಣರಾಗಬೇಕು.

ಇದಲ್ಲಕ್ಕೂ ಮುಖ್ಯವಾಗಿ ವಿದ್ಯಾರ್ಥಿಗಳು ಮೊದಲು ಪಾಸ್‌ಪೋರ್ಟನ್ನು ಹೊಂದಿರಬೇಕು. ಪಾಸ್‌ಪೋರ್ಟನ್ನು ವಿದ್ಯಾರ್ಥಿಗಳು ಅವರ ಪ್ರವೇಶಕ್ಕೆ ಅನುಸಾರವಾಗಿರುವ ಪಾಸ್‌ಪೋರ್ಟು ಕಛೇರಿಯಲ್ಲಿ ಮಾಡಿಸಬೇಕು. ಕರ್ನಾಟಕ ಪ್ರದೇಶದಲ್ಲಿರುವವರು ಬೆಂಗಳೂರಿನ ಬ್ರಂಟನ್ ರಸ್ತೆಯಲ್ಲಿರುವ ಪಾಸ್‌ಪೋರ್ಟ್ ಕಛೇರಿಯಲ್ಲಿ ಮಾಡಿಸಿಕೊಳ್ಳಬೇಕು.

## ಪಾಸ್‌ಪೋರ್ಟ್ ಎಂದರೆ ಏನು?

ಒಂದು ದೇಶದಿಂದ ಇನ್ನೊಂದು ದೇಶಕ್ಕೆ ಹೋಗಲು ಪಾಸ್‌ಪೋರ್ಟ್ ಅವಶ್ಯಕವಾಗಿರುತ್ತದೆ. ಪಾಸ್‌ಪೋರ್ಟ್ ಪಡೆಯಲು ಯಾವುದೇ ಕ್ರಿಮಿನಲ್ ಕೇಸುಗಳು ಇಲ್ಲದವರು ಇದಕ್ಕೆ ಅರ್ಹರಾಗಿರುತ್ತಾರೆ. ಪಾಸ್‌ಪೋರ್ಟ್ ಪಡೆಯಲು ಮೊದಲು ಅರ್ಜಿಯನ್ನು ಪಾಸ್‌ಪೋರ್ಟ್ ಕಛೇರಿಯಲ್ಲಿ ಸಲ್ಲಿಸಬೇಕಾಗುವುದು. ಅರ್ಜಿಗಳು ಪ್ರಧಾನ ಅಂಚೆ ಕಛೇರಿಗಳಲ್ಲಿ ಲಭ್ಯವಿದ್ದು, ಅರ್ಜಿಯಲ್ಲಿ ನಮೂದಿಸಿದ ಸೂಚನೆಗಳ ಮೇರೆಗೆ ಭರ್ತಿ ಮಾಡಿದ ಅರ್ಜಿಗಳನ್ನು ಬೆಂಗಳೂರಿನ ಪಾಸ್‌ಪೋರ್ಟ್ ಕಚೇರಿಯಲ್ಲಿ ನಿಗದಿತ ಶುಲ್ಕದೊಂದಿಗೆ ಸಲ್ಲಿಸಬೇಕು. ಅರ್ಜಿಯನ್ನು ಪರಿಶೀಲಿಸಿದ ನಂತರ ಅಭ್ಯರ್ಥಿಗೆ ನಿಗದಿತ ಸಮಯದೊಳಗೆ ಗುರುತಿನ ಚೀಟಿಯನ್ನು ನೀಡಲಾಗುವುದು.

## ವೀಸಾ ಎಂದರೆ ಏನು?

ವೀಸಾ ಎಂದರೆ ವಿದೇಶದಲ್ಲಿ ವ್ಯಾಸಂಗ ಅಥವಾ ವೃತ್ತಿಯ ಮೇರೆಗೆ ಹೋಗಬಯಸುವವರು ಆ ದೇಶದ ಕನ್ಸುಲೇಟರ್ಸ್ (ಆಡಳಿತಾಧಿಕಾರಿಗಳು) ಆಯಾ ದೇಶಗಳ ನಿಬಂಧನೆಗಳ ಮೇರೆಗೆ ಅನುಮತಿಯನ್ನು ನೀಡಿ ಅವರಿಗೆ ಗುರುತಿನ ಚೀಟಿಯನ್ನು ನೀಡಲಾಗುತ್ತದೆ.

## ಯಾರನ್ನು ಸಂಪರ್ಕಿಸಬೇಕು?

ವೀಸಾ ಪಡೆಯಲು ಅಭ್ಯರ್ಥಿಯು ನವದೆಹಲಿಯಲ್ಲಿರುವ ಆಯಾ ದೇಶದ ಕನ್ಸುಲೇಟರ್ಸ್‌ಗಳನ್ನು ಸಂಪರ್ಕಿಸಬೇಕು. ಉದಾಹರಣೆಗೆ ಯು.ಎಸ್.ಎ. ಹೋಗಬಯಸುವ ಅಭ್ಯರ್ಥಿಗಳು U.S. Consultate, Annasalai Road, Chennai ಅಥವಾ U.S. Consulate, Chanukya puri, New-Delhi ಅವರನ್ನು ಸಂಪರ್ಕಿಸಬೇಕಾಗುತ್ತದೆ.

## TOEFL ಎಂದರೆ ಏನು?

TOEFL ಅಂದರೆ Test of English as a foreign language ವಿದ್ಯಾಭ್ಯಾಸ ಮಾಡಿರುವ ಅಥವಾ ಪದವಿ ಹೊಂದಿರುವ ವಿದ್ಯಾರ್ಥಿಗಳು ಈ ಪರೀಕ್ಷೆಯನ್ನು ತೆಗೆದುಕೊಂಡು ಕನಿಷ್ಠ ಅಂಕಗಳನ್ನು ಗಳಿಸಿ ತೇರ್ಗಡೆಯಾದರೆ ಮಾತ್ರ ಅವರಿಗೆ ವಿದೇಶಗಳಲ್ಲಿ ವಿದ್ಯಾಭ್ಯಾಸ ಮಾಡಲು ಅವಕಾಶ ನೀಡಲಾಗುತ್ತದೆ.

ಇದರಲ್ಲಿ ಮೂರು ವಿಭಾಗಗಳಿದ್ದು ಮೊದಲನೆಯದಾಗಿ

a) Listening (Comprehension)
b) Written
c) Written

b & c objective type, Fill in the blanks, correct mistakes ಮುಂತಾದ ಪ್ರಶ್ನೆಗಳನ್ನು ಹೊಂದಿರುತ್ತದೆ. ಕನಿಷ್ಠ ಅಂಕಗಳು ೫೦೦ರಿಂದ ೫೫೦ ಪ್ರವೇಶಕ್ಕಾಗಿ ಪಡೆದುಕೊಳ್ಳಬೇಕಾಗುತ್ತದೆ. Teaching assitantship ಆಗಿ ಹೋಗಬಯಸುವ ಅಭ್ಯರ್ಥಿಗಳು ಕನಿಷ್ಠ ೫೫೦ರಿಂದ ೬೦೦ ಅಂಕಗಳನ್ನು ಪಡೆದುಕೊಳ್ಳಬೇಕಾಗುವುದು. ಈ ಪರೀಕ್ಷೆಯನ್ನು ವರ್ಷದಲ್ಲಿ ಐದು ಬಾರಿ ನಡೆಸಲಾಗುವುದು. ಈಪರೀಕ್ಷೆ

ಯಲ್ಲಿ ತೇರ್ಗಡೆಯಾದ ಅಭ್ಯರ್ಥಿಗಳು ಮುಂದಿನ ಎರಡು ವರ್ಷಗಳಿಗೆ ಅರ್ಹರಾಗಿರುತ್ತಾರೆ.

**GRE ಎಂದರೆ ಏನು?**

GRE ಅಂದರೆ Graduates Record Examination. ಇದರಲ್ಲಿ ಮುಖ್ಯವಾಗಿ ಎರಡು ವಿಭಾಗಗಳಿದ್ದು

1. General GRE
2. Advance GRE

General GREಯಲ್ಲಿ ಮೂರು ಭಾಗಗಳಿದ್ದು

a) Verbal (English objective)

b) Quantitative (೧೦ನೇ ತರಗತಿಯ ಮಟ್ಟದ ಗಣಿತ)

c) Analitical ( Iq Test)

General GREಯು ಪ್ರವೇಶ ಪಡೆಯ ಬೇಕಾಗುವ ಎಲ್ಲಾ ವಿಶ್ವವಿದ್ಯಾಲಯಗಳಿಗೂ ಅವಶ್ಯಕವಾಗಿ ತೇರ್ಗಡೆಯಾಗಿರಬೇಕು. GRE ಪರೀಕ್ಷೆಯಲ್ಲಿ ಸಾಮಾನ್ಯವಾಗಿ Analitical testನ ಅಂಕಗಳು ಪರಿಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ. ಆದರೆ ಉತ್ತಮ ಅಂಕಗಳನ್ನು ಹೊಂದಿರುವುದು ಉಪಯೋಗಕಾರಿ. ಈ ಪರೀಕ್ಷೆಯು ವರ್ಷದಲ್ಲಿ ಐದು ಬಾರಿ ನಡೆಸಲಾಗಿದ್ದು ಇದು ಮುಂದಿನ ಐದು ವರ್ಷಗಳಿಗೆ ಅರ್ಹತೆಯನ್ನು ಒದಗಿಸುತ್ತದೆ.

## ಗುಣಮಟ್ಟ ಸಮಾವೇಶ

ಭಾರತದ ಗುಣಮಟ್ಟ ವೃತ್ತ ವೇದಿಕೆ ಬೆಂಗಳೂರು ಶಾಖೆಯ ವಾರ್ಷಿಕ ಸಮಾವೇಶವನ್ನು ಇತ್ತೀಚೆಗೆ ಬೆಂಗಳೂರಿನಲ್ಲಿ ನಡೆಯಿತು. ಇದರಲ್ಲಿ ಕೆನರಾ ಬ್ಯಾಂಕ್ ಎರಡು ಬಹುಮಾನಗಳನ್ನು ಪಡೆಯಿತು. ಚನ್ನೈ ಸಾಗರೋತ್ತರ ಶಾಖೆಯ ಗುಣಮಟ್ಟ ವೃತ್ತ ತಂಡವಾದ '೨೦೦೦ದ ನೋಟ', 'ಶುದ್ಧ ಸೇವೆಗಳ' ಶ್ರೇಣಿಯಲ್ಲಿ ಗೌರವಾನ್ವಿತ ಪ್ರಥಮ ಬಹುಮಾನ ಗಳಿಸಿತು. ವೆಳ್ಳಕೋವಿಲ್ ಶಾಖೆಯ 'ಡೆಲ್ಟಾ' ಗುಣಮಟ್ಟ ವೃತ್ತ ತಂಡ ಸಮಾಧಾನಕರ ಬಹುಮಾನ ಪಡೆದಿದೆ.

ಇದರಲ್ಲಿ ತೇರ್ಗಡೆಯಾದವರು ವಿಶ್ವವಿದ್ಯಾಲಯಗಳ ವಿವರಗಳಿಗೆ ಆಯಾ ದೇಶದ ರಾಯಭಾರಿಗಳಿಗೆ ಬರೆದು ತಿಳಿದುಕೊಳ್ಳಬಹುದಾಗಿದೆ.




# ನೀವು ವಿದೇಶದಲ್ಲಿ ವ್ಯಾಸಂಗ ಮಾಡಬಯಸುವಿರಾ?

## ಪಿಎಚ್.ಡಿ. ನಂತರದ ಫೆಲೋಶಿಪ್

ಆಸ್ಟ್ರೇಲಿಯದ ಕ್ವೀನ್ಸ್‌ಲ್ಯಾಂಡ್ ವಿಶ್ವವಿದ್ಯಾಲಯ ಪಿಎಚ್.ಡಿ. ನಂತರದ ಫೆಲೋಶಿಪ್‌ಗಳ ಬಗ್ಗೆ ಪ್ರಕಟಿಸಿದ್ದು ಅವು ೧೯೯೯ರಿಂದ ಅರ್ಹರಿಗೆ ಸಿಗಬಹುದಾಗಿದೆ. ಅವು ಸೀಮಿತ ಸಂಖ್ಯೆಯಲ್ಲಿದ್ದು, ವಿಜ್ಞಾನ, ಇಂಜಿನಿಯರಿಂಗ್ ಮತ್ತು ಕೃಷಿ ವಿಜ್ಞಾನ ಕ್ಷೇತ್ರಗಳಿಗೆ ಕೊಡಲಾಗುವದು. ಅರ್ಜಿದಾರರು ಪಿಎಚ್.ಡಿ. ಪದವಿಯನ್ನು ಇತ್ತೀಚಿಗೆ ಪಡೆದಿರಬೇಕು. ಅಲ್ಲದೆ, ಇಲ್ಲಿಯವರೆಗಿನ ಪರೀಕ್ಷೆಗಳಲ್ಲಿ ಅತ್ಯುತ್ತಮ ರೀತಿಯಲ್ಲಿ ಪಾಸಾಗಿರಬೇಕಲ್ಲದೆ ಸಂಶೋಧನ ಪ್ರಬಂಧಗಳನ್ನು ಅಂತರ್‌ರಾಷ್ಟ್ರೀಯ ಪ್ರಸಿದ್ಧಿಯ ನಿಯತ ಕಾಲಿಕೆಗಳಲ್ಲಿ ಪ್ರಕಟಿಸಿರಬೇಕು. ಈ ಸಂಖ್ಯೆ ಹೆಚ್ಚಿದ್ದಷ್ಟೂ ಅರ್ಹತೆಗೆ ಒಳ್ಳೆಯದು.

## ಸಿಂಗಾಪುರ ನಾನ್ಯಾಂಗ್ ವಿಶ್ವವಿದ್ಯಾಲಯದಲ್ಲಿ ಪಿಎಚ್‌ಡಿ ನಂತರದ ಫೆಲೋಶಿಪ್

ನಾನ್ಯಾಂಗ್ ವಿಶ್ವವಿದ್ಯಾಲಯದ ಅನೇಕ ವಿಜ್ಞಾನ ಹಾಗೂ ಇಂಜಿನಿಯರಿಂಗ್ ಇಲಾಖೆಗಳಲ್ಲಿ ಪಿಎಚ್.ಡಿ. ನಂತರದ ಫೆಲೋಶಿಪ್‌ಗಳು ಲಭ್ಯವಿದ್ದು ಮೇಲ್ಪಂಕ್ತಿಯ ಅರ್ಹತೆ ಇರಬೇಕು. ಪಿಎಚ್.ಡಿ.ಯನ್ನು ಅರ್ಜಿದಾರರು ಇತ್ತೀಚಿಗಷ್ಟೇ ಸಂಪಾದಿಸಿರಬೇಕು. ಅದಕ್ಕೆ ಸಂಬಂಧಿಸಿದ ಸಂಶೋಧನ ಪ್ರಬಂಧಗಳನ್ನು ಅಂತರ್‌ರಾಷ್ಟ್ರೀಯ ಅಥವಾ ರಾಷ್ಟ್ರೀಯ ಹಂತದ ನಿಯತಕಾಲಿಕೆಗಳಲ್ಲಿ ಪ್ರಕಟಿಸಿರಬೇಕು. ಎಂ.ಎಸ್‌ಸಿ. ವರೆಗಿನ ಎಲ್ಲ ಪರೀಕ್ಷೆಗಳಲ್ಲಿ ಅತ್ಯುತ್ತಮ ರೀತಿಯಲ್ಲಿ ಪ್ರಶಸ್ತಿಯೊಂದಿಗೆ ಪಾಸಾಗಿರಬೇಕು. ಅರ್ಜಿದಾರರ ಬಗ್ಗೆ ಶಿಫಾರಸು ಮಾಡುವ ಪ್ರಾಧ್ಯಾಪಕರು ಸಹ ಘನತೆವೇತ್ತ ಸಂಶೋಧಕರಾಗಿರಬೇಕು.

## ಪರದೇಶಗಳಲ್ಲಿ ಉಚ್ಚ ಶಿಕ್ಷಣ

ಬಿ.ಇ. ಅಥವಾ ಎಂ.ಎಸ್‌ಸಿ.ವರೆಗೆ ಅಧ್ಯಯನ ಮಾಡಿ, ಪ್ರಶಸ್ತಿಯೊಂದಿಗೆ ತೇರ್ಗಡೆ ಹೊಂದಿದ ವಿದ್ಯಾರ್ಥಿಗಳು, ಅವರು ಪರದೇಶಗಳಲ್ಲಿಯ ವಿಶ್ವವಿದ್ಯಾಲಯಕ್ಕೆ ಹೋಗಿ ಎಂ.ಎಸ್./ಪಿಎಚ್.ಡಿ. ಮಾಡುವ ಉದ್ದೇಶವಿದ್ದರೆ, ಅದರ ಬಗ್ಗೆ ಅನೇಕ ವಿವರಗಳು/ಮಾಹಿತಿ ಬೇಕಿದ್ದರೆ ಕೆಳಗಿನ ವಿಳಾಸದಾರರನ್ನು ಸಂಪರ್ಕಿಸಬಹುದು.

ಉತ್ಸಾಹಿಗಳು ಪರದೇಶಕ್ಕೆ ಉಚ್ಚ ಶಿಕ್ಷಣಕ್ಕೆ ಹೋಗುವಲ್ಲಿ ಪ್ರಾರಂಭಿಕ ಪ್ರಯತ್ನಗಳನ್ನು ಮಾಡಿದ್ದರೆ ಬಹಳ ಒಳ್ಳೆಯದು. ಇಂಥ ಪ್ರಯತ್ನಕ್ಕೂ ಸಹ ಸಮಯ, ಶಕ್ತಿ ಹಣ ಎಲ್ಲವನ್ನೂ ಖರ್ಚು ಮಾಡಬೇಕಾಗುತ್ತದೆ. ೧೯೯೮ ಸೆಪ್ಟೆಂಬರ್ ಸೆಮಿಸ್ಟರ್‌ಗೆ ಹೋಗುವವರು ತಕ್ಷಣವೇ ಪ್ರಯತ್ನ ಪ್ರಾರಂಭಿಸಬೇಕಾಗುತ್ತದೆ.

ಈ ಕುರಿತ ಹೆಚ್ಚಿನ ವಿವರಗಳಿಗೆ ಈ ಕೆಳಗಿನ ವಿಳಾಸದಲ್ಲಿ ಖುದ್ದಾಗಿ ಸಂಪರ್ಕಿಸಬಹುದು. ಪತ್ರ ವ್ಯವಹಾರಕ್ಕೆ ಆಸ್ಪದವಿಲ್ಲ.

**ಡಾ. ನಾರಾಯಣ ಮಹಿಷಿ**
ಜನರಲ್ ಸೆಕ್ರೆಟರಿ
ಅಲುಮ್ನಿ ಅಸೋಸಿಯೇಷನ್
ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು

# ಸ್ವಯಂ ಉದ್ಯೋಗ ಮಾಹಿತಿ

## ಗ್ರಾಮೀಣ ಮತ್ತು ಹಿಂದುಳಿದ ಅಭ್ಯರ್ಥಿಗಳಿಗೆ ಒಂದು ವರ್ಷ ಅವಧಿಯ ವಿಶೇಷ ತರಬೇತಿ.

**ಅರ್ಹತೆ ಮತ್ತು ವಿವರಗಳು**

ಪ್ರೊಟೊಟೈಪ್ ಡೆವಲಪ್‌ಮೆಂಟ್ ಮತ್ತು ಟ್ರೈನಿಂಗ್ ಸೆಂಟರ್‌ನವರು ೮ನೇಯ ತರಗತಿ ಪಾಸಾದ ವಿದ್ಯಾರ್ಥಿಗಳಿಗೆ ಒಂದು ವರ್ಷದ ತರಬೇತಿ ನೀಡಲಾಗುತ್ತದೆ. ಈ ಕೋರ್ಸಿಗೆ ಇರಬೇಕಾದ ವಯೋಮಿತಿ ಎಂದರೆ ೧೮-೨೫ ವರ್ಷ. ಪರಿಶಿಷ್ಟ ಜಾತಿ / ಪಂಗಡ, ಹಿಂದುಳಿದ ಜನಾಂಗದವರಿಗೆ, ಸೈನ್ಯದಿಂದ ನಿವೃತ್ತಿ ಹೊಂದಿದವರ ನೇರ ಸಂಬಂಧಿಗಳಿಗೆ, ಅಂಗವಿಕಲರಿಗೆ ಮೊದಲು ಆದ್ಯತೆ ನೀಡಲಾಗುವುದು.

**ತರಬೇತಿ ಕೋರ್ಸುಗಳು**

ಫಿಟ್ಟರ್, ಎಲೆಕ್ಟ್ರಿಕಲ್, ಮೆಷನ್ ಫಿಟ್ಟರ್, ಫಿಟ್ಟರ್ ಮೈನ್‌ಟೆನೆನ್ಸ್, ಫಿಟ್ಟರ್ ಫ್ಯಾಬ್ರಿಕೇಷನ್, ವುಡನ್ ಫರ್ನಿಚರ್ ಡಿಸೈನಿಂಗ್ ಮತ್ತು ತಯಾರಿಕೆ ಹೀಗೆ ಹಲವಾರು ವೃತ್ತಿ ಮೂಲ ತರಬೇತಿ ನೆಡೆಸಲಾಗುವುದು.

**ವೇತನ**

ಆಯ್ಕೆ ಆದ ಅಭ್ಯರ್ಥಿಗಳಿಗೆ ಪ್ರತಿ ತಿಂಗಳು ೧೩೦ ರೂಪಾಯಿ ವೇತನ ನೀಡಲಾಗುತ್ತದೆ. ಹೊರ ರಾಜ್ಯದ ವಿದ್ಯಾರ್ಥಿಗಳಿಗೆ ವಸತಿ ಸೌಕರ್ಯವಿದೆ.

ಪ್ರತಿ ವರ್ಷ ಜೂನ್ ತಿಂಗಳಿನಲ್ಲಿ ಪತ್ರಿಕೆಗಳಲ್ಲಿ ಜಾಹಿರಾತು ನೀಡಲಾಗುವುದು. ಇದಕ್ಕನುಗುಣವಾಗಿ ಸ್ವ-ವಿಳಾಸದ ಅಂಚೆ ಕವರಿನೊಂದಿಗೆ ಅರ್ಜಿಗಾಗಿ ಬರೆಯಬೇಕು.
ಸಂಪರ್ಕಿಸಬೇಕಾದ ವಿಳಾಸ :

**ಪ್ರೊಟೊಟೈಪ್ ಡೆವಲಪ್‌ಮೆಂಟ್**
**ಆ್ಯಂಡ್ ಟ್ರೈನಿಂಗ್ ಸೆಂಟರ್,**
ದಿ ನ್ಯಾಷನಲ್ ಸ್ಮಾಲ್ ಸೆಂಟರ್
ಇಂಡಸ್ಟ್ರೀಸ್ ಕಾರ್ಪೊರೇಷನ್,
ಒಖ್ಲಾ ಇಂಡಸ್ಟ್ರಿಯಲ್ ಎಸ್ಟೇಟ್-೩,
ನವದೆಹಲಿ - ೨೦.

## ರೇಡಿಯೋ ಥೆರಪಿ ಟೆಕ್ನೀಷಿಯನ್ಸ್ ಟ್ರೈನಿಂಗ್ ಪ್ರೋಗ್ರಾಂ.

TATA Memorial Hospital ನಡೆಸುವ ಈ ತರಬೇತಿ ಕಾರ್ಯಕ್ರಮ ರೇಡಿಯೋ ಥೆರಪಿ ಟೆಕ್ನಿಷಿಯನ್‌ಗಾಗಿ ಇದೆ. ೨ ವರ್ಷಗಳ ಈ ತರಬೇತಿ ಕಾರ್ಯಕ್ರಮದಲ್ಲಿ ವಿದ್ಯಾರ್ಥಿಗಳಿಗೆ ಉಪನ್ಯಾಸ, ಪ್ರಯೋಗಿಕ ವಿಷಯಗಳು, ಪ್ರವಚನ ಮತ್ತು ರೋಗಿಗಳ ಶುಶ್ರೂಷೆಗೆ ಸಂಬಂಧಪಟ್ಟ ತರಬೇತಿ ನೀಡಲಾಗುತ್ತದೆ.

**ಅರ್ಹತೆಗಳು**

ಪಿ.ಯು.ಸಿ.ಯಲ್ಲಿ ೨ನೇ ದರ್ಜೆಯಲ್ಲಿ ತೇರ್ಗಡೆಯಾಗಿರಬೇಕು, ಇಲ್ಲವೆ ಮೆಡಿಕಲ್ ಇನಿಸ್ಟಿಟ್ಯೂಟ್ / ಕ್ಯಾನ್ಸರ್ ಹಾಸ್ಪಿಟಲ್‌ನಿಂದ ಪ್ರಾಯೋಜನೆ ಪಡೆದಿರಬೇಕು. ವಯಸ್ಸು ಗರಿಷ್ಟ ೨೫ ವರ್ಷಗಳು.

**ವೇತನ ಮತ್ತು ವಸತಿ**

೨ ವರ್ಷಗಳ ಈ ತರಬೇತಿ ಸಮಯದಲ್ಲಿ ಪ್ರತಿ ತಿಂಗಳಿಗೆ ೧,೨೦೦ ರೂಪಾಯಿ ವೇತನ ನೀಡಲಾಗುತ್ತದೆ. ವಸತಿ ಸೌಕರ್ಯ ಮುಂಬೈ ನಿವಾಸಿಗಳಿಗೆ ನೀಡಲಾಗುವುದಿಲ್ಲ. ಪರ ಊರಿನವರಿಗೆ ಕೊಡಲಾಗುವುದು. ಅದರ ಶುಲ್ಕವನ್ನು ಅಭ್ಯರ್ಥಿ ಭರಿಸಬೇಕು.

> ಇಲ್ಲಿ ವೈದ್ಯಕೀಯಕ್ಕೆ ಸಂಬಂಧಿಸಿದ ತರಬೇತಿಯಿದ್ದು, ಸ್ವ-ಉದ್ಯೋಗಕ್ಕೆ ಅವಕಾಶವು ಇದೆ. ತರಬೇತಿಯನ್ನು ಸಂಪೂರ್ಣವಾಗಿ ಮುಗಿಸಿದವರಿಗೆ ಉದ್ಯೋಗ ಗ್ಯಾರಂಟಿಯು ಇದೆ.

ಕೃಪೆ: ಕಲಸ್ಕರ ಅವರ
How to get scholership ಪುಸ್ತಕ

**ಉದ್ದೇಶ ಮತ್ತು ಒಪ್ಪಂದ**

ಈ ತರಬೇತಿಯ ಮುಖ್ಯ ಉದ್ದೇಶವೆಂದರೆ ಕ್ಯಾನ್ಸರ್ ಆಸ್ಪತ್ರೆಗಳಿಗೆ ಮತ್ತು ಇನ್ನಿತರ ಆಸ್ಪತ್ರೆಗಳಿಗೆ ಆಧುನಿಕ ರೇಡಿಯೋ ಥೆರಪಿ ಉಪಕರಣಗಳಾದ ಕೊಬಾಲ್ಟ ಯುನಿಟ್ಸ್, ಲೈನರ್ ಅಕ್ಸಿಲರೇಟರ್ಸ್ ಸಿಮುಲೇಟರ್ಸ್, ಟ್ರೆಕಿ-ಥೆರಪಿ ಸಿಸ್ಟಮ್ಸ್ ಮತ್ತು ಮೌಲ್ಡರೂಮ್ ಎಕ್ಸಿಪಿರಿಯನ್ಸ್‌ಗಳಲ್ಲಿ ಸಿಬ್ಬಂದಿಗಳಿಗೆ ತರಬೇತಿ ನೀಡಿ, ಪ್ರತಿ ೩ ತಿಂಗಳಿಗೆ ಒಂದು ಸಲ ಅಭ್ಯರ್ಥಿಗಳನ್ನು ಪರೀಕ್ಷೆಗೆ ತೆಗೆದುಕೊಳ್ಳಲಾಗುವುದು. ಯಶಸ್ವಿಯಾಗಿ ಪೂರೈಸಿದ ಅಭ್ಯರ್ಥಿಗಳಿಗೆ ಟಾಟಾ ಮೇಮೊರಿಯಲ್ ಆಸ್ಪತ್ರೆಯಲ್ಲಿ ಉದ್ಯೋಗ ನೀಡಲಾಗುವುದು.

ತರಬೇತಿಯ ಕಾರ್ಯಕ್ರಮಕ್ಕೆ ಯಾವುದೇ ರೀತಿಯ ಶುಲ್ಕಗಳಿಲ್ಲ. ಒಮ್ಮೆ ಈ ತರಬೇತಿಯಲ್ಲಿ ಸೇರಿಕೊಂಡ ಅನಂತರ ಯಾವುದೇ ಕಾರಣಕ್ಕೆ ಮಧ್ಯದಲ್ಲಿ ಬೀಡಬಾರದು. ಒಂದು ವೇಳೆ ಮಧ್ಯದಲ್ಲಿ ಬಿಡುವವರಿದ್ದರೆ ಅಥವಾ ಸರಿಯಾಗಿ ಕಾರ್ಯಕ್ರಮದಲ್ಲಿ ಹಾಜರಾಗದವರು ತಾವು ಪಡೆದಿರುವ ಪೂರ್ಣ ಭತ್ಯೆಯನ್ನು ಬಡ್ಡಿ ಸಮೇತ ಹಿಂದುರಿಗಿಸಬೇಕಾಗುವುದು.

**ಅರ್ಜಿ ಸಲ್ಲಿಸುವ ವಿಧಾನ**

ಪ್ರತಿ ವರ್ಷ ಜೂನ್ ತಿಂಗಳಿನಲ್ಲಿ

ಇಂಡಿಯನ್ ಎಕ್ಸ್‌ಪ್ರೆಸ್ ಹಾಗೂ ಇನ್ನಿತರ ಪ್ರಮುಖ ಪತ್ರಿಕೆಗಳಲ್ಲಿ ಜಾಹಿರಾತು ನೀಡಲಾಗುತ್ತದೆ. ಜೂನ್ ೩೦ರ ಒಳಗೆ ಅರ್ಜಿಯನ್ನು ೫ ರೂ. ಕಟ್ಟಿ ಅಥವಾ ಪೋಸ್ಟಲ್ ಆರ್ಡರ್ ಮೂಲಕ ತರಿಸಿಕೊಳ್ಳಬೇಕು.

ವಿಳಾಸ:
TATA memorial Hospital,
Dr. Arnest borgis Marg,
Pasel, MUMBAI -12.



## ಹೈನುಗಾರಿಕೆ ತರಬೇತಿ

ರಾಜ್ಯ ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ೧೮ ರಿಂದ ೪೦ ವರ್ಷ ವಯೋಮಿತಿಯ ರೈತರಿಗೆ, ರೈತರ ಮಕ್ಕಳಿಗೆ, ಹೈನುಗಾರಿಕೆ ಪ್ರಾರಂಭಿಸಲು ಇಚ್ಛಿಸುವವರಿಗೆ ಅ.೧೩ ರಿಂದ ೨೨ರವರೆಗೆ ಹೈನುಗಾರಿಕೆ ಮತ್ತು ಮೇವು ಉತ್ಪಾದನೆಯ ತರಬೇತಿ ಏರ್ಪಡಿಸಿದೆ. ತರಬೇತಿ ಸಮಯದಲ್ಲಿ ವಸತಿ ಸೌಕರ್ಯ ಉಚಿತ.

ಆಸಕ್ತರು, ಅರ್ಜಿಯನ್ನು ಸೆ.೩೦ರ ಒಳಗೆ ಸಲ್ಲಿಸಬೇಕು. ಹೆಚ್ಚಿನ ವಿವರಗಳಿಗೆ ಉಪನಿರ್ದೇಶಕರು (ತರಬೇತಿ), ರಾಜ್ಯ ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಹೆಸರುಘಟ್ಟ, ಬೆಂಗಳೂರು-೮೮ ಇಲ್ಲಿ ಸಂಪರ್ಕಿಸಲು ಪ್ರಕಟಣೆ ಕೋರಿದೆ.

# ಸೇನೆಯಲ್ಲಿ ನರ್ಸಿಂಗ್ ಸೇವೆ

ಭಾರತೀಯ ಸೇವೆ, ಮಿಲಿಟರಿ ನರ್ಸಿಂಗ್ ಸೇವಾ ತರಬೇತಿಗಾಗಿ ಅವಿವಾಹಿತ/ ವಿಚ್ಛೇದಿತ/ ಕಾನೂನು ರೀತ್ಯಾ ಪ್ರತ್ಯೇಕವಾಗಿರುವ/ ವಿಧವಾ ಮಹಿಳೆಯರಿಂದ ಅರ್ಜಿ ಆಹ್ವಾನಿಸಿದೆ. ೧೯೭೩ರ ಸೆ. ೧ ಮತ್ತು ೧೯೮೧ರ ಸೆ. ೧ರ ನಡುವೆ ಹುಟ್ಟಿದವರು ಅರ್ಜಿ ಸಲ್ಲಿಸಬಹುದು.

### ವಿದ್ಯಾರ್ಹತೆ

ಭೌತಶಾಸ್ತ್ರ, ರಸಾಯನಶಾಸ್ತ್ರ, ಜೀವಶಾಸ್ತ್ರ ಐಚ್ಛಿಕ ವಿಷಯಗಳ ಪಿ.ಯು.ಸಿ. ಪರೀಕ್ಷೆಯಲ್ಲಿ ಕನಿಷ್ಠ ೫೦ರಷ್ಟು ಅಂಕ ಪಡೆದು ತೇರ್ಗಡೆಯಾಗಿರಬೇಕು.

### ಆಯ್ಕೆ ವಿಧಾನ

ಇಂಗ್ಲೀಷ್, ಜೀವಶಾಸ್ತ್ರ ಮತ್ತು ಸಾಮಾನ್ಯ ಜ್ಞಾನಕ್ಕೆ ಸಂಬಂಧಿಸಿದಂತೆ ೯೦ ನಿಮಿಷಗಳ ಪರೀಕ್ಷೆ ನಡೆಸಿ ಅದರಲ್ಲಿ ಉತ್ತೀರ್ಣರಾದವರನ್ನು ಸಂದರ್ಶನ ಮಾಡಿ ಆಯ್ಕೆ ಮಾಡಲಾಗುವುದು. ಅಂತಿಮ ಅರ್ಹತೆಯ ವೈದ್ಯಕೀಯ ಪರೀಕ್ಷೆಯನ್ನು ಅವಲಂಬಿಸಿರುತ್ತದೆ.

ಅರ್ಜಿ ಸಲ್ಲಿಸಲು ಕಡೆಯ ದಿನಾಂಕ : ೨೪.೧೦.೧೯೯೭

# ಹೈನೋದ್ಯಮ ಹಿನ್ನೆಲೆ-ಮುನ್ನೆಲೆ

○ ಡಾ. ನಾರಾಯಣ್ ಮಹಿಷಿ

**ಯಾ**ವ ಉದ್ದಿಮೆಯೇ ಇರಲಿ ಅದು ತ್ವರಿತಗತಿಯಿಂದ ಬೆಳೆಯಬೇಕಾದರೆ ದೇಶ ಸ್ವತಂತ್ರವಾಗಿರಬೇಕೆಂಬುದು ನಿರ್ವಿವಾದ. ನಮ್ಮ ದೇಶ ಈ ವಿಚಾರ ಸರಣಿಗೆ ಅಪವಾದವೇನೂ ಇಲ್ಲ. ೧೯೪೭ಕ್ಕೂ ಪೂರ್ವದಲ್ಲಿ ಸಾವಿರಾರು ಮಕ್ಕಳು ಔಷಧವನ್ನು ಕುಡಿಯುವ ರೀತಿಯಲ್ಲಿ ಹಾಲನ್ನು ಕುಡಿಯುತ್ತಿದ್ದರು. ಹಸುವಿನ ಹಾಲಿಗಂತೂ ಔಷಧದ ಮಹತ್ವವೇ ಇತ್ತು. ಇಂಥ ಒಂದು ಪರಿಸ್ಥಿತಿಯನ್ನು ಯಶಸ್ವಿಯಾಗಿ ಎದುರಿಸಿ ಮುಂದೆ ಬರಬೇಕಾದರೆ ನಮಗೆ ೩೫-೪೦ ವರುಷಗಳೇ ಬೇಕಾದವು. ಉದ್ದೇಶವು ಸ್ಪಷ್ಟವಾಗಿರಬೇಕು; ಅದನ್ನು ಕಾರ್ಯರೂಪದಲ್ಲಿ ತರಲು ಸರಿಯಾದ ಯೋಜನೆಗಳನ್ನು ರೂಪಿಸಬೇಕಾಗುತ್ತದೆ. ಸಮಯದ ಚೌಕಟ್ಟಿನಲ್ಲಿ ಸತತ ಪ್ರಯತ್ನದಿಂದ ಉದ್ದೇಶವನ್ನು ಈಡೇರಿಸಬಹುದೆಂಬುದನ್ನು ನಮ್ಮ ದೇಶ ತೋರಿಸಿಕೊಟ್ಟಿದೆ. ಇದರರ್ಥ ಸುಧಾರಣೆಗೆ ಅವಕಾಶವೇ ಇಲ್ಲದ ರೀತಿಯಲ್ಲಿ ಹೈನೋದ್ಯಮದ ಪರಿಸ್ಥಿತಿ ನಿರ್ಮಾಣವಾಗಿದೆ ಎಂದು ಹೇಳುವದು ಸರಿಯಲ್ಲ. ಕೃಷಿ ಪ್ರಧಾನವಾದ ಭಾರತದಲ್ಲಿ ಹಸಿರು ಕ್ರಾಂತಿಯಾದದ್ದು ನಮಗೆಲ್ಲ ಗೊತ್ತಿದೆ. ಶ್ವೇತ ಕ್ರಾಂತಿಯನ್ನು ನಾವು ನೋಡುತ್ತಲೇ ಇದ್ದೇವೆ. ಹೈನೋದ್ಯಮ ಕ್ಷೇತ್ರದಲ್ಲಿ ನಮ್ಮ ದೇಶ ಸಮೃದ್ಧಿಯಾದರಷ್ಟೇ ಸಾಲದು. ಮಾನವ ಸಂಪನ್ಮೂಲವನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸಿಕೊಂಡರೆ, ಸರಿಯಾದ ಯೋಜನೆಗಳನ್ನು ಗ್ರಾಮೀಣ ಪ್ರದೇಶಗಳಲ್ಲಿ ಬಿತ್ತಿ, ಸೂಕ್ತ ಮುಖಂಡತ್ವದ ಪ್ರೇರಣೆ ಇದ್ದರೆ ಹಾಲು-ಜೇನಿನ ಹೊಳೆ ಹರಿಸುವದು ಅಖಂಡವಾಗಿ ಕನಸಾಗಿಯೇ ಉಳಿಯದು.

ಜನಸಂಖ್ಯೆ ಬೆಳೆದಂತೆಲ್ಲ ಹಾಲಿಗಾಗಿ, ಅದರ ಉತ್ಪನ್ನಗಳಿಗಾಗಿರುವ ಬೇಡಿಕೆಯಲ್ಲಿ ದೊಡ್ಡ ಪ್ರಮಾಣದ ಹೆಚ್ಚಳ ಕಂಡುಬಂದಿದೆ ಎಂಬುದನ್ನು ಕಾಲವೇ ತೋರಿಸಿಕೊಟ್ಟಿದೆ. ೩-೪ ದಶಕದ ಈ ಸಮಯದಲ್ಲಿ ಈ ಸಂಘಟಿತ ಪ್ರಯತ್ನಗಳೆಲ್ಲ ಸಂಘಟಿತ ಪ್ರಯತ್ನಗಳಿಗೆ ಒಳಪಟ್ಟಿವೆ. ಈ ತರಹದ ಪ್ರಯತ್ನ ಸಫಲವಾಗಬೇಕಾದರೆ ಉದ್ದಿಮೆಗಳು, ಸಹಕಾರಿ ಸಂಘಗಳು ಹೈನೋದ್ಯಮ ಕ್ಷೇತ್ರದಲ್ಲಿ ಅಸ್ತಿತ್ವದಲ್ಲಿ ಬರಬೇಕಾಗುತ್ತದೆ. ಒಂದು ಯಂತ್ರವು ಯಶಸ್ವಿಯಾಗಿ ಕೆಲಸ ಮಾಡಿ ಪರಿಣಾಮಗಳನ್ನು ಉತ್ಪಾದನೆಯ ರೂಪದಲ್ಲಿ ತೋರಿಸುವದಾದರೆ ಯಂತ್ರ ವಿನ್ಯಾಸಕ್ಕೆ ಪರಿಣತರು ಬೇಕಾಗುತ್ತಾರೆ, ಯಂತ್ರ ನಡೆಸಲು ತರಬೇತು ಪಡೆದವರು ಬೇಕಾಗುತ್ತಾರೆ, ಉತ್ಪಾದನೆಗಳನ್ನು ಸರಿಯಾದ ರೀತಿಯಲ್ಲಿ ಪ್ಯಾಕ್ ಮಾಡಿ ಮಾರುಕಟ್ಟೆಗೆ ಸಾಗಿಸಿ ಜನರಿಗೆ ಮುಟ್ಟಿಸಬೇಕಾಗುತ್ತದೆ. ಸ್ಥೂಲವಾಗಿ ಇದೊಂದು ಉತ್ಪಾದನೆಗಳು ಕ್ರಮಿಸಬೇಕಾದ ದಾರಿ. ಈ ಕ್ರಮಕ್ಕೆ ಹೊಂದಿಕೊಂಡಂತೆ ಇನ್ನೂ ಅನೇಕ ಕೆಲಸಗಳು ಹೊಸದಾಗಿ ರೂಪು ತಾಳಿವೆ.

ಕೃಷಿ ಉತ್ಪನ್ನಗಳಿಗೆ ಗ್ರಾಮೀಣ ಪ್ರದೇಶಗಳು ಮೂಲವಾಗಿದ್ದರೂ ಬೇಡಿಕೆ ಬೃಹದ್ ಪ್ರಮಾಣದಲ್ಲಿ ಪಟ್ಟಣಗಳಿಂದಲೇ ಬರುತ್ತದೆ. ಪಟ್ಟಣಗಳಲ್ಲಿ ಜನಸಾಂದ್ರತೆ ಅಗಾಧವಾಗಿ ಬೆಳೆಯುತ್ತಿರುವಾಗಲೇ, ಪರದೇಶಗಳೂ ಸೇರಿದಂತೆ ಹೊರಗಿನಿಂದ ಪಟ್ಟಣಗಳಿಗೆ ಬರುವ ಜನರೂ ಬಹಳ ಹೆಚ್ಚಾಗಿದ್ದಾರೆ. ಮೆಟ್ರೊಪೊಲಿಟನ್ ಪಟ್ಟಣಗಳಲ್ಲಿ ಅನೇಕ ಪಂಚತಾರಾ ಹೋಟೆಲ್‌ಗಳು ಅಸ್ತಿತ್ವ ಪಡೆದು ಪರದೇಶಿ ಪ್ರವಾಸಿಗಳಿಂದ ಡಾಲರು, ಪೌಂಡ್‌ಗಳನ್ನು ಸಂಪಾದಿಸುವಲ್ಲಿ ನಿರತವಾಗಿವೆ. ಇದನ್ನೆಲ್ಲ ಹೇಳುವ ನನ್ನ ಉದ್ದೇಶವೆಂದರೆ ಹಾಲಿಗಾಗಿ, ಹಾಲೋತ್ಪನ್ನಗಳಿಗಾಗಿರುವ ಬೇಡಿಕೆ ಶೀಘ್ರಗತಿಯಲ್ಲಿ ಬೆಳೆದಿದೆ, ಬೆಳೆಯುತ್ತಲೇ ಇದೆ. ಇಂದಿನ ಸಂದರ್ಭದಲ್ಲಿ ಹೇಳಬೇಕೆಂದರೆ ಸುಮಾರು ಇನ್ನೂರು ಹಾಲಿನ ಡೇರಿಗಳು ದೇಶದಾದ್ಯಂತ ಕೆಲಸ ಮಾಡುತ್ತಲಿವೆ. ಹಾಲಿನ ಉತ್ಪಾದನೆ ಪ್ರತಿದಿನ ಸುಮಾರು ಒಂದು ನೂರು ಐವತ್ತು ಲಕ್ಷ ಲೀಟರ್‌ಗಳಷ್ಟು!

ಹೈನೋದ್ಯಮದಲ್ಲಿ ಸುಮಾರು ಅರ್ಧ ಲಕ್ಷಕ್ಕೂ ಹೆಚ್ಚು ಜನ ಪರಿಣತಿಯುಳ್ಳವರು ನಿರತರಾಗಿದ್ದಾರೆ. ಈ ಸಂಖ್ಯೆಯಲ್ಲಿ ಮಹಿಳೆಯರಿಗಿಂತ ಮಹನೀಯರೇ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಈ ಕ್ಷೇತ್ರದಲ್ಲಿ ಎರಡು ಮುಖ್ಯ ಚಟುವಟಿಕೆಗಳು ಒಳಗೊಂಡಿವೆ.

## ಹಾಲು ಉತ್ಪಾದನೆ

ಹಸು, ಎಮ್ಮೆಗಳಿಂದ ಹಾಲು ಕರೆಯುವದು, ಅದನ್ನು ಸಂಗ್ರಹಿಸುವದು, ಪಾಶ್ಚರೀಕರಣಕ್ಕೆ ಒಳಪಡಿಸಿ, ನಂತರ ವಿತರಣೆ ಮಾಡುವದು. ಈ ಕ್ರಮಬದ್ಧ ಕೆಲಸವನ್ನು ಹೆಚ್ಚಾಗಿ ಸಾರ್ವಜನಿಕ ಕ್ಷೇತ್ರದಲ್ಲಿ ಸಹಕಾರಿ ಸಂಘಗಳೇ ನಿರ್ವಹಿಸುತ್ತವೆ.

ಬೆಣ್ಣೆ, ಡೀಜ್, ತುಪ್ಪ, ಐಸ್‌ಕ್ರೀಂ ಇತ್ಯಾದಿಗಳನ್ನು ತಯಾರಿಸಿ ಮಾರುವದರಿಂದ ಅವುಗಳ ಬೆಲೆಗಳು (ಡಿಗಾ ಡಂಭೂಖೂಫ) ಹೆಚ್ಚಾಗುತ್ತವೆ, ಸಂಪಾದನೆಯಲ್ಲಿ ಸಾಕಷ್ಟು ವೃದ್ಧಿ ಆಗುತ್ತದೆ. ಈ ಉತ್ಪಾದನೆಯ ಕೆಲಸವನ್ನು ಖಾಸಗಿ ಸಂಸ್ಥೆಗಳು ನಿರ್ವಹಿಸುತ್ತವೆ.

## ಕೆಲಸದ ಹಂತಗಳು

ಹೈನೋದ್ಯಮದಲ್ಲಿ ಅನೇಕ ಹಂತದ ಕೆಲಸಗಳಿರುತ್ತವೆ. ಕೊಬ್ಬಿನ ಅಂಶವನ್ನು ಬೇರ್ಪಡಿಸಿ, ಹಾಲನ್ನು ಯಂತ್ರದ ಸಹಾಯದಿಂದ ಸಂಗ್ರಹಣೆ ಮಾಡುವದು ಇದಕ್ಕೆಲ್ಲ ತಂತ್ರಜ್ಞಾನದ ಸಹಾಯಬೇಕಾಗುತ್ತದೆ. ಹಾಲನ್ನು ಗಟ್ಟಿಮಾಡುವದು, ಮುಂದೆ ಹಾಲಿನ ಪುಡಿ ತಯಾರಿಸುವದು; ಇವುಗಳ ಜೊತೆಗೆ ರಾಸಾಯನಿಕ ಹಾಗೂ ಅನಗತ್ಯ ಸೂಕ್ಷ್ಮಾಣು ಜೀವಿಗಳಿಂದ ರಕ್ಷಣೆ, ನಿಯಂತ್ರಣ ಇರಬೇಕಾಗುತ್ತದೆ.

ನಮ್ಮ ದೇಶದಲ್ಲಿ ಹಾಲು ಕರೆಯುವ ಹಸು,

ಎಮ್ಮೆಗಳನ್ನು ರಕ್ಷಿಸಿ, ಬೆಳೆಸುವದು ಒಂದು ಕೆಲಸವಾದರೆ ಇನ್ನೊಂದು ಹಾಲಿನ ಸಂಗ್ರಹಣೆ, ವಿತರಣೆ. ಹಸು, ಎಮ್ಮೆಗಳು ಇಲ್ಲಿ ನೈಸರ್ಗಿಕ ಸಂಪನ್ಮೂಲಗಳು. ಇವುಗಳ ಆರೋಗ್ಯವನ್ನು ಸರಿಯಾಗಿ ನೋಡಿಕೊಳ್ಳಬೇಕಾದರೆ ಪಶು ವೈದ್ಯರು ಬೇಕಾಗುತ್ತಾರೆ. ಇಂಥ ವೈದ್ಯರುಗಳನ್ನು ತಯಾರಿಸಲು ಪ್ರತ್ಯೇಕ ಕಾಲೇಜುಗಳೇ ಇರುತ್ತವೆ. ಇಂಥ ಕಾಲೇಜುಗಳು ಸಾಧಾರಣವಾಗಿ ಕೃಷಿ ವಿಶ್ವವಿದ್ಯಾಲಯಕ್ಕೆ ಸೇರಿರುತ್ತವೆ. ಹಾಲು ಸಂಗ್ರಹಣೆಯನ್ನು ಸರಿಯಾದ ರೀತಿಯಲ್ಲಿ ಮಾಡಬೇಕೆಂದರೆ 'ಸಂಗ್ರಹಣ ಅಧಿಕಾರಿಗಳು' ಇರಬೇಕಾಗುತ್ತದೆ. ಈ ಅಧಿಕಾರಿಗಳು ಗ್ರಾಮೀಣ ಪ್ರದೇಶಗಳಿಗೆ ಭೇಟಿ ಕೊಟ್ಟು, ಅಲ್ಲಿಯ ಕೃಷಿ ಕಾರ್ಮಿಕರೊಂದಿಗೆ ಸಂಭಾಷಿಸಿ, ಪ್ರಭಾವ ಬೀರಿ ಸಂಗ್ರಹಣ ಕೆಲಸವನ್ನು ಬಲಪಡಿಸಬೇಕಾಗುತ್ತದೆ. ಸಾಮಾನ್ಯವಾಗಿ 'ಸಂಗ್ರಹಣ ಅಧಿಕಾರಿಗಳು' ಪಶುವೈದ್ಯಕೀಯ ಶಾಸ್ತ್ರದಲ್ಲಿ ಅಥವಾ ಕೃಷಿ ವಿಜ್ಞಾನದಲ್ಲಿ ಅಧ್ಯಯನ ಮಾಡಿದವರಾಗಿರುತ್ತಾರೆ. ಕೆಲವೊಂದು ಸಲ 'ಸಂಗ್ರಹಣ ಅಧಿಕಾರಿಗಳು' ಹೈನು ತಂತ್ರಜ್ಞಾನದ ಹಿನ್ನೆಲೆಯನ್ನು ಪಡೆದವರಾಗಿರುತ್ತಾರೆ. ಹಾಲು ಸಂಗ್ರಹಣೆಯಾದ ನಂತರ ಯಂತ್ರದ ಸ್ಥಳಕ್ಕೆ ಬಂದು, ಯಂತ್ರದ ಸಹಾಯದಿಂದ ಅನೇಕ ಉತ್ಪನ್ನಗಳನ್ನು ತಯಾರಿಸುವಲ್ಲಿ ಹೈನು ಶಾಸ್ತ್ರಜ್ಞರು ಬಹಳ ಉಪಯುಕ್ತರಾಗುತ್ತಾರೆ. ಯಂತ್ರಗಳನ್ನು ರಕ್ಷಿಸುವಲ್ಲಿ, ರಿಪೇರಿ ಮಾಡಿ, ಮತ್ತೆ ಕೆಲಸಕ್ಕೆ ಯಂತ್ರಗಳನ್ನು ಅಣಿಗೊಳಿಸುವಲ್ಲಿ ಇಂಜಿನಿಯರುಗಳ ಪಾತ್ರ ಬಹಳ ದೊಡ್ಡದು. ಮಾರಾಟ ವ್ಯವಸ್ಥೆಯನ್ನು 'ಜಾಲರೂಪ'ದಲ್ಲಿ ರಚಿಸಿ ಅದನ್ನು ಯಶಸ್ವಿಯಾಗಿ ನಡೆಸಿಕೊಂಡು ಹೋಗುವದು 'ಮೆನೇಜ್‌ಮೆಂಟ್' ಪರಿಣತರಿಗೆ ಬಿಟ್ಟದ್ದು. ಆದಕ್ಕೆಂದೇ ಆ ವಿಷಯದ ಪದವೀಧರರು ಬೇಕಾಗುತ್ತಾರೆ.

ಹೈನೋದ್ಯಮಕ್ಕೆ ಬರಬೇಕಾದರೆ ಪಶು ಶಾಸ್ತ್ರ, ಹೈನುತಂತ್ರಜ್ಞಾನ ಅಥವಾ ಇಂಜಿನಿಯರಿಂಗ್ ವಿಷಯಗಳಲ್ಲಿ ಜ್ಞಾನವಿರಲೇ ಬೇಕಾಗುತ್ತದೆ. ಬೌದ್ಧಿಕವಾಗಿ ತೀರ ಸಾಮಾನ್ಯರು 'ಕೊನೆಯ ಆಶ್ರಯ'ವೆಂದು ಕೆಲಸಕ್ಕಾಗಿ ಹೈನೋದ್ಯಮ ಕ್ಷೇತ್ರಕ್ಕೆ ಬರುವ ಕಾಲ ಈಗಿಲ್ಲ! ಬುದ್ಧಿವಂತರ ಆವಶ್ಯಕತೆ ಇದೆ. ತರಬೇತು, ಪರಿಣತಿ ಇದೆಲ್ಲ ಆವಶ್ಯಕ. ಅದಕ್ಕೆಂದೇ ದೊಡ್ಡ ಸಂಖ್ಯೆಯಲ್ಲಿ ಶಿಕ್ಷಣ ಸಂಸ್ಥೆಗಳು ಬೇಕು.

## ಅರ್ಹತೆ

ಹೈನು ತಂತ್ರಜ್ಞಾನಕ್ಕೆ ಸಂಬಂಧಿಸಿದ ಶಿಕ್ಷಣ ಸಂಸ್ಥೆಗಳನ್ನು ಸೇರಬೇಕಾದರೆ ಪಿ.ಯು.ಸಿ. ಅಥವಾ ತತ್ಸಮಾನ ಪರೀಕ್ಷೆಯನ್ನು, ಭೌತಶಾಸ್ತ್ರ, ರಸಾಯನಶಾಸ್ತ್ರ ಮತ್ತು ಗಣಿತಶಾಸ್ತ್ರಗಳೊಂದಿಗೆ ಕನಿಷ್ಠ ಶೇಕಡ ೫೫ ಅಂಕಗಳನ್ನು ಪಡೆದು ಪಾಸಾಗಿರಬೇಕು. ಇಷ್ಟಾದರೂ ಅಖಿಲ ಭಾರತ ಮಟ್ಟದ ಪರೀಕ್ಷೆ ಇದ್ದೇ ಇರುತ್ತದೆ. ಈ ಪರೀಕ್ಷೆಯಲ್ಲಿ ಮೇಲ್ಪಂಕ್ತಿಯಲ್ಲಿ ಪಾಸಾಗಬೇಕು. ಸ್ಪರ್ಧೆ ತೀವ್ರವಾಗಿರುವ ಕಾರಣ ಪರೀಕ್ಷಾ ಕ್ರಮ ಆವಶ್ಯಕ. ಹೈನು ತಂತ್ರಜ್ಞಾನದ ಡಿಪ್ಲೋಮ ಅವಧಿ ಎರಡು ವರುಷದ್ದು; ಮೊದಲನೆ ಪದವಿ ಪಡೆಯಬೇಕಾದರೆ ನಾಲ್ಕು ವರುಷಗಳ ಬಿ.ಟೆಕ್.ಗೆ (ಹೈನು ತಂತ್ರಜ್ಞಾನ) ಪ್ರವೇಶ ಪಡೆಯಬೇಕಾಗುತ್ತದೆ. ಪಠ್ಯಕ್ರಮದಲ್ಲಿ ಅನೇಕ ವಿಷಯಗಳು ಸೇರಿಸಲ್ಪಟ್ಟಿರುತ್ತವೆ. ಉದಾಹರಣೆ : ಡೇರಿ ಇಂಜಿನಿಯರಿಂಗ್, ಡೇರಿ ರಸಾಯನಶಾಸ್ತ್ರ ಡೇರಿ ಸೂಕ್ಷ್ಮಾಣು



### ಕರ್ನಾಟಕದಲ್ಲಿಯ ಶಿಕ್ಷಣ ಸಂಸ್ಥೆಗಳು

ಬಿ.ವಿ.ಎಸ್‌ಸಿ, ಪಶುಸಂಗೋಪನ, ಬಿ.ಎಸ್‌ಸಿ., ಡಿ.ಟೆಕ್.ಗಾಗಿ ಅಧ್ಯಯನ ಮಾಡಲು ಭಾರತದಾದ್ಯಂತ ಸುಮಾರು ೩೧ ಸಂಸ್ಥೆಗಳಿದ್ದು, ಪ್ರವೇಶ ಪರೀಕ್ಷೆಗೆ ಬಂದ ಎಲ್ಲ ವಿದ್ಯಾರ್ಥಿಗಳನ್ನು ಅವು ತೆಗೆದುಕೊಳ್ಳುವದು ಸಾಧ್ಯವಾಗುವದಿಲ್ಲ. ಇನ್ನೂ ಅನೇಕ ಶಿಕ್ಷಣ ಸಂಸ್ಥೆಗಳು ಪ್ರಾರಂಭವಾಗಬೇಕು. ಕರ್ನಾಟಕದಲ್ಲಿಯೂ ಈ ಕೆಳಗಿನ ಶಿಕ್ಷಣ ಸಂಸ್ಥೆಗಳತ್ತ ಗಮನ ಹರಿಸಬಹುದು.

೧) ವೆಟರ್ನ್‌ರಿ ಕಾಲೇಜ್, ಹೆಬ್ಬಾಳ್

೨) ವೆಟರ್ನ್‌ರಿ ಕಾಲೇಜ್, ಬೀದರ್

ಹೆಬ್ಬಾಳ್ ಕಾಲೇಜ್‌ನಲ್ಲಿ ಬಿ.ಎಸ್‌ಸಿ., ಬಿ.ವಿ.ಎಸ್‌ಸಿ., ಡಿ.ಟೆಕ್.ಗಳನ್ನು ಮತ್ತು ಬೀದರ್‌ನಲ್ಲಿ ಬಿ.ವಿ.ಎಸ್‌ಸಿ. ಎನಿಮಲ್ ಹಜಬಂಡ್ರಿ (AH) ವಿಷಯಗಳನ್ನು ಅಧ್ಯಯನ ಮಾಡಬಹುದು.

ಜೀವಿಶಾಸ್ತ್ರ ಅಂಕಿಸಂಖ್ಯೆ ಮತ್ತು ಗುಣಮಟ್ಟ ನಿಯಂತ್ರಣ ಇವುಗಳಲ್ಲದೆ ಉದ್ದಿಮೆ ನಡೆಸುವದೆಂತು, ಹಾಲಿನ ಯಂತ್ರಗಳ ಬಗ್ಗೆ (DAIRY PLANT) ಅವುಗಳ ನಿರ್ವಹಣೆ, ಲೆಕ್ಕ ಬರೆಯುವದು/ಇಡುವದು ಇವುಗಳ ಬಗ್ಗೆಯೂ ಅಧ್ಯಯನಕ್ಕೆ ಅವಕಾಶವಿದೆ.

### ಕೆಲಸಗಳ ಬಗ್ಗೆ

ಸಾರ್ವಜನಿಕ ಹಾಗೂ ಖಾಸಗಿ ಕ್ಷೇತ್ರಗಳಲ್ಲಿ ಅನೇಕ ಉದ್ದಿಮೆ ಸಂಸ್ಥೆಗಳು ಅಸ್ತಿತ್ವ ಪಡೆದಿವೆ, ಪಡೆಯುತ್ತಲೂ ಇವೆ. ಹೀಗಾಗಿ ಕೆಲಸ ಪಡೆಯುವದಕ್ಕೆ ಪೈಪೋಟಿ ನಡೆದೇ ಇರುತ್ತದೆ. ಕೆಲಸಕ್ಕೆ ಆಯ್ಕೆ ಮಾಡಿ ಸೇರಿಸಿಕೊಳ್ಳುವಾಗ ಸಹ ಸ್ಪರ್ಧಾತ್ಮಕ ಪರೀಕ್ಷೆಯನ್ನು ನಡೆಸುತ್ತಾರೆ, ಅಥವಾ ಕಡಿಮೆ ಸಂಖ್ಯೆಯಲ್ಲಿ ಅಭ್ಯರ್ಥಿಗಳಿದ್ದರೆ ತಾಂತ್ರಿಕ ಸಂದರ್ಶನದ ಮೂಲಕ ಅಂತಿಮ ಆಯ್ಕೆ ಮಾಡಲಾಗುತ್ತದೆ. ಹೈನು ಶಾಸ್ತ್ರದಲ್ಲಿ ಪರಿಣತಿ ಇದ್ದವರು ಬ್ಯಾಂಕ್‌ನಲ್ಲಿ ಸಹ ಕೆಲಸ ಪಡೆಯಬಹುದು. ಸ್ವಂತವಾಗಿ ಉದ್ದಿಮೆಗಳನ್ನು ನಡೆಸಬಹುದು, ಸಲಹೆಗಾರರಾಗಿಯೂ ಉದ್ಯೋಗದಲ್ಲಿ ತೊಡಗಿಸಿಕೊಳ್ಳಬಹುದು. ಬಡ್ತಿಗೂ ಸಹ (PROMOTION) ಸಾಕಷ್ಟು ಅವಕಾಶಗಳಿರುತ್ತದೆ. ಹಾಲು ಸಂಗ್ರಹಣ ಅಧಿಕಾರಿ ಒಳ್ಳೆಯ ಕೆಲಸ ಮಾಡಿ ಜನರಲ್ ಮೆನೇಜರ್‌ನ ಹಂತವನ್ನು ತಲುಪಬಹುದು. ಹಾಲಿನ ಸಂಸ್ಕರಣಕ್ಕೆ ಸೇರಿದಂತೆ ಅನೇಕರು ಅದರ ಸಂಪರ್ಕದಲ್ಲಿರುತ್ತಾರೆ, ಉದಾಹರಣೆ:- ಇಂಜಿನಿಯರುಗಳು, ಹೈನುಶಾಸ್ತ್ರ ತಂತ್ರಜ್ಞಾನಿಗಳು ಇವರೆಲ್ಲ ಅವರವರ ಬೌದ್ಧಿಕ ಶಕ್ತ್ಯಾನುಸಾರ, ಕರ್ತವ್ಯಶಕ್ತಿಯ ಆಧಾರದ ಮೇಲೆ ಜನರಲ್ ಮೆನೇಜರ್ ಆಗಬಹುದು, ಇನ್ನೂ ಹೆಚ್ಚಿಗೆ ಎಂದರೆ ಮೆನೇಜಿಂಗ್ ಡೈರೆಕ್ಟರ್ ಹುದ್ದೆಯನ್ನು ತಲುಪಬಹುದು. ಈ ಅವಕಾಶಗಳೊಂದಿಗೇ ತುಲನೆ ಮಾಡಿ ನೋಡುವದಾದರೆ ಇಂಜಿನಿಯರುಗಳಾಗಲಿ ಅಥವಾ ಆಹಾರಶಾಸ್ತ್ರ ಪರಿಣತರಿಗಾಗಲಿ ಅವಕಾಶಗಳು ಇತಿ-ಮಿತಿ ಇಲ್ಲದಂತಿರುತ್ತವೆ.

### ಇದು ಆತಂಕವಲ್ಲ

ಹೈನೋದ್ಯಮ ಹೆಚ್ಚಾಗಿ ಗ್ರಾಮೀಣ ಪ್ರದೇಶಗಳಲ್ಲಿಯೇ ಇರುವದರಿಂದ, ಪಟ್ಟಣಗಳಿಂದ ದೂರವಾಗಿರುವದರಿಂದ, ಆಧುನಿಕ ಸೌಲಭ್ಯಗಳು ಹೆಚ್ಚಾಗಿರುವದಿಲ್ಲ. ದೂರದರ್ಶನದ ಸೌಲಭ್ಯವಿರುವದರಿಂದ ಸಿನಿಮಾ ಮಂದಿರಗಳ ಅವಶ್ಯಕತೆಯೂ ಇರುವದಿಲ್ಲ. ಆಟ-ಪಾಟಗಳಿಗೆ ಹೊಸ ವ್ಯವಸ್ಥೆಗಳನ್ನು ಮೆನೇಜ್‌ಮೆಂಟ್ ಸಹಕಾರ-ಸಹಾಯದೊಂದಿಗೆ ನಿರ್ಮಿಸಬಹುದು. ಮಕ್ಕಳಿಗೆ ಶಾಲೆಗಳ ವ್ಯವಸ್ಥೆಯನ್ನೂ ಮಾಡಬಹುದು. ಒಂದೇ ಒಂದು ಗಮನಾರ್ಹ ವಿಷಯವೆಂದರೆ ಕಲುಷಿತಗೊಳ್ಳದ ಹವೆ ಇರುವದರಿಂದ ಔಷಧಿಗಳಿಲ್ಲದೆ ಅನಾತಂಕ ಜೀವನ ನಡೆಸಬಹುದು. ಎಲ್ಲರಿಗೂ ಪ್ರಿಯವಾದ ಆರ್ಥಿಕ ಉಳಿತಾಯವನ್ನು ಮಾಡಬಹುದು. ಹಾಲು ಬೇಗ ನಾಶವಾಗುವ ವಸ್ತುವಾದ್ದರಿಂದ ಅದನ್ನು ರಕ್ಷಿಸಲು ಜಾಗರೂಕರಾಗಿರುವದರ ಜೊತೆಗೇ ಕಠಿಣ ಪರಿಶ್ರಮವನ್ನೂ ವಹಿಸಬೇಕಾಗುತ್ತದೆ.

### ಸಂಭಾವನೆ

ತೀರ ಸಾಮಾನ್ಯ ಭಾಷೆಯಲ್ಲಿ ಹೇಳುವದಾದರೆ ತರಬೇತು ಪಡೆಯುತ್ತಿರುವ ವಿದ್ಯಾರ್ಥಿಗೆ ವೇತನ ತಿಂಗಳಿಗೆ ರೂ. ೧,೨೦೦ ಅಷ್ಟಿರುತ್ತದೆ. ಮುಂದೆ ಅಧಿಕಾರಿಗಳಾದ ಮೇಲೆ

---

ಸಂಬಳದ ಒಟ್ಟು ಮೊತ್ತ ತಿಂಗಳಿಗೆ ೫-೬ ಸಾವಿರ ರೂಪಾಯಿಗಳು. ಜನರಲ್ ಮೆನೇಜರುಗಳು, ಸುಮಾರು ಹತ್ತು ವರುಷಗಳ ಅನುಭವದ ನಂತರ ಪರಿಣತರಾಗಿ ತಿಂಗಳಿಗೆ ಸುಮಾರು ೧೫,೦೦೦ ರೂಪಾಯಿಗಳಷ್ಟು ಸಂಬಳ ಪಡೆಯುವರು. ಸಾಕಷ್ಟು ಕೆಲಸಗಳು ಹೊಸದಾಗಿ ಬರುತ್ತಿರುವದರಿಂದ ಒಳ್ಳೆಯ ಬುದ್ಧಿವಂತ ಇಂಜನಿಯರುಗಳನ್ನು ಪಡೆಯುವದೂ ಉದ್ದಿಮೆಗಳಿಗೆ ಪೈಪೋಟಿಯ ಕೆಲಸವಾಗಿ ಪರಿಣಮಿಸಿದೆ. ವಿದ್ಯಾರ್ಥಿಗಳಿಗೆ ಒಂದೇ ಒಂದು ಕಿವಿ ಮಾತೆಂದರೆ ಸಂಬಂಧಿಸಿದ ಪುಸ್ತಕಗಳನ್ನು ಓದುವದನ್ನು ಎಂದೂ ಬಿಡಕೂಡದು. ಅನುಭವಿಗಳೊಂದಿಗೆ ವಿಷಯದ ಬಗ್ಗೆ ಮೇಲಿಂದ ಮೇಲೆ ಚರ್ಚೆ ಮಾಡುವದು. ಆಗಾಗ ಪರಿಣತರಿಂದ ನಡೆಸಲ್ಪಟ್ಟ ಕಾರ್ಯಾಗಾರಗಳಲ್ಲಿ ಭಾಗವಹಿಸುವದು. ಒಟ್ಟಿನ ಮೇಲೆ ಸಮಯದ ಸದುಪಯೋಗವಾಗಬೇಕು; ಸಮಯವನ್ನು ಅಮೂಲ್ಯವನ್ನಾಗಿ ಮಾಡಿ ಭವಿಷ್ಯದಲ್ಲಿ ತೊಡಗಿಸಬೇಕು.

### ಭವಿಷ್ಯದಲ್ಲಿ ಉದ್ದಿಮೆ

ಹೈನೋದ್ಯಮ ನಮ್ಮ ದೇಶದಲ್ಲಿ ಶರವೇಗದಿಂದ ಬೆಳೆಯುತ್ತಲಿದೆ. ಬೆಂಗಳೂರಿನಲ್ಲಿ ಮನೆಯ ಮುಂದೇ ಹಸು ನಿಲ್ಲಿಸಿ ಕರೆಯುವ ಹಿಂದಿನ ಪರಿಪಾಠ ಈಗ ಕಷ್ಟಪಟ್ಟು ನೋಡಬೇಕಾಗುತ್ತದೆ. ಇದರರ್ಥ ಉದ್ದಿಮೆಯ ಬೆಳವಣಿಗೆಯ ವೇಗವನ್ನು ಸೂಚಿಸುತ್ತದೆ. ಪ್ರತಿಶತ ಐದರಷ್ಟು ಡೇರಿಗೆ ಬರುವ ಹಾಲು ಈಗ ಹತ್ತರಷ್ಟಾಗಿದೆ. ಈ ಕ್ಷೇತ್ರ ನಮ್ಮ ದೇಶಕ್ಕೂ ಹೊಸದಾದ್ದರಿಂದ ಬೆಳವಣಿಗೆಗೆ ಸಾಕಷ್ಟು ಅವಕಾಶವಿದೆ. ಕುಟುಂಬದಲ್ಲಿ ಹಿಂದಿನವರು ಈ ಕ್ಷೇತ್ರಕ್ಕೆ ಕಾಲಿಡದೆ ಇರಬಹುದು ಎಂದ ಮಾತ್ರಕ್ಕೆ ಮಕ್ಕಳನ್ನು ಹೈನೋದ್ಯಮ ಕ್ಷೇತ್ರಕ್ಕೆ ಕಳಿಸಲು ತಂದೆ-ತಾಯಂದಿರು ಹಿಂದೇಟು ಹಾಕುವ ಆವಶ್ಯಕತೆ ಇಲ್ಲ. ರಾಷ್ಟ್ರೀಯ ಜೀವನ ಶೈಲಿ ಹೊಸದಾಗಿ ರೂಪುಗೊಳ್ಳುತ್ತಿರುವದರಿಂದ ಹೊಸ ವೃತ್ತಿಯ ಕರೆಗೆ ನಾವು ಓಗೊಡಬೇಕಾಗುತ್ತದೆ. ●

# ಸೇನೆಯಲ್ಲಿ ಉದ್ಯೋಗಾವಕಾಶ

**ಭಾ**ರತೀಯ ಸೇನೆಯಲ್ಲಿ ಅಲ್ಪಾವಧಿಯ ಸೇವೆಗಾಗಿ ಪುರುಷ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಐವತ್ತು ಹುದ್ದೆಗಳಿರುವ ಈ ವೃತ್ತಿಗೆ ಸೇರಬಯಸುವವರು ಅವಿವಾಹಿತರಾಗಿದ್ದು ೧೯ ರಿಂದ ೨೫ ವರ್ಷದೊಳಗಿನವರಾಗಿರಬೇಕು.

ಎನ್‌ಸಿಸಿ 'ಸಿ' ದರ್ಜೆ ಸರ್ಟಿಫಿಕೇಟ್ ಇದ್ದವರು ನ. ೧ರೊಳಗೆ ನೇರವಾಗಿ ಚೆನ್ನೈನ Short service course (Non-Technical) Officer training Academyಯನ್ನು ಸಂಪರ್ಕಿಸಬಹುದಾಗಿದೆ.

### ಅರ್ಹತೆ

ಶೇ. ೫೦ ಅಂಕಗಳೊಂದಿಗೆ ಪದವಿ ಪಡೆದು ಕನಿಷ್ಠ ಎರಡು ವರ್ಷಗಳ ಕಾಲ ಎನ್.ಸಿ.ಸಿ.ಯಲ್ಲಿ ಸೇವೆ ಸಲ್ಲಿಸಿದವರು ಅರ್ಜಿ ಸಲ್ಲಿಸಬಹುದು. ಸಂದರ್ಶನ, ವೈದ್ಯಕೀಯ ಪರೀಕ್ಷೆ ಇನ್ನೂ ಮುಂತಾದ ಕ್ರಮಗಳಲ್ಲಿ ಅಭ್ಯರ್ಥಿಗಳನ್ನು ಆಯ್ಕೆ ನಡೆಸಲಾಗುತ್ತದೆ.

### ದೈಹಿಕ ಅರ್ಹತೆ

ಕನಿಷ್ಠ ೪೫ ಕೆಜಿ ತೂಕ ಹಾಗೂ ೧೫೭ ಸೆ.ಮೀ. ಉದ್ದ ಇದ್ದು ಸಮರ್ಪಕ ದೃಷ್ಟಿ ಮತ್ತು ಉತ್ತಮ ದೇಹದಾರ್ಢ್ಯದಿಂದ ಕೂಡಿರಬೇಕು.

### ತರಬೇತಿ ಮತ್ತು ವೇತನ

ಆಯ್ಕೆ ಆದ ಅಭ್ಯರ್ಥಿಗಳಿಗೆ ೯ ತಿಂಗಳ ತರಬೇತಿ ನೀಡಿ ತಕ್ಕ ಹುದ್ದೆ ನೀಡಲಾಗುವುದು. ವೇತನ ಆಯೋಗದ ಶಿಫಾರಸಿನಂತೆ ಆಕರ್ಷಕ ವೇತನ, ಟಿ.ಎ.ಡಿ.ಎ, ರಿಯಾಯಿತಿ ಪ್ರಯಾಣವನ್ನು ಹಾಗೂ ಇತರ ರಜೆಯ ಸೌಲಭ್ಯಗಳಿರುತ್ತವೆ.

ಅರ್ಜಿ ಸಲ್ಲಿಸುವವರು ಸೆ. ೨೮ರ ಇಂಡಿಯನ್ ಎಕ್ಸ್‌ಪ್ರೆಸ್‌ನ ಜಾಹಿರಾತಿನಲ್ಲಿ ಪ್ರಕಟವಾಗಿರುವ ಮಾದರಿಯಂತೆ ಅರ್ಜಿ ತುಂಬಿ ಅಗತ್ಯವಿರುವ ದಾಖಲೆಗಳೊಂದಿಗೆ ನ. ೩೦ರೊಳಗೆ ತಲುಪುವಂತೆ ಕಳುಹಿಸಬೇಕು. ●




## ಅರ್ಜಿ ಆಹ್ವಾನ

**ಭಾ**ರತೀಯ ವಾಯುಪಡೆಯು ತಾಂತ್ರಿಕ ವಿಭಾಗದ ಏರ್‌ಮನ್ ಗ್ರೂಪ್-೨ ಹುದ್ದೆಗಳಿಗೆ ಅವಿವಾಹಿತ ಪುರುಷ ಅಭ್ಯರ್ಥಿಗಳಿಂದ ಅರ್ಜಿ ಆಹ್ವಾನಿಸಿದೆ. ಅಭ್ಯರ್ಥಿಳು ಎಸ್ಸೆಸ್ಸೆಲ್ಸಿ ಪಾಸಾಗಿದ್ದು ಇಂಗ್ಲೀಷ್, ಗಣಿತ, ವಿಜ್ಞಾನದಲ್ಲಿ ಶೇ. ೬೦ರಷ್ಟು ಅಂಕ ಗಳಿಸಿರಬೇಕು. ೧೯೭೯ರ ಎಪ್ರಿಲ್ ೩೦ ಮತ್ತು ೧೯೮೨ರ ಎಪ್ರಿಲ್ ೩೦ರ ಅವಧಿಯಲ್ಲಿ ಜನಿಸಿರಬೇಕು.

ಭರ್ತಿ ಮಾಡಿದ ಅರ್ಜಿಗಳನ್ನು ಕೇಂದ್ರೀಯ ಏರಮನ್ ಆಯ್ಕೆ ಮಂಡಲಿ, ಅಂಚೆಪೆಟ್ಟಿಗೆ ನಂ. ೩೦೦೪, ನವದೆಹಲಿ-೩ ಇವರಿಗೆ ಅ. ೨೭ರೊಳಗೆ ಕಳುಹಿಸಬೇಕು. ನಿಗದಿತ ಅರ್ಜಿ ನಮೂನೆಗಳು ಅ. ೬ರಿಂದ ಏರ್‌ಮನ್ ಆಯ್ಕೆ ಕೇಂದ್ರ, ನಂ. ೧, ಕಬ್ಬನ್‌ರಸ್ತೆ, ಬೆಂಗಳೂರು-೧ ಈ ಕಚೇರಿಯಲ್ಲಿ ಬೆಳಿಗ್ಗೆ ೧೦ರಿಂದ ಮಧ್ಯಾಹ್ನ ೧೨ರ ವರೆಗೆ ದೊರಕುತ್ತವೆ. ಹೆಚ್ಚಿನ ವಿವರಗಳಿಗೆ ಸೆ. ೨೭ರ ಎಂಪ್ಲಾಯ್‌ಮೆಂಟ್ ನ್ಯೂಸ್ ಪತ್ರಿಕೆಯನ್ನು ನೋಡಬಹುದು.

## ಅಣಬೆ ಬೇಸಾಯ

**ಬೆಂ**ಗಳೂರಿನ ಹೆಸರಘಟ್ಟದಲ್ಲಿರುವ ಭಾರತೀಯ ತೋಟಗಾರಿಕ ಸಂಶೋಧನಾ ಸಂಸ್ಥೆ ನವೆಂಬರ್ ೧೧ರಂದು ಚಿಪ್ಪು ಅಣಬೆ ಬೇಸಾಯ ಕುರಿತು ತರಬೇತಿಯನ್ನು ನೀಡಲಿದೆ. ತರಬೇತಿಯರು ಆಂಗ್ಲ ಭಾಷೆಯಲ್ಲಿ ನಡೆಯುವುದು. ತರಬೇತಿಯಲ್ಲಿ ಸುಮಾರು ೩೦ ಮಂದಿಗೆ ಸ್ಥಳವಕಾಶವಿದ್ದು, ಮೊದಲು ಬಂದವರಿಗೆ ಆದ್ಯತೆ ನೀಡಲಾಗುವುದು. ಹೆಚ್ಚು ಅರ್ಜಿಗಳು ಬಂದಲ್ಲಿ ದಿನಾಂಕವನ್ನು ನಂತರ ಗೊತ್ತು ಮಾಡಲಾಗುವುದು ಎಂದು ಸಂಸ್ಥೆ ಪ್ರಕಟಿಸಿದೆ.

ತರಬೇತಿಯ ಶುಲ್ಕ ರೂ. ೫೦೦. ಹೆಚ್ಚಿನ ಮಾಹಿತಿಗೆ ತರಬೇತಿ ಕೇಂದ್ರದ ಮುಖ್ಯಸ್ಥರು, ಭಾರತೀಯ ತೋಟಗಾರಿಕ ಸಂಶೋಧನಾ ಸಂಸ್ಥೆ, ಹೆಸರಘಟ್ಟ, ಬೆಂಗಳೂರು-೫೬೦ ೦೮೯. ದೂರವಾಣಿ: ೮೪೬೬೪೨೦.

## ಪ್ರಶಸ್ತಿಗೆ ಅರ್ಜಿ

ಇಂಧನದ ಉತ್ತಮ ಬಳಕೆ ಮತ್ತು ಸಂರಕ್ಷಣೆಗಾಗಿ ಸಣ್ಣ ಕೈಗಾರಿಕೆಗಳಿಗೆ ನೀಡಲಾಗುವ ೧೯೯೭ನೇ ಸಾಲಿನ ರಾಷ್ಟ್ರೀಯ ಇಂಧನ ಸಂರಕ್ಷಣಾ ಪ್ರಶಸ್ತಿಗಾಗಿ ಕೇಂದ್ರ ಸರ್ಕಾರದ ಇಂಧನ ಸಚಿವಾಲಯ ಅರ್ಜಿ ಆಹ್ವಾನಿಸಿದೆ.

ಅರ್ಜಿಗಳನ್ನು ಪ್ರಶ್ನಾವಳಿಗಳ ದ್ವಿಪ್ರತಿ, ಪೂರಕ ಪ್ರಮಾಣ ಪತ್ರ ಹಾಗೂ ಸಂಬಂಧಿಸಿದ ಕಂಪನಿಗಳ ೧೯೯೪-೯೭ರವರೆಗಿನ ಲೆಕ್ಕ ಪರಿಶೋಧನಾ ವರದಿಗಳೊಂದಿಗೆ ಸೆ. ೩೦ರ ಒಳಗೆ ಅಧೀನ ಕಾರ್ಯದರ್ಶಿ (ಇಂಧನ ಸಂರಕ್ಷಣೆ), ಇಂಧನ ಸಚಿವಾಲಯ, ನಿರ್ಮಾಣ ಭವನ, 'ಎಫ್' ವಿಂಗ್, ೨ನೇ ಮಹಡಿ, ಮೌಲಾನ ಆಜಾದ್ ರಸ್ತೆ, ನವದೆಹಲಿ - ೧೧ ಇವರಿಗೆ ಕಳುಹಿಸಲು ಕೋರಲಾಗಿದೆ.

ಆಸಕ್ತರು ಹೆಚ್ಚಿನ ವಿವರಗಳಿಗೆ ಸಣ್ಣ ಕೈಗಾರಿಕೆಗಳ ಸೇವಾ ಕೇಂದ್ರ, ರಾಜಾಜಿನಗರ ಕೈಗಾರಿಕಾ ಪ್ರದೇಶ, ಬೆಂಗಳೂರು - ೪೪ (ದೂರವಾಣಿ ೩೩೫೧೮೮೧) ಇಲ್ಲಿ ಸಂಪರ್ಕಿಸಬಹುದು.

## ತರಬೇತಿ

ಕೆನರಾ ಬ್ಯಾಂಕಿನ ಎ.ಡಿ.ಪೈ ಗ್ರಾಮೀಣಾಭಿವೃದ್ಧಿ ಸಂಸ್ಥೆಯು ನವಂಬರ್ ೨ನೇ ವಾರದಿಂದ ಒಂದು ತಿಂಗಳ ಅವಧಿಯ ಉಚಿತ ಫ್ಯಾಬ್ರಿಕೇಶನ್ ಮತ್ತು ವೆಲ್ಡಿಂಗ್ ತರಬೇತಿ ಶಿಬಿರವನ್ನು ಏರ್ಪಡಿಸಲಿದೆ. ತರಬೇತಿ ಅವಧಿಯಲ್ಲಿ ಉಚಿತ ಊಟ ಮತ್ತು ವಸತಿ ಸೌಲಭ್ಯವನ್ನು ನೀಡಲಾಗುವುದು.

ವೆಲ್ಡಿಂಗ್‌ನಲ್ಲಿ ಡಿಪ್ಲೊಮಾ ಪದವಿ ಅಥವ ಕನಿಷ್ಠ ಎಸ್.ಎಸ್.ಎಲ್.ಸಿ. ವ್ಯಾಸಂಗ ಮಾಡಿ ವೆಲ್ಡಿಂಗ್‌ನಲ್ಲಿ ಸ್ವಂತ ಉದ್ದಿಮೆ ಪ್ರಾರಂಭಿಸಲು ಇಚ್ಚಿಸುವ ೧೮ ರಿಂದ ೩೫ ವರ್ಷ ವಯೋಮಾನದೊಳಗಿನ ಅಭ್ಯರ್ಥಿಗಳು ತರಬೇತಿ ಶಿಬಿರದಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ.

ಅರ್ಜಿಯನ್ನು ನಿರ್ದೇಶಕರು, ಎ.ಡಿ.ಪೈ. ಗ್ರಾಮೀಣಾಭಿವೃದ್ಧಿ ಸಂಸ್ಥೆ, ವಾಜರಹಳ್ಳಿ, ಮಂಚನಾಯಕನ ಹಳ್ಳಿ ಅಂಚೆ, ಬಿಡದಿ ಹೋಬಳಿ, ನೆಲಮಂಗಲ ತಾಲ್ಲೂಕು. ಬೆಂಗಳೂರು ಗ್ರಾಮಾಂತರ ಜಿಲ್ಲೆ - ೫೬೨ ೧೦೯ ಈ ವಿಳಾಸಕ್ಕೆ ಅ.೧೮ರೊಳಗೆ ಸಲ್ಲಿಸಲು ಕೋರಲಾಗಿದೆ.

## ರನ್ನ ಪ್ರಶಸ್ತಿ

ಪಂಪ ಮಹಾಕವಿ ವಿದ್ಯಾಸಂಸ್ಥೆಯು ಪ್ರತಿವರ್ಷ ಕನ್ನಡದ ಶ್ರೇಷ್ಠ ಸಾಹಿತಿಗೆ 'ರನ್ನ ಪ್ರಶಸ್ತಿ' ನೀಡುತ್ತಿದ್ದು, ೧೯೯೭ನೇ ಸಾಲಿಗಾಗಿ ಅರ್ಹ ಸಾಹಿತಿಯ ಹೆಸರನ್ನು ಸೂಚಿಸಲು ಸಾರ್ವಜನಿಕರಿಗೆ ಮನವಿ ಮಾಡಿದೆ.

ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಸೇವೆ ಸಲ್ಲಿಸಿದ, ಅದರಲ್ಲೂ ಹಳೆಗನ್ನಡ, ನಡುಗನ್ನಡದಲ್ಲಿ ಸಾಹಿತ್ಯ ರಚಿಸಿದವರಿಗೆ ಆದ್ಯತೆ ನೀಡಲಾಗುವುದು. ಪ್ರಶಸ್ತಿಯು ಪ್ರಶಸ್ತಿ ಫಲಕ ಹಾಗೂ ರೂ. ೫ ಸಾವಿರ ನಗದನ್ನು ಒಳಗೊಂಡಿರುವುದು.

ಹೆಸರುಗಳನ್ನು ಜಿ.ಡಿ. ಕಾಂತರಾಜ್, ಕಾರ್ಯದರ್ಶಿ, ಪಂಪ ಮಹಾಕವಿ ವಿದ್ಯಾಸಂಸ್ಥೆ, ೧೧೭೦ ಎಚ್‌ಐಜಿ, ೧೦ನೇ ಬಿ. ಕ್ರಾಸ್, ಯಲಹಂಕ, ಬೆಂಗಳೂರು-೬೪ ಇವರಿಗೆ ಅ. ೨೫ರೊಳಗೆ ಕಳುಹಿಸಬೇಕು.

## ಕಿಲ ಕಿಲ
## ಕೂಪನ್ - ೫

ಹೆಸರು..........................................................

ತರಗತಿ..........................................................

ವಯಸ್ಸು..........................................................

ತಂದೆ..........................................................

ತಾಯಿ..........................................................

ವಿಳಾಸ..........................................................

..........................................................

..........................................................

..........................................................

## ಜಾಣ ವಿದ್ಯಾರ್ಥಿ -೧

ಹೆಸರು :..........................................................

ತಂದೆ :..........................................................

ಅಂಚೆ ವಿಳಾಸ :..........................................................

..........................................................

..........................................................

ಶಾಲೆ / ಕಾಲೇಜು : ..........................................................

ತರಗತಿ : ..........................................................

೯೦ ರೂ. ಎಂ.ಓ. ಮಾಡಿದ ದಿನಾಂಕ :....................

ಮುಖ್ಯೋಪಾಧ್ಯಾಯರು / ಪ್ರಾಂಶುಪಾಲರ

ವಿದ್ಯಾರ್ಥಿ ಸಹಿ ಸಹಿ - ಶೀಲು

## ಮನೆ -೨

**ಮನೆ** ಎಂದರೆ..........................................

ಹೆಸರು :

ವಿಳಾಸ :

ಸಹಿ

# ಸಾವಿರ ರೂಪಾಯಿ ಸವಾಲು !

### ಮನೆ ಎಂದರೆ ಏನು?

**ಇದು ಸಾಮಾನ್ಯ ಪ್ರಶ್ನೆಯಲ್ಲ ; ಸಾವಿರ ರೂಪಾಯಿ ಸವಾಲು ! ನಿಮ್ಮ ಊಹಾಶಕ್ತಿಯನ್ನು ಪರೀಕ್ಷಿಸುವ ಈ ಪ್ರಶ್ನೆಗೆ ಸರಿಯಾದ ಉತ್ತರ ಕಳಿಸಿದವರಿಗೆ ಸಾವಿರ ರೂಪಾಯಿ ಬಹುಮಾನ ನೀಡಲಾಗುವುದು.**

ದೊಡ್ಡವರು, ಚಿಕ್ಕವರು, ಹೆಂಗಸರು, ಗಂಡಸರು, ವಿದ್ಯಾರ್ಥಿಗಳು, ಯುವಕರು, ಯುವತಿಯರು, ಗೃಹಿಣಿಯರು ಹೀಗೆ ಯಾರಾದರೂ ಈ ವಿನೂತನ ಸ್ಪರ್ಧೆಯಲ್ಲಿ ಭಾಗವಹಿಸಬಹುದು.

- ನಿಮ್ಮ ಉತ್ತರ ಒಂದೇ ವಾಕ್ಯದಲ್ಲಿರಬೇಕು. ಪಕ್ಕದಲ್ಲಿರುವ ಮನೆ -೨ ಕೂಪನ್‌ನನ್ನು ಭರ್ತಿ ಮಾಡಿ ಕಳಿಸಿ. ಒಬ್ಬರು ಎಷ್ಟಾದರೂ ಕೂಪನ್ ಕಳಿಸಬಹುದು.
- ಮೊದಲ ಸುತ್ತಿನಲ್ಲಿ ಸರಿಯುತ್ತರ ಲಭಿಸದಿದ್ದರೆ ಮುಂದಿನ ಸಂಚಿಕೆಯಲ್ಲಿ ಒಂದು ಸುಳಿವು ನೀಡಲಾಗುವುದು. ಆಗ ಸರಿಯುತ್ತರ ಕಳಿಸಿದರೆ ರೂ. 500 ಬಹುಮಾನ ದೊರೆಯುತ್ತದೆ.
- ಒಂದಕ್ಕಿಂತ ಹೆಚ್ಚು ಸರಿಯುತ್ತರ ಬಂದರೆ ಲಾಟರಿ ಮೂಲಕ ವಿಜೇತರನ್ನು ನಿರ್ಧರಿಸಲಾಗುವುದು.
- ಕೂಪನ್ ತಲುಪಲು ಅಂತಿಮ ದಿನಾಂಕ : **5-11-1997**

**ಬಿಸಿಲ ಬದುಕು ಮಾಸ ಪತ್ರಿಕೆ**

**ಅಂಚೆ ಪೆಟ್ಟಿಗೆ : 7951 ಬಸವೇಶ್ವರನಗರ, ಬೆಂಗಳೂರು - 560 079**

# ಕ್ಲಾಸ್ ರೂಂ

## ಮಿಸ್ಟರ್ ಅಜೀತಾ!

**ನಾ**ನು ಡಿಪ್ಲೋಮಾ ಪ್ರಥಮ ವರ್ಷದ ವಿದ್ಯಾರ್ಥಿಯಾಗಿದ್ದಾಗ ಪಾರ್ಟ್‌ಟೈಂಲೆಕ್ಚರ್‌ರೊಬ್ಬರು ಮೊದಲ ದಿವಸ ಹಾಜರಿ ತೆಗೆದು ಕೊಳ್ಳುತ್ತಾ 'ಮಿಸ್ಟರ್' ಎಂಬ ಪದ ಉಪಯೋಗಿಸುತ್ತಿದ್ದರು. ಒಬ್ಬ ಹುಡುಗಿಯ ಹೆಸರನ್ನು 'ಅಜೀತಾ' ಎನ್ನುವ ಬದಲು ಬೇಗನೆ 'ಮಿಸ್ಟರ್ ಅಜಿತ್' ಎಂದು ಸಂಭೋಧಿಸಿದ್ದರು. ಆಗ ಕ್ಲಾಸ್‌ರೂಂ ಐದು ನಿಮಿಷ ನಗೆಗಡಲಲ್ಲಿ ತೇಲಾಡಿತ್ತು.

**– ಜಯತೀರ್ಥ ಶರ್ಮಾ**
ಗುರುಮಠಕಲ್

## ಏಳು ಕೋಟಿ !

**ನಾ**ನು ಅಂತಿಮ ಬಿ.ಎ. ಓದುತ್ತಿದ್ದಾಗ, ನಮ್ಮ 'ಕಾಲೇಜು ಡೇ' ಪ್ರಯುಕ್ತ ಕೆಲವು ಸ್ಪರ್ಧೆ ಏರ್ಪಡಿಸಿದ್ದರು. ಮೋಜಿನ ಉಡುಪಿನ ಸ್ಪರ್ಧೆಯಲ್ಲಿ ನಾನು 'ಏಳುಕೋಟಿ ಮೈಲಾರಲಿಂಗಪ್ಪ'ನ ಉಡುಪು ಧರಿಸಿದ್ದೆ. ಅದಕ್ಕೆ ಪ್ರಥಮ ಬಹುಮಾನ ಸಿಕ್ಕಿತ್ತು. ಅರ್ಥಶಾಸ್ತ್ರದ ಉಪನ್ಯಾಸಕರು ಪಾಠ ಮಾಡುವಾಗ ಉದಾಹರಣೆಯಾಗಿ ಅಂಕಿ ಅಂಶಗಳು ೭ ಕೋಟಿ ಇರಬಹುದೆಂದರು. ಆಗ ನಮ್ಮ ತರಗತಿಯಲ್ಲಿ ಒಬ್ಬ ಹುಡುಗ ಎದ್ದು ಸರ್ ಇರಬಹುದು ಅಂತ ಅಂತೀರಲ್ಲ ಸಾರ್? ಇಲ್ಲೇ ಇದ್ದಾರೆ. ಏಳುಕೋಟಿ ಅಂದನು. ಆಗ ನಮ್ಮ ತರಗತಿಯಲ್ಲಿ ಎಲ್ಲರು ನಗೆಗಡಲಿನಲ್ಲಿ ತಲ್ಲೀನರಾಗಿದ್ದರು.

**– ಕೊಟ್ಟೂರು ಸುಧಾ,** ಹ್ಯಾಳ್ಯಾ

## ಮಾಸ್ತರರ ರಾಜ್ಯ

**ನ**ಮ್ಮ ತಂದೆಯವರು ಪ್ರಾಥಮಿಕ ಶಾಲೆಯ ಮುಖ್ಯೋಪಾಧ್ಯಾಯರು, ಒಮ್ಮೆ ಅವರ ಶಾಲೆಗೆ ಮೇಲಾಧಿಕಾರಿಗಳು ಬಂದು ಮಕ್ಕಳ ಬುದ್ಧಿಮತ್ತೆಯನ್ನು ಪರೀಕ್ಷಿಸಲು ಭಾರತದ ನಕ್ಷೆಯಲ್ಲಿನ ಕರ್ನಾಟಕವನ್ನು ತೋರಿಸುತ್ತಾ ''ಇದು ಯಾವ ರಾಜ್ಯ?'' ಎಂದು ಪ್ರಶ್ನಿಸಿದರಂತೆ.

ಎಲ್ಲ ಮಕ್ಕಳೂ ಏನು ತಿಳಿಯದೇ ಅತ್ತಿತ್ತ ನೋಡುತ್ತಿದ್ದರು. ಆ ಕ್ಲಾಸಿನ ಗುರುಗಳು ಬಾಗಿಲ ಬಳಿ ನಿಂತು ನಮ್ಮ ರಾಜ್ಯ ಎನ್ನಿ ಎಂದು ಸನ್ನೆ ಮಾಡಿ ತಮ್ಮ ಎದೆಯನ್ನು ಮುಟ್ಟುತ್ತಾ ತೋರಿಸುತ್ತಿದ್ದರು. ಆಗ ಎಲ್ಲಾ ಮಕ್ಕಳೂ ಎದ್ದುನಿಂತು, ಇದು ಶಿವಲಿಂಗಯ್ಯ ಮಾಸ್ತರರ ರಾಜ್ಯ ಎಂದು ಒಕ್ಕೊರಲಿನಿಂದ ಕೂಗಿದರಂತೆ.

**–ಶಿವಕುಮಾರ ಎಸ್.ಪೂಜಾರ**
ಕುಕನೂರ

## ಉಪಾಯದಲ್ಲಿ ಅಪಾಯ

**ನಾ**ನು ಪಿ.ಯು.ಸಿ. ಓದುತ್ತಿದ್ದೆ. ಇಂಗ್ಲೀಷ್ ಉಪನ್ಯಾಸಕರು ಸರಿಯಾಗಿ ಪಾಠ ಮಾಡುತ್ತಿರಲಿಲ್ಲ. ಅವರ ಬದಲಿಗೆ ಇನ್ನೊಬ್ಬರು ಉಪನ್ಯಾಸಕರು ಬರುತ್ತಿದ್ದರು. ಅವರು ಉಪನ್ಯಾಸ ಮಾಡುವಾಗ ''ಅಂಡರ್‌ಸ್ಟ್ಯಾಂಡ್ ಅಂಡರ್‌ಸ್ಟ್ಯಾಂಡ್'' ಎಂದು ಮಾತು ಮಾತಿಗೂ ಬಳಸುತ್ತಿದ್ದರು.

ಆಗ ನನ್ನ ಸ್ನೇಹಿತ ಅರುಣ್ ''ಎಸ್ಸಾರ್'' ಎಂದು ಉತ್ತರಿಸಿದ. ಆಗ ಉಪನ್ಯಾಸಕರಿಗೆ ಹೇಗಾಯಿತೋ ಏನೊ, ಅಂದಿನಿಂದ ನಮಗೆ ಉಪನ್ಯಾಸಕರೂ ಇಲ್ಲ, ಉಪನ್ಯಾಸವೂ ಇಲ್ಲ.

**– ಹೆಚ್.ಟಿ.ಹೆಚ್,** ಹೊಸಹಳ್ಳಿ

## ಹೆಡ್ ಪೋಸ್ಟ್

**ಒಂ**ದು ದಿನ ೬ನೇ ಕ್ಲಾಸಿಗೆ 'ಭಾರತದ ಸಂವಿಧಾನ' (Indian Constitution) ಎಂಬ ಪಾಠದಲ್ಲಿ ಬರುವ ರಾಷ್ಟ್ರಪತಿ (President) ಎಂಬ ಉಪಭಾಗವನ್ನು ವಿದ್ಯಾರ್ಥಿಗಳಿಗೆ ತಿಳಿಸಿ ಹೇಳುತ್ತಿದ್ದೆ. ರಾಷ್ಟ್ರಪತಿಗಳ ಮಹತ್ವ, ಅವರ ಹುದ್ದೆ, ಅವರು ನಿರ್ವಹಿಸುವ ಕಾರ್ಯ ಮುಂತಾದವುಗಳ ಬಗ್ಗೆ ತಿಳಿಸಿ ನನ್ನ ಬೋಧನೆ ವಿದ್ಯಾರ್ಥಿಗಳಿಗೆ ಎಷ್ಟರ ಮಟ್ಟಿಗೆ ಅರಿವಾಗಿದೆ ಎಂದು ತಿಳಿಯಲು which is the highest post according to constitution? ಎಂಬ ಪ್ರಶ್ನೆ ಕೇಳಿದೆ. ನಾನು ಉತ್ತರಕ್ಕಾಗಿ ಬಹಳ ಕಾತರದಿಂದ ನಿರೀಕ್ಷಿಸುತ್ತಿದೆ. ಮೊದಲು ಯಾರೂ ಉತ್ತರ ಕೊಡುವ ಲಕ್ಷಣವೇ ಕಾಣಲಿಲ್ಲ, ನನಗೆ ತುಂಬಾ ನಿರಾಶೆ ಆಯಿತು. ಆದರೆ ಅಷ್ಟರಲ್ಲೇ ಹಿಂದಿನ ಬೆಂಚಿನ ಒಬ್ಬ ಹುಡುಗ ತಕ್ಷಣ ಎದ್ದು ನಿಂತು ಕೊಟ್ಟ ಉತ್ತರ ಕೆಲವು ಕ್ಷಣ ನನ್ನನ್ನು ಗರಿಬಡಿಸಿತು. ಆತನಿಗೆ ಶಿಕ್ಷಿಸಬೇಕೋ ಅಥವಾ ನಕ್ಕು ಬಿಡಬೇಕೋ ಎಂಬ ತೊಳಲಾಟದಲ್ಲಿದ್ದೆ. ನಂತರ ಹೇಗೋ ಸಾವರಿಸಿಕೊಂಡು, ಆ ವಿದ್ಯಾರ್ಥಿಯ ಧೈರ್ಯದ 'ಮುಗ್ಧ ಉತ್ತರ'ಕ್ಕೆ ಚೆನ್ನಾಗಿ ನಕ್ಕುಬಿಟ್ಟು, ನಾನು ನಕ್ಕ ತಕ್ಷಣ ಇಡೀ ಕ್ಲಾಸೇ ಗೊಳ್ಳೆಂದು ನಕ್ಕುಬಿಟ್ಟಿತು. ಆ ವಿದ್ಯಾರ್ಥಿ ಬೆಪ್ಪನಾಗಿಬಿಟ್ಟ.

ಅಂದ ಹಾಗೆ, ಆತ ಕೊಟ್ಟ ಉತ್ತರ ಏನು ಗೊತ್ತೆ?

Head Post, Sir !

**–ದವಲತ್ ಕುಮಾರ ವಡವಡಗಿ**
ಮುದ್ದೇಬಿಹಾಳ

## ಪ್ರಾಮಾಣಿಕತೆಯ ಬೆಲೆ

**ನಾ**ನು ೯ನೇ ತರಗತಿ ಓದುತ್ತಿದ್ದಾಗ ಒಮ್ಮೆ ಇಂಗ್ಲೀಷ್ ಉಪಾಧ್ಯಾಯರಾದ ರಾಮಣ್ಣನವರು ತಡವಾಗಿ ಕ್ಲಾಸಿಗೆ ಬಂದರು. ರಾಮಣ್ಣ, ರಾಮಣ್ಣ. ಬಂದಾ....ಬಂದಾ ಅಂತ ಹೇಳಿ ತನ್ನ ಜಾಗದಲ್ಲಿ ಕೂತುಕೊಂಡನು. ಆಗ ಉಪಾಧ್ಯಾಯರು ಯಾರು ಹಾಗೆ ಅಂದಿದ್ದು ಎಂದು ಕೇಳಿದರು. ಆತ ಪ್ರಾಮಾಣಿಕವಾಗಿ, ಧೈರ್ಯವಾಗಿ ನಾನು ಸಾರ್ ಎಂದು ಒಪ್ಪಿಕೊಂಡನು. ಇಂಗ್ಲಿಷ್ ಉಪಾಧ್ಯಾಯರು, ಸಿಟ್ಟಿನಿಂದ ಆತನ ಕಪಾಳಕ್ಕೆ ಬಾರಿಸಿದರು. ನಾವೆಲ್ಲರೂ ನಗುತ್ತಾ ಸುಮ್ಮನೆ ಇದ್ದೆವು. ಪಾಪ! ಪ್ರಾಮಾಣಿಕವಾಗಿ ಒಪ್ಪಿಕೊಂಡಿದ್ದರಿಂದ ಕಪ್ಪಾಳಕ್ಕೆ ಏಟು ಬಿತ್ತು! ಪ್ರಾಮಾಣಿಕತೆಗೆ ಇದೇ ಗತಿಯೇ ಎಂದು ನನಗೆ ಇಂದಿಗೂ ಕಾಡುತ್ತಿದೆ!

**–ಕೆ. ಬಸವರಾಜ್,**
ಕುರುಗೋಡು

## ಅಮರ್ ಥೇಟರ್

**ನಾ**ನು ಪ್ರಾಥಮಿಕ ಶಾಲೆಯಲ್ಲಿದ್ದಾಗ. ನಮಗೆ ಸಮಾಜದ ಪಾಠ ನಡೆಯುತ್ತಿತ್ತು. ಶಿವಾಜಿಯು ಅಮರಕೋಟೆಯಲ್ಲಿ ಜನಿಸಿದನು ಎಂದು ಗುರುಗಳು ಹೇಳುತ್ತಿದ್ದರು. ಆಗ ಯಾವುದೋ ಯೋಚನೆಯಲ್ಲಿ ಮಗ್ನಳಾಗಿದ್ದ ಹುಡುಗಿಯೊಬ್ಬಳನ್ನು ಎದ್ದು ನಿಲ್ಲಿಸಿ ''ಶಿವಾಜಿ ಎಲ್ಲಿ ಜನಿಸಿದ?'' ಎಂದು ಕೇಳಿದರು. ಆಕೆ ತಟ್ಟನೆ ''ಶಿವಾಜಿಯು ನಮ್ಮೂರಿನ ಅಮರ್ ಥೇಟರಿನಲ್ಲಿ ಜನಿಸಿದ'' ಎಂದಳು! ಆಗ ಕ್ಲಾಸ್ ರೂಂನ ನಗೆ ಯಾರಿಂದಲೂ ತಡೆಯಲಿಲ್ಲ.

**–ಡಿ. ಹುಸೇನ್,**
ಗಂಗಾವತಿ

# ಬ್ಯಾಲೆಟ್ ಆಡಳಿತವೋ?
# ಬುಲೆಟ್ ಆಡಳಿತವೋ?



ಪ್ರಕಾಶ್ ಪ್ರಿಯಾರ್ಧ

○ ಎನ್.ಕೆ. ಕುಲಕರ್ಣಿ
''ಪರಿಮಳ''
ರೇಲ್ವೆ ಗೂಡ್ಸ್‌ಶೆಡ್ ಬಳಿ, ಧಾರವಾಡ-೭

**ಮಾ**ಫಿಯಾ - ಮಾರ್ಫಿಯಾ ಇವುಗಳಲ್ಲಿ ಯಾವುದು ಒಳ್ಳೆಯದು? ಈ ಮಾಫಿಯಾ ಅನ್ನೋದು ಈ ಸಂಗೀತಗಾರರನ್ನು, ಸಂಗೀತ ನಿರ್ಮಾಪಕರನ್ನು ತನ್ನ ಮಯಾಬಲೆಯಲ್ಲಿ ಬಲಿ ಹಾಕುತ್ತಿದೆ. ಮಾಫಿಯಾ ಎಂದರೇನು? ಇಂತಹ ಶಬ್ಧ ಪ್ರಯೋಗಗಳು ಹೊಸ ಹೊಸ ನಾಣ್ಯಗಳಂತೆ ಚಲಾವಣೆಯಲ್ಲಿ ಬರುತ್ತಿವೆ. ಈ ಶಬ್ದಗಳ ಅರ್ಥವನ್ನು ಡಿಕ್ಷನರಿಗಳಲ್ಲಿ ಶೋಧಿಸಿದರೆ ಇರುವುದಿಲ್ಲ. 'ಡಿಕ್ಷನರಿಯೊಳಗಿನ ಶಬ್ದಾ ಹುಡುಕುವುದು ಅಂದರೆ ಬೇಸಗೆ ಹಾಸಿಗೆಯೊಳಗ ತಗಣಿ ಹುಡುಕಿಧಾಂಗ' ಎಂದು ನಮ್ಮ ವರಕವಿಗಳು ಜೋಕ್ ಮಾಡಿದ್ದುಂಟು. ತಗಣಿ ಎಂದ ಕೂಡಲೇ ನೆತ್ತರ ಹೀರುವ ಅಣುಪ್ರಾಣಿಯ ಪ್ರತಿಮೆಯೊಂದು ಕಣ್ಮುಂದೆ ಬರುತ್ತದೆ. ಹೀಗೆ ನೆತ್ತರವನ್ನು ಅತ್ತರಿನಂತೆ ಮೂಸುವ ಆಸೆಯ ಸ್ಮಗ್ಲರ್ ಗ್ಯಾಂಗ್ (Smuggler Gang) ವ್ಯಕ್ತಿಗಳನ್ನು ಕ್ಷಣದಲ್ಲಿ ಖಲಾಸ್ ಮಾಡುವ ಕೊಲೆಯ ಕಲೆಯನ್ನು ಮಾಫಿಯಾ ಮಾಯಾಬಾಜಾರಿನವರು ಸಾಧಿಸಿದ್ದಾರೆ ಎನ್ನುತ್ತಾರಂತೆ! ನನಗೂ ಖಾತ್ರಿ ಗೊತ್ತಿಲ್ಲರೆಪ್ಪಾ. ಮುಂಬಯಿ-ಇಂಗ್ಲಿಷ್‌ನಲ್ಲಿ ಸರಣಿ ಬಾಂಬುಗಳ ಬಂದರ ಎಂದರೆ Bombay - ಜನಗಳಿಗೆಲ್ಲಾ ಈ ಮಾಫಿಯಾ, ಅಂದರೆ ಜೀವನದಲ್ಲಿ ನಿತ್ಯ ನಡೆಯುವ ಸ್ಟಂಟ್ ಸಿನಿಮಾ, ಚೆನ್ನಾಗಿ ಗೊತ್ತಂತೆ! ಮುಂಬಯಿಯಲ್ಲಿ ಇದೊಂದು ದೊಡ್ಡ ಭೂಗತ ಭೂತ ಬಳಗವಂತೆ! ಆ ಬಳಗ ನಡೆಸುವ ಮಹಾಯಜ್ಞ ಇದು. ಈ ಮಹಾಯಜ್ಞದಲ್ಲಿ ನಿತ್ಯವೂ ಪೂರ್ಣಾಹುತಿ ನಡೆಯುತ್ತದಂತೆ! ದೇವಸ್ಥಾನಕ್ಕೆಂದು ಹೋದ




ಸಂಗೀತ ಭಕ್ತನೊಬ್ಬ ದೇವರ ಪ್ರಸಾದ ಸ್ವೀಕರಿಸಿ, ಹಣೆಗೆ ಅಂಗಾರ ಇಟ್ಟುಕೊಂಡು ಹೊರಗೆ ಬಂದನೋ ಹಣೆಯ ಅಂಗಾರ ಅವನ ಹಣೆಬರೆಹವನ್ನೇ ತೊಡೆದು ಹಾಕುತ್ತದಂತೆ! Facing the music ಅಂತಾರಲ್ಲ ಬಹುಶಃ ಇದೇ ಇರಬೇಕು - Facing the bullet! 'ಬುಲೆಟ್' ಆಡಳಿತ ನಡೆವಲ್ಲಿ 'ಬ್ಯಾಲೆಟ್' ಆಳ್ವಿಕೆ ನಡೆದೀತೆ? ದೈತ್ಯರ ಭೂತಚೇಷ್ಟೆಗಳು ನಡೆಯುವ ದೇಶದಲ್ಲಿ ಡೆಮೊಕ್ರಸಿ ನಡೆದೀತೆ? 'ಎಲ್.ಟಿ.ಟಿ.ಇ' 'ಬೊಡೋ', 'ನಕ್ಸಲೈಟ್ಸ್', 'ಕಾಶ್ಮೀರ-ಪಂಜಾಬ-ಖಲಿಸ್ತಾನಉಗ್ರವಾದಿಗಳ' ಹತ್ಯಾಕಾಂಡಗಳಿಗೂ, ಮಾಯಾಬಜಾರ್ ವೇಷದಲ್ಲಿ ನಡೆಯುವ ಸಾವಿನ ಸರಸಗಳಿಗೂ ಬಹಳ ಅಂತರವಿರಬೇಕು.

ಮಾಫಿಯಾ ಅಂದರೆ ಮತ್ತೇರಿಸುವ ದ್ರವ್ಯಗಳಾದ ಅಫೀಮು, ಗಾಂಜಾ, ಘೋಟಾ ಮಾದರಿಯ ಮಾದಕ ವಸ್ತುಗಳ ಕಳ್ಳವ್ಯಾಪಾರದ ನಿಶೆಯಲ್ಲಿ ನಿಶಾಚರರು ನಡೆಸುವ ಎಲ್ಲಾ ಬಗೆಯ - ಲೈಂಗಿಕತೆಯಿಂದ ಲಿಂಗೈಕ್ಯದವರೆಗೆ - ದುರ್ ಹಾಗೂ ದೂರ ವ್ಯವಹಾರಗಳು ಒಳಗೊಂಡಿರುತ್ತವೆ.

ಮಾಫಿಯಾದ ಬೆನ್ನಿಗೆ ಬರುತ್ತದೆ ಮಾರ್ಫಿಯ! ಮಾರ್ಫಿಯಾ ದ್ರವ್ಯ ಎಚ್ಚರ ತಪ್ಪಿಸುವ ತೀವ್ರ ಮಾದಕ ಪದಾರ್ಥ. ಎಚ್ಚರ

ತಪ್ಪಿಸಲು ಮಾರ್ಫಿಯಾ ಚುಚ್ಚು ಮದ್ದು ಕೊಡುತ್ತಿದ್ದರು. 'ಚಟಸಾರ್ವಭೌಮ'ರು ('ಶೈಲಾ' ಅವರ ಕೃಪೆ ಈ ಶಬ್ದ) ಎಷ್ಟೋ ಪ್ರಕಾರದವರಿರುತ್ತಾರಲ್ಲವೆ? ಮಾದಕತೆ ಎಂದರೆ ಎಳನಾಗರ ಹಾವನ್ನು ಕಚ್ಚಿಸಿಕೊಂಡು ಆ ವಿಷದಿಂದ ಮತ್ತು ತರಿಸಿಕೊಳ್ಳುವವರೂ ಇರುತ್ತಾರಂತೆ. ಎಷ್ಟೋ ಜನ ಮಾದಕ ಚುಚ್ಚುಮದ್ದುಗಳನ್ನು ಚಟಕ್ಕಾಗಿ ತೆಗೆದು ಕೊಳ್ಳುತ್ತಾರಂತೆ! ಅದಕ್ಕೇ ಇಂಥವರಿಗೆಲ್ಲಾ ಚಟ ಸಾರ್ವಭೌಮರು ಅನ್ನೋದು.

ನನ್ನ ಕವಿಮಿತ್ರನೊಬ್ಬನಿದ್ದಾನೆ. ಅವನಿಗೆ ಗುಟ್ಕಾ, ಘೋಟಾ, ಮಾರ್ಫಿಯಾ ಏನೂ ಬೇಡ. ಯಾವಾಗಲೂ ತನ್ನ ಗುಂಗಿನಲ್ಲೇ ಇರುತ್ತಾನೆ. ಯಾವಾಗಲೂ ಕಾವ್ಯ ಚಿಂತನೆ ಯಲ್ಲೇ ಇರುತ್ತಾನೆಂದಲ್ಲ. ಏನೇನೊ ಚಿಂತೆಗಳೂ ಅವನ ಮೈಗೆ, ಮನಕ್ಕೆ ದಾಂಗುಡಿಯ ಬಳ್ಳಿಯಂತೆ ಬಳಸಿಕೊಂಡಿ ರುತ್ತವೆ. ಅವನಿಗೆ ಸ್ವಚಿಂತೆಗಿಂತ ಪರಚಿಂತೆಯೆ ಹೆಚ್ಚು. ಬಸವೇಶ್ವರರೇನೊ ಹೇಳಿದರು - ಪರಚಿಂತೆ ಎಮಗೆ ಏಕೆ ಅಂತ. ಆದರೆ ನನ್ನ ಮಿತ್ರನ ಪರಚಿಂತೆ ಮಿಗಿಲಾದದ್ದು. ಈ ಜನಸಂಖ್ಯಾಸ್ಫೋಟದಿಂದಾಗಿ ಒಂದು ಕಾಲ ಹೀಗೆ ಬರಬಹುದಲ್ಲ, ಸ್ಥಳಾಭಾವದಿಂದಾಗಿ ಒಬ್ಬರ ಕಾಲ ಮೇಲೆ ಇನ್ನೊಬ್ಬರು ನಿಂತುಕೊಳ್ಳು ವಂತಾಗಬಹುದು ಎಂದು ಎಲ್ಲೋ ಓದಿದ್ದ. ಅದಕ್ಕಾಗಿ ಈಗಲೇ ಆತನ ಚಿಂತೆ - ತನ್ನ ಕಾಲ ಮೇಲೆ ಯಾರನ್ನು ನಿಲ್ಲಿಸಿಕೊಳ್ಳುವುದು, ಅಥವ ತಾನು 'ಇನ್ನೊಬ್ಬರ ಕಾಲಮೇಲೆ ನಿಲ್ಲುವ ಹಾಗಾದರೆ ಯಾರ ಕಾಲಮೇಲೆ? ಆ ಕಾಲ - ಕಾಲಿನ ಚಿಂತೆ ಹೇಗೊ ಇರಲಿ - ನನ್ನ ಮಿತ್ರನ ಈ ಗುಂಗಿನ ಪರಿಯನ್ನು ನಿದರ್ಶನಕ್ಕಾಗಿ ಹೇಳಿದೆ ಅಷ್ಟೆ. ಮೊದಲು ನಮ್ಮ ಕಾಲ ಮೇಲೆ ನಾವು ನಿಲ್ಲೋಣ. ಎಂದರೆ ಈ ವೈಚಾರಿಕ ಗುಂಗೂ ಒಂದು ಮತ್ತಿನ ಗುಂಗಿನಂತೆಯೆ ಸರಿ.

ನನಗೆ ಬಹಳದಿನ ಈ ಮಾಫಿಯಾ, ಮಾರ್ಫಿಯಾಗಳ ಅಂತರವೇ ತಿಳಿದಿರಲಿಲ್ಲ. ನನ್ನ ಭಾಷಾಶಾಸ್ತ್ರಜ್ಞ ದೋಸ್ತ್ ತಿಳಿಸಿ ಹೇಳಿದ. ''ಓಮರ್ ಖಯಾಮ್ ಬಣ್ಣಿಸಿರುವ ಅಧರದ ಮಧುಮಸ್ತತೆ ಮಾರ್ಫಿಯಾ. ಆ ಮತ್ತಿನಲ್ಲಿ ಮದ್ದಾನೆಯಂತೆ ಯಾವುದೊ ಹೆಣ್ಣಿನ ಮೇಲೆ ಬಲಾತ್ಕಾರ ಮಾಡಲು ಹಚ್ಚುವ ಗುಣವೂ ಇರುತ್ತದೆ. ಇದು ಮಾರ್ಫಿಯಾ ಎಫೆಕ್ಟ್. ಆದರೆ ಒಲಿದರೆ ನಾರಿ, ಇಲ್ಲದಿದ್ದರೆ? ಹೆಣ್ಣು ಒಲಿಯದೆ ಮಾರಿಯಾದಾಗ ಈ ಮತ್ತಮದ್ದಾನೆ ಆ ಹೆಣ್ಣಿನ ಮೇಲೆ ತನ್ನ ಪೌರುಷ ಶಕ್ತಿಯನ್ನೆಲ್ಲಾ ಪ್ರಯೋಗಿಸಿ, ಬಲಾತ್ಕಾರದಿಂದ ಏನೊ ಎಂಥದೊ ಪುಡಿಯ ವಾಸನೆ ತೋರಿಸಿ ಎಚ್ಚರ ತಪ್ಪಿಸಿ ಮಾಡಬಾರದ್ದನ್ನೆಲ್ಲಾ ಮಾಡಿ ಕೊನೆಗೆ ಕತ್ತು ಹಿಸುಕುವ ಪ್ರಯೋಗ ನಡೆಸಿದಾಗ ಅದು ಮಾಫಿಯಾದ ಉಗ್ರ ಸ್ವರೂಪ ತಾಳುತ್ತದೆ' ಅಂತೆಲ್ಲಾ.

ಏನೊರೆಪಾ! ಪಟ್ಟಣಗಳು ಬೆಳೆದಂತೆಲ್ಲಾ, ನಿರುದ್ಯೋಗವು ಬೆಳೆದು ಹಸಿವೆಗೆ ಹಾದಿ ಹುಡುಕಬೇಕಲ್ಲ! ಕಾಡುಗಳ್ಳರಾಗಬಹುದು. ಹಗಲು (ಕನಸಿಗರಲ್ಲ) ದರೋಡೆಗಾರರಾಗ ಬಹುದು! 'ರ್‍ಯಾನ್‌ಸಂ' ಹಣ ಕಿತ್ತಿಕೊಳ್ಳುವ ಶಿಶು-ಕನ್ಯಾ-ವಿವಾಹಿತೆಯರ ಅಪಹರಣಕಾರ ರಾಗಬಹುದು. ಇಷ್ಟು ಗಟ್ಟಿಗತನ, ಕಲಿತನ ಇಲ್ಲದವರು ಸಿಂಪಲ್ ಸೈಕ್ಲಿಸ್ಟ್ ಆಗಿ ದಾರಿಯ ಸುಮಂಗಲಿಯರ ಮಂಗಲ ಸೂತ್ರಾಪಹಾರಿ ಗಳಾಗಬಹುದು. ಇದು ಹೆಚ್ಚು ಅಹಿಂಸಾತ್ಮಕ ಉದ್ಯೋಗಾವಕಾಶ. ಬ್ಯಾಂಕಿನಿಂದ ಚೆಕ್‌ಕ್ಯಾಶ್ ಮಾಡಿಸಿ ಬ್ರೀಫ್‌ಕೇಸ್‌ನಲ್ಲಿ ತುಂಬಿಕೊಂಡು ಹೊತ್ತಾಯಿತೆಂದು ಸ್ಕೂಟರ್ ಕಿಕ್ ಮಾಡುವ ಹೊತ್ತಿಗೆ - ಕೆಳಗೆ ಬಿದ್ದಿದ್ದ (ಮುದ್ದಾಂ ಒಗೆದಿದ್ದ) ಐವತ್ತು ರೂಪಾಯಿ ನೋಟ್ ಕೈಗಿತ್ತು ''ನೋಡಿ ಸಾರ್ ಬ್ಯಾಗ್ ಸರಿಯಾಗಿ ಬಂದ್ ಮಾಡಿದ್ದೀರಿಲ್ಲವೊ'' ಎಂದು ಆ ಸಭ್ಯಗೃಹಸ್ಥ ನುಡಿದಾಗ ಸ್ಕೂಟರ್ ಇಳಿದು ನೀವು ಬ್ಯಾಗ್ ಎತ್ತಿಕೊಳ್ಳುವಷ್ಟರಲ್ಲೇ ಚಾಲಾಖಿಯಿಂದ ನಿಮ್ಮ ಬ್ರೀಫ್‌ಕೇಸ್‌ನೊಡನೇ ಕಣ್ಮರೆಯಾಗಿ ಬಿಡುವ ಮಾಯಾಬಾಜಾರ್ ನಡೆಸಲು ಚೌಲಾಖಿ ಬಹಳ ಬೇಕು ಬಿಡ್ರಿ. ಅದಕ್ಕಿಂತ ಸಿಂಪಲ್ ಎಂದರೆ ಪಿಕ್‌ಪಾಕೆಟಿಂಗ್! ಸಿಟಿಬಸ್‌ನ ಗದ್ದಲ ಬಣ್ಣಿಸುವುದೇ ಬೇಡ. ಬಸ್ ನಿಲ್ಲುವುದೇ ತಡ. ಒಳಗೆ ನುಗ್ಗುತ್ತೀರಿ. ಎಲ! ನಿಮ್ಮ ಚಪ್ಪಲಿ ಕೆಳಗೆ ಬೀಳಬೇಕೆ? ಗಡಿ ಬಿಡಿಯಲ್ಲಿ ಚಪ್ಪಲಿ ಧರಿಸಿ ಹೇಗೋ ಬಸ್ ಏರಿ ಟಿಕೆಟ್‌ಗಾಗಿ ಜೇಬಿನಲ್ಲಿ ಕೈ ಹಾಕುತ್ತೀರಿ! ಏನಿದೆ ಜೇಬಿನಲ್ಲಿ? 'ಬರಿದೋ ಬರಿದು ತೆರವೊ ತೆರವು ಬಡವರ ಬಗ್ಗರ ಜೇಬಿನ ಚೀಲಾ' - ಇವೆಲ್ಲಾ ಹಣ ಸಂಪಾದನೆಯ ಪಟ್ಟಣಿಗರ ಸಾಧನೆಗಳು!

''ಮತ್ತೇನು ಮಾಡತಾರ? ಪಾರ್ಟಟೈಂ ನೌಕರದಾರರಿಗೆ ಫುಲ್‌ಟೈಂ ಇಲ್ಲಾ, ಪರ್ಮನೆಂಟ್ ಅನ್ನೋದಿಲ್ಲಾ ಅಂದಮ್ಯಾಲೆ ಒಂದು ಪಾರ್ಟಟೈಂ Jobಗೆ ಜೇಬು ಕತ್ತರಿಸೋ ಇನ್ನೊಂದು ಖಾಸಗಿ ಪಾರ್ಟ್‌ಟೈಂ ಜಾಬ್ ಮಾಡು!'' ಹೌದು ಡೇಲಿವೇಜಸ್‌ನ ನನ್ನ ಭಾವ ಮೈದುನ ಬಂಡೂರಾಯ ಹೇಳುವುದು ಅನಿವಾರ್ಯದ ಸತ್ಯ ಅನಿಸಿತು. ಅರ್ಧ ಸತ್ಯಕ್ಕಿಂತಲೂ ಈ ಅನಿವಾರ್ಯದ ಸತ್ಯಗಳು ಎಂದರೆ ಮಹಾನಗರಗಳಲ್ಲಿ ದೈನಿಕ ಧಾರಾವಾಹಿಗಳು!

ಇಂದು ದೇಶದ ಕಪ್ಪು ಹಣ ಬೆಳ್ಳಗಾದರೆ ಲಕ್ಷ ಕೋಟಿಗಟ್ಟಲೆ ದೇಶದಲ್ಲಿ ಸಂಪತ್ತು ಪೂರ್ಣ ಸತ್ಯವೆನಿಸಬಹುದು. ಆದರೆ ದೊಡ್ಡಮ್ಮೆ, ಗೊಡ್ಡಾಕಳದಂತೆ ಕಪ್ಪುಹಣ ಬಂಜೆಯಾಗಿಯೇ ಉಳಿಯುತ್ತದೆ. ಕೈಯಲ್ಲಿ ಕಾಸಿಲ್ಲದವರು ಕಾಶಿಗೆ ಹೋಗಿ ಮಾಡುವುದೇನು? ಕಪ್ಪು ಹಣದೊಡನೆ ಕಪ್ಪು ವ್ಯವಹಾರಗಳೂ ನಡೆಯೋದೆ - ಸರಕಾರದ ಕಣ್ಣು ತಪ್ಪಿಸಿ. ಅದಕ್ಕೇ ಮಾಫಿಯಾ ವ್ಯವಹಾರಗಳು ತಲೆಯೆತ್ತುತ್ತವೆ! ಇದಕ್ಕೆ ಸರಕಾರದ ಕಣ್ಣು ತಪ್ಪಿಸಿ ಸರಣಿ ಬಾಂಬ್ ಸ್ಫೋಟ ನಡೆಯುತ್ತವೆ ಎಂದಲ್ಲ. ಸರಕಾರ ಕಣ್ಣು ಮುಚ್ಚಿಕೊಂಡಿರುತ್ತದೆಂದೇ ಈ ವ್ಯವಹಾರಗಳು ಆ್ಯಗ್ಸಲೇಟರ್ ಒತ್ತಿದಂತೆ ಗಾಡಿ ಹೊಡೆಯುತ್ತದೆ.

ಅದಕ್ಕೇ ನಮ್ಮ ದೇವಣ್ಣ ಹೇಳೋದು - 'ನಮ್ಮ ದೇಶದಾಗ ಪ್ರಜಾಪ್ರಭುತ್ವ ಆಡಳಿತದೊಳಗಲ್ಲ, ಮನೆಮನೆಯೊಳಗ - ವರ್ಷಾ ಒಂದು ತೊಟ್ಲು ತೂಗೋದರಿಂದ' ಎಂದು. ನಿಜ. 'ಬಡವರ ಸಿಂಗಾರ ಬಯಕೆಗೆ ಮೂಲವು' ಎಂಬಂತೆ ನಿರುದ್ಯೋಗಿಗಳಿಗೆ ಮಕ್ಕಳು ಹೆಚ್ಚು. ಮಕ್ಕಳು ಹೆಚ್ಚಿಂದೇ ಮನೆ ಮನೆಗೂ ಪ್ರಜಾಪ್ರಭುತ್ವ! ಆದರೆ ದೇಶದಲ್ಲಿ ಮಾತ್ರ ಗಣತಂತ್ರ, ಅಲ್ಲ ಗಣಗಣ ಗಂಟೀ ತಂತ್ರ!

ಏನು ಮಾಡೋದು ಹೇಳ್ರಿ, ಯಾವ ಪಾರ್ಟಿನೇ ಅಧಿಕಾರಕ್ಕೆ ಬರಲಿ, ಹದಿಮೂರು ಪಾರ್ಟಿಗಳು ಸೇರಿ ಅಧಿಕಾರಕ್ಕೇ ಬರಲಿ, ನಡುಗಾಲ ಮಹಾ ಚುನಾವಣೆ ನಡೆಯಲಿ ನಮ್ಮ ದೇಶಕ್ಕೆ ಸೌಖ್ಯವಿಲ್ಲ. 'ಸುಖೀರಾಜ್ಯ' ಇರೋದು ಹಗರಣಗಳ ಹೀರೋಗಳಿಗೆ! ''ಅಂತೇ ನಮ್ಮ ದೇಶ ಜಾಗರಣ ಗಣರಾಜ್ಯ ಆಗಲಿಲ್ಲಾ, ಹಗರಣಗಳ ಗಣರಾಜ್ಯ ಆಯಿತು'' ಎಂದು ನನ್ನ ಪತ್ರಿಕೋದ್ಯಮಿ ಮಿತ್ರ ಹೇಳಿದುದು ನನಗೆ ಪಟಾಯಿಸಿತು.

●

## ಕುಕ್ಕರ್‌ನಲ್ಲಿ ಕೇಕ್

**ಬೇಕಾಗುವ ಸಾಮಗ್ರಿಗಳು**

ಮೊಟ್ಟೆ ೪, ಮೈದಾ ೨ ಕಪ್ಪು, ಸಕ್ಕರೆ ೧ ೧/೨ ಕಪ್ಪು, ಹಾಲು ೧ ಕಪ್ಪು, ರಿಫೈನ್ಡ್ ಆಯಿಲ್ ೧ಕಪ್ಪು ಅಥವಾ ತುಪ್ಪ, ಎಸೆನ್ಸ್ ೧ ಚಮಚ, ಬೇಕಿಂಗ್ ಪೌಡರ್ ೧ ಚಮಚ, ದಾಕ್ಷಿ ಮತ್ತು ಗೋಡಂಬಿ ಚೂರುಗಳು.



**ಮಾಡುವ ವಿಧಾನ**

ಮೊಟ್ಟೆಯಲ್ಲಿ ಬಿಳಿ ಭಾಗವನ್ನು ತೆಗೆದು ಚೆನ್ನಾಗಿ ಕಲಕಬೇಕು. ಆದರಲ್ಲಿ ಮೈದಾ, ಸಕ್ಕರೆ, ಹಾಲು ಮತ್ತು ಎಣ್ಣೆಯನ್ನು ಹಾಕಿ ಚೆನ್ನಾಗಿ ಗಂಟುಗಳು ಉಳಿಯದಂತೆ ಕಲಿಸಬೇಕು. ಕೊನೆಯಲ್ಲಿ ಬೇಕಿಂಗ್ ಪೌಡರ್, ಎಸೆನ್ಸ್ ಮತ್ತು ಮೊಟ್ಟೆಯ ಹಳದಿಯನ್ನು ಹಾಕಿ ಚೆನ್ನಾಗಿ ಕಲಿಸಿ.

ಕುಕ್ಕರ್ ಪಾತ್ರೆಗೆ ಸ್ವಲ್ಪ ತುಪ್ಪವನ್ನು ಸವರಿ ಆದರ ಮೇಲೆ ಸ್ವಲ್ಪ ಮೈದಾ ಹಿಟ್ಟನ್ನು ಉದುರಿಸ ಬೇಕು. ಅದರಿಂದ ಕೇಕನ್ನು ಪಾತ್ರೆಯಿಂದ ಸಲೀಸಾಗಿ ತೆಗೆಯಬಹುದು. ಈ ಕೇಕ್‌ನ ಮಿಕ್ಸನ್ನು ಪಾತ್ರೆಯಲ್ಲಿ ಅರ್ಧದಷ್ಟು ಹಾಕಿ ಅದಕ್ಕೆ ಚೂರು ಮಾಡಿದ ಗೋಡಂಬಿ, ದಾಕ್ಷಿಯ ಅರ್ಧ ಭಾಗವನ್ನು ಹಾಕಿ.

ಕುಕ್ಕರಲ್ಲಿ ನೀರು ಹಾಕಬಾರದು. ಕೆಳಗಡೆ ಇಡುವ (ಸ್ಟ್ಯಾಂಡ್) ಇಡಬಾರದು. ಹಾಗೆಯೇ ಕುಕ್ಕರನ್ನು ೧೦ ನಿಮಿಷ ಬಿಸಿ ಮಾಡಬೇಕು. ಆಮೇಲೆ ಗ್ಯಾಸನು sim ಮಾಡಿ ಕೇಕ್‌ನ ಪಾತ್ರೆಯನ್ನು ಅದರಲ್ಲಿ ಇಟ್ಟು ಕುಕ್ಕರ್ ಮುಚ್ಚಳವನ್ನು ಮುಚ್ಚಿ ಬಿಡಿ. ಕುಕ್ಕರ್ weightನ್ನು ಕೂಡ ಹಾಕಬಾರದು. ೧೦ ನಿಮಿಷದ ನಂತರ ಕುಕ್ಕರ ಮುಚ್ಚಳವನ್ನು ತೆಗೆದು ಉಳಿದ ಗೋಡಂಬಿ ಮತ್ತು ದ್ರಾಕ್ಷಿ ಚೂರನ್ನು ಕೇಕ್ ಮೇಲೆ ಉದುರಿಸಿ ಮುಚ್ಚಳವನ್ನು ಮುಚ್ಚಿ. ಮತ್ತೆ ೧೦ ನಿಮಿಷ ಬಿಟ್ಟು ಒಂದು ಕತ್ತಿಯಿಂದ ಕೇಕನ್ನು ಚುಚ್ಚಿದಾಗ ಅದಕ್ಕೆ ಏನೂ ಅಂಟ ಬಾರದು. ಅಂಟಿದರೆ ಮತ್ತೆ ೫ ನಿಮಿಷ ಬಿಡಿ. ಇಲ್ಲವಾದರೆ ಕೇಕನ್ನು ಹೊರಗೆ ತೆಗೆದು ತಿನ್ನಲು ಸಿದ್ಧರಾಗಿ. ಒಟ್ಟಿನಲ್ಲಿ ೨೦ ನಿಮಿಷದಲ್ಲಿ ನಿಮಗೆ ಕೇಕ್ ಆಗುವುದು. ಉಳಿದ ಅರ್ಧ ಕೇಕ್ ಮಿಕ್ಸನ್ನು ಕೂಡ ಇದೇ ರೀತಿಯಲ್ಲಿ ಮಾಡಿ.

- ಶಾಂತಾ ರೆನಿಕ್

## ಬೇಸನ್ ಲಾಡು

**ಬೇಕಾಗುವ ಸಾಮಗ್ರಿಗಳು**

ಒಂದು ಕೆ.ಜಿ. ಕಡ್ಲೆಹಿಟ್ಟು, ಮುಕ್ಕಾಲು ಕೆ.ಜಿ. ಬೀಸಿದ ಸಕ್ಕರೆ, ೨೦ ಎಲಕ್ಕಿ (ಸಣ್ಣಗೆ ಪುಡಿ ಮಾಡಿದ್ದು), ೧೦೦ ಗ್ರಾಂ ಗೋಡಂಬಿ ಸಣ್ಣ ಸಣ್ಣ ಚೂರುಗಳು. ೫೦ ಗ್ರಾಂ ದ್ರಾಕ್ಷಿ, ೨೫೦ ಗ್ರಾಂ ಸುವಾಸನೆಯುಳ್ಳ ಒಳ್ಳೆಯ ತುಪ್ಪ.



**ಮಾಡುವ ವಿಧಾನ**

ಒಂದು ಬಾಣಲೆಯಲ್ಲಿ ತುಪ್ಪವನ್ನು ಕಾಯಿಸಲು ಇಡಿ. ಅದರಲ್ಲಿ ಈಗ ಸ್ವಲ್ಪ ಸ್ವಲ್ಪವೇ ಕಡ್ಲೆ ಹಿಟ್ಟನ್ನು ಉದುರಿಸುತ್ತಾ ಕೈಯಾಡಿಸುತ್ತಾ ಎಲ್ಲ ಹಿಟ್ಟನ್ನೂ ಹೀಗೆಯೇ ತುಪ್ಪದಲ್ಲಿ ಸುರಿದು ಮಂದ ಉರಿಯ ಮೇಲೆ ಬಿಡದಂತೆ ಕೈಯಾಡಿಸುತ್ತಲೇ ಇರಿ. ಕಮ್ಮನೆಯ ವಾಸನೆ ಹರಡಿ ಹಿಟ್ಟು ಕಂದು ಬಣ್ಣಕ್ಕೆ ಬಂದಾಗ ಇಳಿಸಿಬಿಡಿ. ಈಗ ಈ ಪದಾರ್ಥವನ್ನು ಗಾಳಿಯಲ್ಲಿ ಸಂಪೂರ್ಣವಾಗಿ ಆರಲು ಬಿಡಿ. ಬಾಣಲೆಯಲ್ಲಿನ ಹಿಟ್ಟು ಸಂಪೂರ್ಣವಾಗಿ ಆರಿದ ನಂತರ, ಅದರಲ್ಲಿ ಬೀಸಿದ ಪುಡಿ, ಸಕ್ಕರೆ, ಏಲಕ್ಕಿ, ಗೋಡಂಬಿ, ದ್ರಾಕ್ಷಿಗಳನ್ನೆಲ್ಲಾ ಸೇರಿಸಿ, ಚೆನ್ನಾಗಿ ಹದ ಮಾಡಿಕೊಂಡು ಈಗ ಮೆತ್ತನೆಯ, ಮೃದುವಾದ ಬೇಸನ್ ಲಾಡುಗಳನ್ನು ನಿಮಗೆ ಬೇಕಾದ ಅಳತೆಯಲ್ಲಿ ಕಟ್ಟಿಕೊಳ್ಳಿ. ಈ ರುಚಿಯಾದ ಲಾಡುಗಳು ತಿಂಗಳುಗಳವರೆಗೂ ಏನಾಗದೇ, ತಾಜಾತನವನ್ನು ಉಳಿಸಿ




ಕೊಂಡಿರುವುದೇ ವಿಶೇಷ.

- ಲೀಲಾ ಬಳ್ಳಾರಿ

## ಸೌತೆಕಾಯಿ ಅವಲಕ್ಕಿ

**ಬೇಕಾಗುವ ಸಾಮಗ್ರಿಗಳು**

೨೫೦ ಗ್ರಾಂ ಪೇಪರ್ ಅವಲಕ್ಕಿ, ೨ ಈರುಳ್ಳಿ, ೭-೮ ಹಸಿಮೆಣಸಿನಕಾಯಿ, ೨ ಸೌತೆಕಾಯಿ, ಅರ್ಧ ಬಟ್ಟಲು ಕಾಯಿತುರಿ, ಕರಿಬೇವು, ಕೊತ್ತಂಬರಿ ಸೊಪ್ಪು, ಚಿಟಿಕೆ ಅರಿಶಿಣ, ರುಚಿಗೆ ತಕ್ಕಷ್ಟು ಉಪ್ಪು, ಸಕ್ಕರೆ ಇಲ್ಲವೆ ಬೆಲ್ಲ, ಅರ್ಧ ಲಿಂಬೆಹಣ್ಣು.



**ಮಾಡುವ ವಿಧಾನ**

ಬಾಣಲೆಯಲ್ಲಿ ಎಣ್ಣೆ ಹಾಕಿ, ಎಣ್ಣೆ ಕಾದ ಮೇಲೆ ಸಾಸಿವೆ, ಜೀರಿಗೆ ಹಾಕಿ ನಂತರ ಸಣ್ಣಗೆ ಹೆಚ್ಚಿದ ಈರುಳ್ಳಿ, ಹಸಿಮೆಣಸಿನಕಾಯಿ, ಕರಿಬೇವು ಹಾಕಿ ಚೆನ್ನಾಗಿ ಕರಿಯಬೇಕು. ಈರುಳ್ಳಿ ಕೆಂಪು ಬಣ್ಣಕ್ಕೆ ತಿರುಗಿದ ಮೇಲೆ ಸ್ವಲ್ಪ ಅರಿಶಿಣ ಹಾಕಿ ಕೆಳಗಿಳಿಸಬೇಕು. ನಂತರ ಸೌತೆಕಾಯಿಯನ್ನು ತುರಿದು ಅದರಲ್ಲಿ ಉಪ್ಪು, ಸಕ್ಕರೆ, ಲಿಂಬೆಹಣ್ಣಿನ ರಸವನ್ನು ಹಿಂಡಿ ಹತ್ತು ನಿಮಿಷ ಬಿಡಬೇಕು. ಒಣ ಅವಲಕ್ಕಿಯನ್ನು ಒಗ್ಗರಣೆಯಲ್ಲಿ ಹಾಕಿ ಕಲಸಬೇಕು. ನಂತರ ಸೌತೆಕಾಯಿಯ ಮಿಶ್ರಣವನ್ನು ಹಾಕಿ ಚೆನ್ನಾಗಿ ಕಲಸಬೇಕು. ಕೊನೆಯಲ್ಲಿ ಕಾಯಿತುರಿ ಮತ್ತು ಕೊತ್ತಂಬರಿ ಸೊಪ್ಪನ್ನು ಅವಲಕ್ಕಿಯ ಮೇಲೆ ಹಾಕಿ ಅಲಂಕರಿಸಬೇಕು.

- ಶಾರದಾ ಶ್ರೀಶೈಲ ಮಡಿವಾಳರ

# ಕಿನ್ನಾಳ ಚಿತ್ರಕಲೆಗಾಗಿ ಜೀವ ತೇಯುತ್ತಿರುವ ವೆಂಕೋಬಪ್ಪ

ದೇಹದ ನಾಳನಾಳಗಳಲ್ಲಿ 'ಕಿನ್ನಾಳ' ಚಿತ್ರಕಲೆ ತುಂಬಿಕೊಂಡು, ಕಲೆಗಾಗಿ ಜೀವನವನ್ನು ತೇಯ್ದ ತುಂಬಿದ ಕೊಡ ವೆಂಕೊಬಪ್ಪ.

ಹಣಕ್ಕಾಗಿ ಆಸೆ ಪಡದೆ 'ಕಿನ್ನಾಳ' ಚಿತ್ರಕಲೆಯಲ್ಲಿ ಜೀವನದ ಸಾರ್ಥಕತೆಯನ್ನು ಪಡೆದ ಅಪರೂಪದ ವ್ಯಕ್ತಿ ವೆಂಕೊಬಪ್ಪ. ಅರವತ್ತೈದರ ಹರೆಯದಲ್ಲೂ ಇಪ್ಪತ್ತೈದರ ಹುರುಪು ಇನ್ನೂ ಮಾಸಿಲ್ಲ. ಅದೇ ಶ್ರದ್ಧೆ, ಅದೇ ತನ್ಮಯತೆ. ಚಿತ್ರ ಬರೆಯಲು ಕುಳಿತರೆ, ತೃಪ್ತಿಯಾಗುವವರೆಗೂ ಸಾಧನೆ. ಬದುಕಿರುವವರೆಗೂ ತಮ್ಮ ಕಲಾ ತಪಸ್ಸನ್ನು ಮುಂದುವರೆಸುವ ಬಯಕೆ ಅವರದು.

ತಾತ, ಮುತ್ತಾತರಿಂದ ಈ ಚಿತ್ರಕಲೆಯನ್ನು ಬಳುವಳಿಯಾಗಿ ಪಡೆದ ಅವರು ವೃತ್ತಿ ಜೀವನವನ್ನು ಪ್ರಾರಂಭಿಸಿದ್ದು ಹದಿನೆಂಟರ ಹರೆಯದಲ್ಲಿ. ಯಾವುದೇ ಶಿಕ್ಷಣವನ್ನು ಪಡೆಯದೇ ವಂಶಪರಂಪರಾಗತವಾಗಿ ಬಂದಂಥ ಚಿತ್ರಕಲೆಯಲ್ಲೇ ಜೀವವನ್ನು ತುಂಬಿಸಲು ಪ್ರಾರಂಭಿಸಿದರು.

ಸಂಡೂರಿನ ರಾಜಾಶ್ರಯದಲ್ಲಿ ಕಿನ್ನಾಳ ಚಿತ್ರಕಲೆಗೆ ಬೆಲೆ ಕಂಡುಕೊಂಡ ಇವರ ಪೂರ್ವಜರು ನೂರು ವರ್ಷಕ್ಕೂ ಹಿಂದಿನಿಂದ ಈ ಕಲೆಯನ್ನು ಬೆಳೆಸಿಕೊಂಡು ಬಂದಿದ್ದಾರೆ. ಏಳು ವರ್ಷಗಳ ಹಿಂದೆ ಸಂಡೂರಿನ ರಾಜಮನೆತನದ ಮದುವೆಯ ಕಾಲದಲ್ಲಿ ಇವರ ಚಿತ್ರಕಲೆಯನ್ನು ನೋಡಿ ಘೋರ್ಪಡೆಯವರು ಅಲ್ಲಿಯೇ ತಮ್ಮ ವೃತ್ತಿಯನ್ನು ಮುಂದುವರೆಸಿಕೊಂಡು ಹೋಗಲು ವಿನಂತಿಸಿ ಕೊಂಡರು. ರಾಜಮನೆತನದ ವಿನಂತಿಗೆ ಮನ್ನಣೆಕೊಟ್ಟ ವೆಂಕೊಬಪ್ಪ ಆವಾಗಿನಿಂದ ಸಂಡೂರಿನಲ್ಲಿಯೇ ವೃತ್ತಿಬದುಕನ್ನು ನಡೆಸಿದ್ದಾರೆ.

## ಅಪೂರ್ವ ಚಿತ್ರಕಲೆ

ತೈಲವರ್ಣದಂತೆ ಕಾಣುವ ಕಿನ್ನಾಳ ಚಿತ್ರಗಳು ಕಾಗದದ ಮೇಲೆ ಅರಳದೆ ಕಟ್ಟಿಗೆಯ ಬೋರ್ಡಿನ ಮೇಲೆ ಅರಳುತ್ತವೆ. ಬಣ್ಣಗಳನ್ನು ಚಿತಕಾರರು ತಾವೇ ತಯಾರಿಸುತ್ತಾರೆ. ಮೇಣದಂತೆ ಕಾಣುವ ಪದಾರ್ಥದಿಂದ



ಕಿನ್ನಾಳ ಕಲೆ

ಬಣ್ಣವನ್ನು ತಯಾರಿಸುತ್ತಾರೆ. ಗೋಡೆ, ಟೇಬಲ್ಲುಗಳನ್ನು ಅಲಂಕರಿಸುವ ಈ ಚಿತ್ರಗಳು ವರ್ಷಾನುಗಟ್ಟಲೆ ಹಾಳಾಗದೆ ಇರುತ್ತವೆ.

ಸಾಮಾನ್ಯವಾಗಿ ಹಳದಿ ಮತ್ತು ಕೆಂಪು ಬಣ್ಣದಿಂದ ಕೂಡಿದ ಚಿತ್ರಗಳು ಬೋರ್ಡಿನ ಮೇಲೆಲ್ಲ ಓಡಾಡಿಕೊಂಡು ರಂಗೋಲಿಯ ಕಂಪನ್ನು ಬೀರುತ್ತವೆ. ಬಳ್ಳಿಬಳ್ಳಿಗಳು ಬೆಸೆದುಕೊಂಡು ಹೂವರಳಿ, ಹಕ್ಕಿಗಳು ಜೀವ ಪಡೆದು ಇಂಪನ್ನು ನೀಡುತ್ತವೆ. ನೋಡುವ ನೋಟಗಳಿಗೆ ಸಂಮ್ಮೋಹನಾಸ್ತ್ರ ಬೀರಿ ತನ್ನತ್ತ ಸೆಳೆಯುವ ಶಕ್ತಿಯಿದೆ ಈ ಚಿತ್ರಗಳಿಗೆ.

ಸೂಕ್ಷ್ಮವಾದ ವಿನ್ಯಾಸಗಳಿಂದ ಕೂಡಿದ ಚಿತ್ರಗಳನ್ನು ಬರೆಯಲು ಚಿತ್ರಕಾರರಿಗೆ ಎರಡು ಮೂರು ತಿಂಗಳುಗಳಾದರೂ ಬೇಕು. ಸುಮಾರು ಎರಡರಿಂದ ಮೂರು ಸಾವಿರ ರೂಪಾಯಿಯಷ್ಟು ಮೌಲ್ಯ ತರುತ್ತವೆ ಚಿಕ್ಕ ಚಿತ್ರಗಳು. ದೊಡ್ಡ ಚಿತ್ರಗಳು ಹತ್ತರಿಂದ ಇಪ್ಪತ್ತು ಸಾವಿರದವರೆಗೂ ಬೆಲೆ ತರಬಲ್ಲವು. ಬೆಂಗಳೂರಿನಲ್ಲಿ ನಡೆದ ಚಿತ್ರಪ್ರದರ್ಶನದಲ್ಲಿ ಸುಮಾರು ಇಪ್ಪತ್ತು ವರ್ಷಗಳ ಹಿಂದೆ ಏಳು ಸಾವಿರ ಬೆಲೆ ತಂದುಕೊಟ್ಟ ನಿದರ್ಶನವೂ ಇದೆ.

## ಮೂರ್ತಿಗಳಿಗೆ ಜೀವ

ಕಿನ್ನಾಳ ಚಿತ್ರ ಬಿಡಿಸುವುದರ ಜೊತೆಗೆ ಕಟ್ಟಿಗೆಯ ಮೂರ್ತಿ ತಯಾರಿಕೆ, ಚನ್ನಪಟ್ಟಣ ಬೊಂಬೆಯ ಮಾದರಿಯ ಬೊಂಬೆ ಹಾಗೂ ಲಂಬಾಣಿ ವೇಷದ ಬೊಂಬೆಗಳನ್ನು ವೆಂಕೊಬಪ್ಪ ತಯಾರಿಸುತ್ತಾರೆ. ವೆಂಕೊಬಪ್ಪನವರ ನುರಿತ ಕೈಗಳ ಕೆಳಗೆ ಕಟ್ಟಿಗೆಯ ತುಂಡುಗಳೂ ಕೂಡ ಸುಂದರ ರೂಪ ಪಡೆದುಕೊಂಡಿವೆ. ಮೂರ್ತಿಯಾಗಲಿ, ಬೊಂಬೆಯಾಗಲಿ ಅವರು ತಮ್ಮ ತನ್ಮಯತೆ, ಶ್ರದ್ಧೆಯನ್ನು ಕಳೆದುಕೊಳ್ಳುವುದಿಲ್ಲ.

ಕಟ್ಟಿಗೆಯ ಮೂರ್ತಿಗಳಿಗೆ ಹುಣಸೆ ಪುಡಿ, ಕಟ್ಟಿಗೆಯ ಪುಡಿ ಮಿಶ್ರಣದ ಲೇಪವನ್ನು ಹಚ್ಚಿ ನುಣುಪು ಮಾಡಿ ನಂತರ ಬಣ್ಣವನ್ನು ಬಳಿಯುತ್ತಾರೆ. ಲಂಬಾಣಿ ವೇಷದ ಬೊಂಬೆ ಗಳನ್ನು ಸ್ಪಂಜು, ಬಟ್ಟೆಗಳಿಂದ ಸುತ್ತಿ ನಂತರ ಸಾಂಪ್ರದಾಯಿಕ ಲಂಬಾಣಿ ಉಡುಗೆಯನ್ನು ತೊಡಿಸುತ್ತಾರೆ. ಈ ಕೆಲಸವೂ ವೆಂಕೊಬಪ್ಪನವರಿಗೆ ಉತ್ತಮ ಆದಾಯವನ್ನು ತಂದು ಕೊಟ್ಟಿದೆ.

ವೆಂಕೊಬಪ್ಪನವರ ಕುಟುಂಬದಲ್ಲಿ ಅವರೊಬ್ಬರೇ ಉಳಿದ ವೃತ್ತಿಪರ ಚಿತ್ರಕಾರ. ಅವರ ಮಗ ಅಧ್ಯಾಪಕನಾಗಿದ್ದು ಹವ್ಯಾಸಕ್ಕಾಗಿ ಮಾತ್ರ ಚಿತ್ರ ಬರೆಯುತ್ತಾರೆ. ತಮ್ಮ ಕಲೆಯನ್ನು ಇತರರರಿಗೂ ಕಲಿಸಿಕೊಟ್ಟ ಅವರಿಗೆ ಈ ಅಪೂರ್ವ ಚಿತ್ರಕಲೆಯ ಅಳಿವಿನ ಬಗ್ಗೆ ಯಾವ ಚಿಂತೆಯೂ ಇಲ್ಲ. ಎಲೆಮರೆಯ ಕಾಯಿಯಂತಿರುವ ವೆಂಕೊಬಪ್ಪನವರಿಗೆ ಪ್ರಶಸ್ತಿಗಳ ಬಯಕೆಯಿಲ್ಲ. ಅವರ ಜೀವನ ಒಂದು ತುಂಬಿದ ಕೊಡ.

ಒಂದು ಸುಂದರ ಕಿನ್ನಾಳ ಚಿತ್ರ ಸೃಷ್ಟಿಯಾದಾಗ, ಕಟ್ಟಿಗೆಯ ತುಂಡು ಮೂರ್ತಿವೆತ್ತಾಗ ದೇಶ ಜಯಿಸಿ ಬಂದಷ್ಟು ಸಂತೋಷ ವೆಂಕೊಬಪ್ಪನವರಿಗೆ. ಕಣ್ಣಲ್ಲಿನ ಮಿಂಚು ಮತ್ತೊಂದು ಹೊಸ ಸೃಷ್ಟಿಗೆ ಅನ್ವೇಷಣೆ ಪ್ರಾರಂಭಿಸಿರುತ್ತದೆ.

○ ಪ್ರಸಾದ ನಾಯಕ
ಏಷ್ಯನ್ ಕಾಲೇಜ್ ಅಫ್ ಜರ್ನಲಿಸಂ,
ಬೆಂಗಳೂರು

ಗ್ರಾಮೀಣಾಭಿವೃದ್ಧಿ, ಬಡತನ ನಿರ್ಮೂಲನ... ಇವು ಪ್ರತಿಯೊಬ್ಬ ರಾಜಕಾರಣಿಯ ಭಾಷಣದ ಪ್ರಮುಖ ಅಂಶಗಳು. ಆದರೆ ಈ ದಿಸೆಯಲ್ಲಿ ಕಾರ್ಯ ಪ್ರವೃತ್ತರಾಗಿರುವವರು ಇಲ್ಲವೆಂದೇ ಹೇಳಬಹುದು. ಆದರೆ ಮಾಜಿ ಪಂಚಾಯತ್ ರಾಜ್ ಮಂತ್ರಿ ಎಂ.ವೈ. ಘೋರ್ಪಡೆ ಇದಕ್ಕೆ ಅಪವಾದ. ಅವರೂ ಈ ವಿಷಯಗಳ ಕುರಿತು ಮಾತನಾಡಿದರು. ಆದರೆ ಅವರ ಈ ವಿಚಾರ ಧಾರೆ ಸುಮ್ಮನೇ ಹರಿದು ವ್ಯರ್ಥವಾಗಲಿಲ್ಲ. ಅವರು ಹೇಳಿದ್ದನ್ನು ಮಾಡಿ ತೋರಿಸಿದರು. ಅದರ ಫಲವಾಗಿ ಸಂಡೂರು ಕುಶಲ ಕಲಾ ಕೇಂದ್ರ ತಲೆಯೆತ್ತಿ ನಿಂತಿದೆ.

ಸಂಡೂರು ಎಂದೊಡನೆ ಮ್ಯಾಂಗನೀಸ್ ಗಣಿ, ಅದಿರು ಸಂಸ್ಕರಣಾ ಘಟಕಗಳು ಮಾತ್ರ ನಮ್ಮ ನೆನಪಿಗೆ ಬರುತ್ತವೆ. ಆದರೆ ಸಂಡೂರಿಗೆ ಹೋದ ಪ್ರತಿಯೊಬ್ಬನೂ ಬೇಟಿ ನೀಡಬೇಕಾದ ಇನ್ನೊಂದು ಸ್ಥಳವೆಂದರೆ ಕುಶಲ ಕಲಾ ಕೇಂದ್ರ.

ಕುಶಲ ಕಲಾ ಕೇಂದ್ರವು ೧೯೮೪ರಲ್ಲಿ ಕೇವಲ ೧೧ ಜನರೊಂದಿಗೆ ಪ್ರಾರಂಭವಾಯಿತು. ಇಂದು ಇಲ್ಲಿ ಸುಮಾರು ೨೦೦ ಕೆಲಸಗಾರರಿದ್ದು, ಅದು ಸಂತೃಪ್ತ ಸ್ಥಿತಿಯನ್ನು ತಲುಪಿದೆ ಎಂದು ಕೇಂದ್ರದ ಕಾರ್ಯದರ್ಶಿ ಎ. ವೀರಣ್ಣ ತಿಳಿಸಿದರು.

ಕುಶಲ ಕಲಾ ಕೇಂದ್ರದ ಆವರಣದಲ್ಲಿ ಕಸೂತಿ, ಬಿದಿರಿನ ಕೆಲಸ, ಕಲ್ಲು ಮತ್ತು ಮರಗಳಲ್ಲಿ ಕೆತ್ತನೆ, ಚರ್ಮದ ಚಪ್ಪಲಿ ತಯಾರಿಕೆ ಮುಂತಾದ ಕೆಲಸಗಳು ನಡೆಯುವುದನ್ನು ಕಾಣಬಹುದು. ಮೂಲೆ ಗುಂಪಾಗುತ್ತಿರುವ ಸಾಂಪ್ರದಾಯಿಕ ಕಲೆಗಳಿಗೆ ಆಧುನಿಕತೆಯ ಮೆರುಗು ನೀಡಿ ಹೊಸ ಜೀವ ತುಂಬಲು ಈ ಕೇಂದ್ರ ಪ್ರಯತ್ನಿಸುತ್ತಿದೆ.

ಸಂಡೂರಿನ ಸುತ್ತಮುತ್ತ ಲಂಬಾಣಿಗಳು ಹೆಚ್ಚಿನ ಸಂಖ್ಯೆಯಲ್ಲಿದ್ದು, ಅವರು ಆರ್ಥಿಕವಾಗಿ ಹಿಂದುಳಿದವರು. ಇವರ ಬಡತನ ಹೋಗಲಾಡಿಸುವುದಕ್ಕಾಗಿ ಇವರ ಕೌಶಲವನ್ನೇ ಇಲ್ಲಿ ಬಂಡವಾಳವಾಗಿರಿಸಿಕೊಳ್ಳಲಾಗಿದೆ.

ಲಂಬಾಣಿ ಸ್ತ್ರೀಯರು ತಮ್ಮ ಉಡುಪುಗಳಿಗೆ ಮಾಡುತ್ತಿದ್ದ ಕಸೂತಿಯನ್ನು ಕೈಚೀಲ, ಸಂಚಿ, ಕುಶನ್ ಮುಂತಾದವುಗಳಲ್ಲಿಯೂ ಬಳಸುವ ಮೂಲಕ ಅವರ ಕೌಶಲವನ್ನು ಅಂತರಾಷ್ಟ್ರೀಯ ಮಟ್ಟದಲ್ಲಿ ಜನಪ್ರಿಯಗೊಳಿಸಿದ ಹೆಗ್ಗಳಿಕೆ ಸಂಡೂರು ಕುಶಲ ಕಲಾ ಕೇಂದ್ರದ್ದು.

ಬೆಂಗಳೂರಿನಿಂದ ವಿನ್ಯಾಸಕಾರರು ಬಂದು ವಿನ್ಯಾಸಗಳನ್ನು ಬರೆದು ಕೊಡುತ್ತಾರೆ. ಈ ವಿನ್ಯಾಸಗಳೊಡನೆ ಕಸೂತಿಗೆ ಅಗತ್ಯವಾಗಿರುವ ಬಟ್ಟೆ, ಕನ್ನಡಿ, ನೂಲು ಮೊದಲಾದ ವಸ್ತುಗಳನ್ನೂ ಲಂಬಾಣಿ ಸ್ತ್ರೀಯರಿಗೆ ಒದಗಿಸಲಾಗುತ್ತದೆ.



ಸಂಡೂರು ಕುಶಲ ಕಲಾಕೇಂದ್ರ

## ಸಂಡೂರು ಕುಶಲ ಕಲಾಕೇಂದ್ರ



## ಇಲ್ಲಿನ ಉಡುಪುಗಳಿಗೆ ವಿದೇಶಗಳಲ್ಲೂ ಬೇಡಿಕೆ!

ಕಸೂತಿ ಹಾಕಿದ ನಂತರ ಈ ಬಟ್ಟೆಗಳನ್ನು ತಯಾರಿಕಾ ಕೇಂದ್ರಗಳಿಗೆ ಕಳುಹಿಸಲಾಗುತ್ತದೆ. ಅಲ್ಲಿ ಕೈಚೀಲ, ಸಂಚಿ, ದುಪಟ್ಟಾ, ಕುಶನ್ ಹೊದಿಕೆ, ಓವರ್ ಕೋಟುಗಳನ್ನು ಹೊಲಿಯಲಾಗುತ್ತದೆ. ಈ ವಸ್ತುಗಳನ್ನು ಇಂಗ್ಲಂಡ್, ಯು.ಎಸ್.ಎ., ಇಟಲಿ, ಸ್ವಿಟ್ಸರ್‌ಲೆಂಡ್ ಮತ್ತು ಫ್ರಾನ್ಸ್‌ಗಳಿಗೆ ರಫ್ತು ಮಾಡಲಾಗುತ್ತಿದೆ.

ಲಂಬಾಣಿ ಮಹಿಳೆಯರು ಎಷ್ಟು ಬಟ್ಟೆಗೆ ಕಸೂತಿ ಹಾಕಿದ್ದಾರೆಂಬ ಆಧಾರದ ಮೇಲೆ ವೇತನ ನೀಡಲಾಗುತ್ತಿದೆ. ಇವರು ದಿನಕ್ಕೆ ಸುಮಾರು ೩೦ರಿಂದ ೪೦ ರೂಪಾಯಿ ಸಂಪಾದನೆ ಮಾಡುತ್ತಾರೆಂದು ವೀರಣ್ಣ ಹೇಳಿದರು.

ಬಿದಿರು ಮತ್ತು ಬೆತ್ತಗಳನ್ನು ಉಪಯೋಗಿಸಿ ಪೀಠೋಪಕರಣಗಳು, ವಿವಿಧ ಮಾದರಿ ಬುಟ್ಟಿಗಳು, ಟೇಬಲ್ ಲ್ಯಾಂಪ್‌ಗಳು ಹಾಗೂ ಅಲಂಕಾರಿಕ ಸಾಮಗ್ರಿಗಳನ್ನು ಇಲ್ಲಿ ತಯಾರಿಸಲಾಗುತ್ತದೆ. ಈ ವಿಭಾಗದಲ್ಲಿ ೧೫ ಮಹಿಳೆಯರೂ ಸೇರಿದಂತೆ ಒಟ್ಟು ೫೦ ಜನ ಕೆಲಸ ಮಾಡುತ್ತಿದ್ದಾರೆ. ಅವರಲ್ಲಿ ಇಬ್ಬರು ಬೆಂಗಳೂರಿನಲ್ಲಿ ಆರು ತಿಂಗಳ ತರಬೇತಿ ಪಡೆದಿದ್ದು, ಉಳಿದವರಿಗೆ ಮಾರ್ಗದರ್ಶನ ನೀಡುತ್ತಿದ್ದಾರೆ. ಉಳಿದ ಕೆಲಸಗಾರರೂ, ವಿಶ್ವ, ಟ್ರೈಸಂ ಯೋಜನೆಗಳಡಿಯಲ್ಲಿ ಸರಕಾರವು ನೀಡಿದ ತರಬೇತಿಯನ್ನು ಸದುಪಯೋಗಪಡಿಸಿಕೊಂಡಿದ್ದಾರೆ. ಇವರು ದಿನಕ್ಕೆ ಸುಮಾರು ೪೦ರಿಂದ ೧೦೦ ರೂಪಾಯಿ ಗಳಿಸುತ್ತಾರೆ.

ಕುಶಲ ಕಲಾಕೇಂದ್ರದ ಇನ್ನೊಂದು ಕೊಡುಗೆ-ಕಲ್ಲು ಮತ್ತು ಮರಗಳ ಕೆತ್ತನೆ. ಈ ಕಲೆಯು ಸ್ಥಳೀಯ ಬೇಡಿಕೆಗಳನ್ನು ಪೂರ್ತಿಗೊಳಿಸುವುದಕ್ಕಷ್ಟೇ ಸೀಮಿತವಾಗಿದೆ. ಸಂಡೂರಿನ ಸುತ್ತಮುತ್ತಲಿನ ದೇವಾಲಯಗಳಿಗೆ ಅಗತ್ಯವಾದ ಮೂರ್ತಿಗಳನ್ನು ಇಲ್ಲೇ ಕೆತ್ತಲಾಗುತ್ತಿದೆ.

ಉತ್ತಮ ಗುಣಮಟ್ಟದ ಚರ್ಮವನ್ನು ಬಳಸಿ, ಕೊಲ್ಹಾಪುರ ಮಾದರಿಯ ಚಪ್ಪಲಿಗಳನ್ನು ಇಲ್ಲಿ ತಯಾರಿಸಲಾಗುತ್ತದೆ. ಆದರೆ ಇದು ಕೂಡಾ ಸ್ಥಳೀಯ ಬೇಡಿಕೆಯನ್ನು ಮಾತ್ರ ಪೂರೈಸುತ್ತದೆ.

ಸಂಡೂರು ಕುಶಲ ಕಲಾ ಕೇಂದ್ರವು ಸಂಡೂರು ಗ್ರೂಪ್ ಆಫ್ ಕಂಪನೀಸ್‌ನ ಸಹಸಂಸ್ಥೆಯಾಗಿದೆ. ಅದು ಉತ್ಪನ್ನಗಳ ಮಾರಾಟವನ್ನು ವೃದ್ಧಿಸಲು ಸ್ವತಃ ವಸ್ತು ಪ್ರದರ್ಶನಗಳನ್ನು ನಡೆಸುತ್ತದೆಯಲ್ಲದೆ ಇತರ ವಸ್ತು ಪ್ರದರ್ಶನಗಳಲ್ಲೂ ಭಾಗವಹಿಸುತ್ತದೆ. ಸಂಡೂರಿನಲ್ಲಿ ಕುಶಲ ಕಲಾ ಕೇಂದ್ರವು ಎಂಪೋರಿಯಂನ್ನೂ ಹೊಂದಿದೆ.

ಇಲ್ಲಿ ಶಿಲ್ಪಕಲೆಯಾಗಲೀ, ಕಸೂತಿಯಾಗಲೀ, ಚರ್ಮದ ಕೆಲಸವಾಗಲೀ-ಎಲ್ಲಾದಕ್ಕೂ ಆಯಾ ಹಿನ್ನೆಲೆಯಿಂದ ಬಂದ ಸ್ಥಳೀಯ ನಿರುದ್ಯೋಗಿಗಳನ್ನೇ ಆಯ್ದುಕೊಳ್ಳಲಾಗುತ್ತಿದೆ. ಇದರಿಂದಾಗಿ ನಿರುದ್ಯೋಗಿಗಳಿಗೂ ಒಂದು ನೆಲೆ ಸಿಕ್ಕಂತಾಗಿದೆ; ಅಷ್ಟೇ ಅಲ್ಲ, ಗ್ರಾಮೀಣ ಕಲೆ, ಕೌಶಲಗಳು ಅಂತರಾಷ್ಟ್ರೀಯ ನೆಲೆಯಲ್ಲಿ ಮಿಂಚುವಂತಾಗಿದೆ. ಆದ್ದರಿಂದ ಇದನ್ನು ಕಲಾ-ಉದ್ಯಮ ಎನ್ನುವುದರಲ್ಲಿ ತಪ್ಪೇನಿಲ್ಲ.

**○ ಸಹನಾ ಎಂ.**

ಏಷ್ಯನ್ ಕಾಲೇಜ್ ಆಫ್ ಜರ್ನಲಿಸಂ
ಬೆಂಗಳೂರು

---



ಮೇಲೆ
ಕಾಂಗ್ರೆಸ್
ಧ್ವಜದಲ್ಲಷ್ಟೇ ಅಲ್ಲ
ಈಗ
ಕಾಂಗ್ರೆಸ್ ಪಕ್ಷದಲ್ಲೂ
ಮೇಲೆ
'ಕೇಸರಿ'

- ನೀ. ಶ್ರೀಶೈಲ



ನಂಟು
ಹೃದಯಕ್ಕೆ
ಹತ್ತಿರವಾದವರು
ದೃಷ್ಟಿಯಿಂದ
ದೂರವಾದರೂ
ನೆನಪಿನಲ್ಲೇ
ನಿಂತಿರುತ್ತಾರೆ.

-ಜೆ. ಪ್ರೇಮಾನಂದ



ಜೀವನ
ಅಂದ್ರ ಬರೀ
ಭಾವನೆ
ಅಲ್ರೀ
ಅದನ್ನು
ಸಾಕಾರಗೊಳಿಸೋ
ಯಾನ

**- ಯೋಗಾನಂದ ಶಿರಿಗೇರಿ**

# ಕ್ರಿಕೆಟ್ ತಾರೆಗಳ ಕಾಣದ ಮುಖ



ಸೌರವ್ ಗಂಗೂಲಿ

## ನಾಯಿ ಕಂಡರೆ ಆಗದು



ಅಜೇಯ್ ಜಡೇಜ

## ಹುಡುಗಿಯರಿಗೆ ಅಚ್ಚುಮೆಚ್ಚು



ರಾಹುಲ್ ದ್ರಾವಿಡ್

## ಅಮ್ಮನ ಅಡುಗೆಯೇ ಬೇಕು

**ಬಂ**ಗಾಳದ Bradman ಎಂದೇ ನಿಕ್‌ನೇಮ್ ಪಡೆದಿರುವ ಸೌರವ್ ಗಂಗೂಲಿ ೧೯೭೩ರಂದು ಪಶ್ಚಿಮ ಬಂಗಾಳದ ಚಂಡಿದಾಸ್ ಗಂಗೂಲಿಯ ಮಗನಾಗಿ ಜನಿಸಿದ. ಪ್ರಾಥಮಿಕ ಶಾಲೆಯಿಂದಲೇ ಕ್ರಿಕೆಟ್‌ನಲ್ಲಿ ಆಸೆ ಹೊಂದಿದ್ದ ಈ ಹುಡುಗ ತನ್ನ ಸಹೋದರ ಸ್ನೇಹಶಿಶ್ ಗಂಗೂಲಿ ಜೊತೆ ರಣಜಿ ಟ್ರೋಫಿಯಲ್ಲಿ ಅತ್ಯುತ್ತಮ ಸಾಧನೆ ಮಾಡಿ ೧೯೯೧-೯೨ರಲ್ಲಿ ಆಸ್ಟ್ರೇಲಿಯಾ ಪ್ರವಾಸಕ್ಕೆ ಭಾರತ ತಂಡಕ್ಕೆ ಆಯ್ಕೆಯಾದರು. ೫ ವರ್ಷಗಳ ಅಜ್ಞಾತವಾಸದ ನಂತರ ೧೯೯೬ರಲ್ಲಿ ಇಂಗ್ಲೆಂಡ್ ವಿರುದ್ಧ ೨ ಶತಕಗಳನ್ನು ಸಿಡಿಸಿ ೩ನೇ ಶತಕ ವಂಚಿತರಾಗಿ ಈಗ ಸಾವಿರ ರನ್ನುಗಳ ಒಡೆಯರಾಗಿದ್ದಾರೆ (೧೨೩೪). ತಮ್ಮ ವಿಚಿತ್ರ ಬೌಲಿಂಗ್ ಶೈಲಿಯಿಂದ ಸಹಾರ ಕಪ್‌ನಲ್ಲಿ ಪಾಕಿಸ್ತಾನವನ್ನು ದೂಳಿಪಟ ಮಾಡಿ ೧೬ ರನ್ನಿಗೆ ೫ ವಿಕೆಟ್ ಪಡೆದು ದಾಖಲೆ ಪುಸ್ತಕ ಸೇರಿದರು. ತನ್ನ ಕಾಲೇಜ್ ಜೀವನದಲ್ಲಿ ಪ್ರೀತಿಸಿದ ಹುಡುಗಿಯನ್ನೇ ಮದುವೆಯಾಗಿ ಕಳೆದ ಜುಲೈ ೮ರಂದು ೨೫ನೇ ಹುಟ್ಟುಹಬ್ಬಕ್ಕೆ ಕಾಲಿಟ್ಟರು.

ಸೌರವ್ ಗಂಗೂಲಿಗೆ ಕ್ರಿಕೆಟ್‌ನಲ್ಲಿ ಅಷ್ಟೇ ಅಲ್ಲಾ, ಫುಟ್‌ಬಾಲ್‌ನಲ್ಲಿಯೂ ಆಸಕ್ತಿ. ಸಿನಿಮಾದಲ್ಲಿ ಅಮಿತಾಬ್ ಬಚನ್ ಹಾಗೂ ಶ್ರೀದೇವಿ ಫೇವರೇಟ್‌ಗಳು. ''೧೯೪೨ ಎ ಲವ್ ಸ್ಟೋರಿ'' ಸಿನಿಮಾ ಮನದಾಳದಲ್ಲಿ ಉಳಿದು ಕೊಂಡ ಚಿತ್ರ. ನಾಯಿಗಳನ್ನು ಕಂಡರೆ ಸೌರವ್‌ಗೆ ಆಗದು. ರಜಾದಿನಗಳನ್ನು ಅಮೆರಿಕಾದಲ್ಲಿ ಕಳೆಯುತ್ತಾರೆ.

**ಅ**ಜಯ್ ಸಿಂಗ್ ದೌಲತ್ ಸಿಂಗ್ ಜಡೇಜ ಎಂಬ ಉದ್ದನೆ ಹೆಸರಿನ ಮುದ್ದು ಮುಖದ ಹರಿಯಾಣದ ಈ ಹುಡುಗ ಭಾರತ ತಂಡದ ಆಪದ್ಬಾಂಧವ ಎಂದೇ ಖ್ಯಾತಿ ಪಡೆದಿರುವರು. ಹರಿಯಾಣದ ರಾಜವಂಶದಲ್ಲಿ ಹುಟ್ಟಿದ ಜಡೇಜ ೧೯೮೩ರಲ್ಲಿ ೩ನೇ ವಿಶ್ವಕಪ್‌ನ್ನು ವೀಕ್ಷಿಸಲು ತನ್ನ ತಾತನ ಜೊತೆ ಹೋಗಿದ್ದಾಗ ಕಪಿಲ್‌ದೇವ್ ಆಟದಿಂದ ಪ್ರಭಾವಿತರಾಗಿ ಮುಂದೆ ರಣಜಿಯಲ್ಲಿ ಮಿಂಚಿ ಭಾರತ ತಂಡಕ್ಕೆ ಆಯ್ಕೆಯಾದರು. ಒನ್‌ಡೇ ಪಂದ್ಯದಲ್ಲಿ ೨೫೧೭ರನ್‌ಗಳನ್ನು ಗಳಿಸಿ ೨ ಶತಕಗಳನ್ನು ದಾಖಲಿಸಿದ್ದಾರೆ. ಸೌಮ್ಯ ಮುಖ ಮತ್ತು ದಟ್ಟ ಮೈಕಟ್ಟನ್ನು ಹೊಂದಿರುವ ಇವರು ಹುಡುಗಿಯರಿಗೆ ತುಂಬಾ ಅಚ್ಚುಮೆಚ್ಚು. ಬೆಂಗಳೂರಿನ ಚಿನ್ನಸ್ವಾಮಿ ಕ್ರಿಡಾಂಗಣವನ್ನು ಮೆಚ್ಚುತ್ತಾರೆ. ಕಲ್ಕತ್ತಾದ ಈಡನ್‌ಗೌರ್ಡನ್ ಮೈದಾನ ಎಂದರೆ ಆಗದು. ''ಶೋಲೆ'' ಹಿಂದಿ ಚಲನಚಿತ್ರವನ್ನು ಮೆಚ್ಚುವ ಇವರಿಗೆ ದಿಲೀಪ್‌ಕುಮಾರ್ ಕಂಡರೆ ತುಂಬ ಇಷ್ಟ. ರಜಾ ದಿನಗಳನ್ನು ಇಂಗ್ಲೆಂಡ್‌ನಲ್ಲಿ ಕಳೆಯಲು ಆಸೆ. ಜೀನ್ಸ್‌ಪ್ಯಾಂಟ್ ಮತ್ತು ಶರ್ಟ್‌ನ್ನು ಹೆಚ್ಚಾಗಿ ಧರಿಸುತ್ತಾರೆ. ಸಂಗೀತದಲ್ಲಿ ತುಂಬ ಆಸಕ್ತಿ ಇದೆ. ದೇವರಲ್ಲಿ ತುಂಬ ಭಕ್ತಿ ಹೊಂದಿದ್ದಾರೆ. ಟೈಂಸ್ ಆಫ್ ಇಂಡಿಯಾ ದಿನಪತ್ರಿಕೆ ಹಾಗೂ ಸ್ಪೋರ್ಟ್ಸ್‌ಸ್ಟಾರ್ ವಾರಪತ್ರಿಕೆ ಓದುತ್ತಾರೆ. ಮಾಂಸದ ಊಟ ಎಂದರೆ ತುಂಬ ಇಷ್ಟ.

**ಒ**ಮ್ಮೆ ಒಬ್ಬ ಬಾಲಕ ಅಂತರ್‌ಶಾಲಾ ಜ್ಯೂನಿಯರ್ ಕ್ರಿಕೆಟ್ ಫೈನಲ್‌ನಲ್ಲಿ ರನ್‌ಔಟ್ ಆಗಿ ಪೆವಿಲಿಯನ್‌ನ ಹಾದಿಯುದ್ದಕ್ಕೂ ಅಳುತ್ತಾ ಬಂದ. ಅಳುತ್ತಾ ಬಂದ ಈ ಬಾಲಕ ಯಾರೂ ಅಲ್ಲ. ಭಾರತ ಕ್ರಿಕೆಟ್‌ನ ನಂಬಿಗಸ್ಥ ಆಟಗಾರ ಕರ್ನಾಟಕದ ಕಣ್ಮಣಿ ರಾಹುಲ್ ದ್ರಾವಿಡ್. ದ್ರಾವಿಡ್ ತನ್ನ ತಾಯಿಯ ಪ್ರೋತ್ಸಾಹದಿಂದ ಕ್ರಿಕೆಟ್‌ಗೆ ಕಾಲಿಟ್ಟರು. ಇವರು ಮೊದಲು ಬಯಸಿದ್ದು ಡಾಕ್ಟರ್ ಅಥವಾ ಇಂಜಿನಿಯರ್ ಆಗಲು. ಇವರು ಟೆಸ್ಟ್ ಕ್ಯಾಪ್ ನನ್ನ ಆಸ್ತಿ ಎಂದು ಹೇಳುತ್ತಾರೆ. ಗವಾಸ್ಕರ್, ಕಪಿಲ್, ವಿಶ್ವನಾಥರನ್ನು ತಮ್ಮ ಕ್ರಿಕೆಟ್ ಹೀರೋ ಎನ್ನುತ್ತಾರೆ. ಪ್ರಸಾದ್, ಶ್ರೀನಾಥ್, ಕುಂಬ್ಳೆ ಪ್ರೋತ್ಸಾಹವನ್ನು ಸ್ಮರಿಸುವರು. ಕಲ್ಕತ್ತಾದ ಈಡನ್‌ಗೌರ್ಡನ್ ಮೈದಾನ ಇವರಿಗೆ ಮೆಚ್ಚುಗೆ. ರಾಹುಲ್ ಕಾದಂಬರಿಗಳನ್ನು ಕಥೆ ಪುಸ್ತಕಗಳನ್ನು ಓದುತ್ತಾರೆ. ದಿನ ಪತ್ರಿಕೆಗಳಲ್ಲಿ ಹಿಂದೂ, ಡೆಕ್ಕನ್ ಹೆರಾಲ್ಡ್, ವಾರಪತ್ರಿಕೆಗಳಲ್ಲಿ ಸ್ಪೋರ್ಟ್ಸ್‌ಸ್ಟಾರ್ ಇಷ್ಟ. ಮಾತೃ ಭಾಷೆ ಹಿಂದಿ. ಕನ್ನಡ ಸ್ವಲ್ಪ ಮಟ್ಟಿಗೆ ಬರುತ್ತದೆ. ಕ್ರಿಕೆಟ್ ಅಲ್ಲದೆ ಗಾಲ್ಫ್, ಟೆನಿಸ್, ಆಡುತ್ತಾರೆ. ಗೋಸ್ಟ್ (ಇಂಗ್ಲೀಷ್) ಚಲನಚಿತ್ರ ಮೆಚ್ಚುತ್ತಾರೆ. ದ್ರಾವಿಡ್‌ಗೆ ಹಿಂದಿಯ ಅಮೀರ್‌ಖಾನ್, ಮನೀಷಾ ಕೋಯಿರಾಲಾ ಇಷ್ಟವಂತೆ. ಚಿಕನ್, ಮೀನು ಇಷ್ಟ ಪಡುತ್ತಾರೆ. ಅಮ್ಮನ ಕೈಯ ಅಡುಗೆಯೇ ಆಗಬೇಕು.

ರಜಾ ದಿನಗಳನ್ನು ನೈರೋಬಿ ಅಥವಾ ಗೋವಾದಲ್ಲಿ ಕಳೆಯಲು ಪ್ಲಾನ್. ಜೀನ್ಸ್ ಪ್ಯಾಂಟ್ ಮತ್ತು ಕ್ಯಾಶುವಲ್ ಶರ್ಟ್‌ಗಳನ್ನು ಹೆಚ್ಚಾಗಿ ಧರಿಸುತ್ತಾರೆ. ಜೀವನದಲ್ಲಿ ಮಾನವೀಯ ವ್ಯಕ್ತಿಯಾಗಿ ಬೆಳೆಯಬೇಕೆಂದು ರಾಹುಲ್ ದ್ರಾವಿಡರ ಆಸೆ.

○ ಪಿ. ರವಿಕುಮಾರ್

ಏಳೇ ವರ್ಷಗಳಲ್ಲಿ ಅಂತಾರಾಷ್ಟ್ರೀಯ ಸ್ಪರ್ಧೆಗಳಲ್ಲಿ ೪೪ ಪದಕಗಳ ಸಾಧನೆ ಕಡಿಮೆಯೇನಲ್ಲ. ಪುರುಷರ ಸಾಮರ್ಥ್ಯಕ್ಕೆ ಸವಾಲಾಗಬಲ್ಲ ಇದನ್ನು ಸಾಧಿಸಿದ್ದು ಓರ್ವ ಮಹಿಳೆ ಎನ್ನುವದು ಇನ್ನಷ್ಟು ವೈಶಿಷ್ಟ್ಯಪೂರ್ಣ ವಿಷಯವೇ ನಿಜ. ಈ ಸಾಧನೆಗೈದಾಕೆ ೨೬ ವರ್ಷ ವಯಸ್ಸಿನ 'ಲಿಫ್ಟರ್' ಕುಂಜುರಾಣಿ ದೇವಿ. ಅಂತಾರಾಷ್ಟ್ರೀಯ ಭಾರ ಎತ್ತುವ ಪರಿಷತ್ತು

ಆದರೆ ಒಮ್ಮೆ ತಮ್ಮ ಚಿಕ್ಕಪ್ಪನ ಮನೆಗೆ ಹೋಗಿದ್ದಾಗ ಟೆಲಿವಿಷನ್‌ನಲ್ಲಿ ಉಷಾರನ್ನು ಕಂಡು ನಂತರ ಕ್ರಮೇಣ ಅವರ ಸೆಳೆತಕ್ಕೆ ಒಳಗಾದರು.

ಕುಂಜುರಾಣಿ ಭಾರ ಎತ್ತುವ ಸ್ಪರ್ಧೆಗೆ ಇಳಿದಿದ್ದು ೧೯೮೪ರಲ್ಲಿ. ತಂದೆಯವರ ಒತ್ತಾಯಕ್ಕೆ ಮಣಿದು ಸ್ಥಳೀಯ ಸ್ಪರ್ಧೆಯೊಂದರಲ್ಲಿ ಪಾಲ್ಗೊಂಡು ಎರಡನೇಯವರಾದರು. ಮರು ವರ್ಷವೇ ದಿಲ್ಲಿಯಲ್ಲಿ

ಚಾಂಪಿಯನ್ ಶಿಪ್ಸ್‌ನಲ್ಲಿ ಬೆಳ್ಳಿಯ ಪದಕ ಗೆಲ್ಲುವದರೊಂದಿಗೆ ಅಂತಾರಾಷ್ಟ್ರೀಯ ರಂಗದಲ್ಲೂ ಸುದ್ದಿ ಮಾಡಿದ ಕುಂಜುರಾಣಿ, ನಂತರದ ಬೀಜಿಂಗ್ ಏಷ್ಯನ್ ಕ್ರೀಡೆಗಳ ಬೆಳ್ಳಿ ಪದಕಕ್ಕೂ ಲಗ್ಗೆ ಹಾಕಿದರು. ವಿಶ್ವ ಚಾಂಪಿಯನ್ ಶಿಪ್ಸಗಳಲ್ಲೇ ಈ 'ಉಕ್ಕಿನ ಮಹಿಳೆ' ಗೆದ್ದಿರುವ ಪದಕಗಳ ಸಂಖ್ಯೆ ೧೮.

ಆದರೆ ಅವರ ಪಾಲಿಗೆ ಅತ್ಯಂತ ನಿರಾಸೆಯನ್ನುಂಟು ಮಾಡಿದ್ದು ೧೯೯೩ರಲ್ಲಿ

# ಭಾರತದ 'ಉಕ್ಕಿನ ಮಹಿಳೆ' ಕುಂಜುರಾಣಿದೇವಿ

ಇತ್ತೀಚಿಗೆ ಬಿಡುಗಡೆ ಮಾಡಿದ 'ಸರ್ವಕಾಲೀನ ಶ್ರೇಷ್ಠ'ರ ಪಟ್ಟಿಯಲ್ಲಿ ಭಾರತದ ಈ 'ಉಕ್ಕಿನಮಹಿಳೆ'ಗೆ ನಾಲ್ಕನೇ ಸ್ಥಾನ!

ಇತ್ತೀಚೆಗಷ್ಟೇ ನಡೆದ ಏಷ್ಯನ್ ಲಿಫ್ಟಿಂಗ್ ಚಾಂಪಿಯನ್ ಶಿಪ್ಸನಲ್ಲಿ ಬೆಳ್ಳಿಯ ಪದಕ ಬಾಚಿಕೊಂಡ ಕುಂಜುರಾಣಿ ಮೂಲತಃ ಲಿಫ್ಟರ್ ಆಗಬೇಕೆನ್ನುವ ಕನಸನ್ನೂ ಕಂಡವರಲ್ಲ. ಅವರೇ ಹೇಳುವಂತೆ ಒಂದು ಕಾಲದ ಓಟದ ರಾಣಿ ಪಿ.ಟಿ.ಉಷಾ ಅವರ 'ಆರಾಧ್ಯ ದೈವ'. ಉಷಾ ಓಡಿದಷ್ಟೂ, ಪದಕ ಗೆದ್ದಷ್ಟೂ ತಾವೂ ಅವರಂತೆಯೇ ಆಗಬೇಕು, ಅಂತಾರಾಷ್ಟ್ರೀಯ ಮಟ್ಟದಲ್ಲಿ ಮಿನುಗಬೇಕು ಎನ್ನುವ ಮಹದಾಸೆ ಕುಂಜುರಾಣಿ ಅವರಲ್ಲಿ ಗರಿಗೆದರಿ ನಿಲ್ಲುತ್ತಿತ್ತಂತೆ.

ಅವರ ಮನೆಯಲ್ಲಿದ್ದ ಪರಿಸರವೂ ಅಂತಹುದೇ. ಸಹೋದರಿಯರಾದ ಭಾರತಿ ದೇವಿ ಹಾಗೂ ಪದ್ಮಾದೇವಿ ಇಬ್ಬರೂ ಒಳ್ಳೇ ಅಥ್ಲೀಟ್‌ಗಳೇ. ಮಣಿಪುರ ತಂಡವನ್ನು ಅಥ್ಲೆಟಿಕ್ಸ್ ಹಾಗೂ ಖೋ ಖೋ ಗಳೆರಡರಲ್ಲೂ ಪ್ರತಿನಿಧಿಸಿದವರು. ಆದರೆ ಕುಂಜುರಾಣಿಗೆ ಮಾತ್ರ ಮೊದಲಿನಿಂದಲೂ ಹಾಕಿ ಹಾಗೂ ಫುಟ್ಬಾಲ್‌ಗಳೆಂದರೆ ಪಂಚಪ್ರಾಣ. ಕಿರಿಯರ ರಾಷ್ಟ್ರೀಯ ಚಾಂಪಿಯನ್ ಶಿಪ್ಸನಲ್ಲಿ ಅವರು ಈ ಸ್ಪರ್ಧೆಗಳಲ್ಲಿ ಮಣಿಪುರವನ್ನು ಪ್ರತಿನಿಧಿಸಿದ್ದು ಇದೆ. ಈ ಆಟಗಳಲ್ಲೇ ತಮ್ಮ ಭವಿಷ್ಯವನ್ನು ರೂಪಿಸಲು ಕುಂಜುರಾಣಿ ನಿರ್ಧರಿಸಿಬಿಟ್ಟಿದ್ದರು ಕೂಡ,



ನಡೆದ ರಾಷ್ಟ್ರೀಯ ಲಿಫ್ಟಿಂಗ್ ಚಾಂಪಿಯನ್ ಶಿಪ್ಸನಲ್ಲಿ ಪಾಲ್ಗೊಳ್ಳುವ ಅವಕಾಶ ದೊರಕಿಸಿಕೊಂಡರು. ಅಷ್ಟೇ ಅಲ್ಲ, ಕುಂಜುರಾಣಿ ಅಲ್ಲಿ ಚಿನ್ನವನ್ನೂ ಗೆದ್ದುಬಿಟ್ಟರು! ಮುಂದೆ ಓರ್ವ 'ಲಿಫ್ಟರ್' ಆಗಿಯೇ ಮುಂದುವರಿಯಬೇಕೆಂದು ಅಂತಿಮ ನಿರ್ಧಾರ ತಾಳಲು ಕಾರಣವಾದದ್ದು ಈ ಚಿನ್ನದ ಪದಕವೇ ಎಂದರೆ ತಪ್ಪಾಗಲಾರದೇನೋ!

೧೯೮೯ರಲ್ಲಿ ಮ್ಯಾಂಚೆಸ್ಟರನಲ್ಲಿ ನಡೆದ ವಿಶ್ವ

ಮೆಲ್ಬೋರ್ನನಲ್ಲಿ ನಡೆದ ವಿಶ್ವ ಚಾಂಪಿಯನ್ ಶಿಪ್ಸನಲ್ಲಿ ಪಾಲ್ಗೊಳ್ಳುವ ಅವಕಾಶ ದೊರಕದಿದ್ದುದು. ಅಲ್ಲಿಗೆ ತೆರಳಲು 'ವೀಸಾ' ದೊರಕದೆ, ಆ ಸ್ಪರ್ಧೆಯಲ್ಲಿ ಚಿನ್ನದ ಪದಕ ಗೆಲ್ಲಬಹುದಾಗಿದ್ದ ಸುವರ್ಣಾವಕಾಶವನ್ನು ಕಸಿದುಕೊಂಡಿತು.

ತಮ್ಮ ರಾಜ್ಯ ಮಣಿಪುರವು ತಮ್ಮನ್ನು ನಡೆಸಿಕೊಳ್ಳುತ್ತಿರುವ ಬಗ್ಗೆಯೂ ಕುಂಜುರಾಣಿ ಅವರಿಗೆ ಸಿಟ್ಟಿಲ್ಲದೇ ಇಲ್ಲ. ಹಾಕಿ ಆಟಗಾರರಾದ ಥೋಯಿಬಾ ಸಿಂಗರಿಗೆ ನಿವೇಶನ ನೀಡಿದೆಯಾದರೂ, ಕುಂಜುರಾಣಿಗೆ ಸರಕಾರ ಇಂತಹ ವಾಗ್ದಾನ ನೀಡಿ ಮೂರು ವರ್ಷಗಳೇ ಗತಿಸಿಹೋಗಿವೆ. ಹಾಗೆಂದು ಮಣಿಪುರವನ್ನು ಬಿಟ್ಟು ಬೇರೆಡೆ ಹೋಗಿ ನೆಲೆಸುವ ಉದ್ದೇಶವೂ ಅವರಿಗಿದ್ದಂತಿಲ್ಲ. ಆದರೆ ತಮಗೆ ಉದ್ಯೋಗ ನೀಡಿರುವ ಕೇಂದ್ರ ಕಾಯ್ದಿಟ್ಟ ಪೋಲೀಸ್ ಪಡೆ (ಸಿ.ಆರ್.ಪಿ.ಎಫ್.) ಬಗ್ಗೆ ಕುಂಜುರಾಣಿಯವರಿಗೆ ಅಪಾರ ಹೆಮ್ಮೆ, ಗೌರವ. ಅಲ್ಲಿ ಅವರು ಸದ್ಯ ಅಸಿಸ್ಟಂಟ್ ಕಮಾಂಡಂಟ್ ಆಗಿ ಸೇವೆ ಸಲ್ಲಿಸುತ್ತಿದ್ದಾರೆ.

ಕುಂಜುರಾಣಿ ಅವರೇ ಹೇಳುವಂತೆ ಇನ್ನೋರ್ವ ಅಂತಾರಾಷ್ಟ್ರೀಯ ಖ್ಯಾತಿಯ ಲಿಫ್ಟರ್, ಭಾರತದವರೇ ಆದ ಕರ್ನಮ್ ಮಲ್ಲೇಶ್ವರಿ ಅವರ ತೀವ್ರ ಪ್ರತಿಸ್ಪರ್ಧಿಯಾಗಿರುವಂತೆ ಆಪ್ತ ಗೆಳತಿಯೂ ಹೌದು. ಅಂತಾರಾಷ್ಟ್ರೀಯ ಸ್ಪರ್ಧೆಗಳಲ್ಲಿ ಪರಸ್ಪರರ ಲಿಫ್ಟ್‌ಗಳನ್ನು ಪರಿಶೀಲಿಸುತ್ತ, ಪರಸ್ಪರರಿಗೆ

ಉತ್ತೇಜನ, ಪ್ರೋತ್ಸಾಹ ಕೊಡುತ್ತ ನಡೆದಿರುವುದರ ಲಾಭ ಇಬ್ಬರಿಗೂ ಲಭಿಸಿದೆ. ಆದರೆ ಬೆಲ್ಜಿಯಂ ಕೋಚ್ ಕೊನೆಡರ್ ತರಬೇತಿಯ ಪದ್ಧತಿಗೆ ಬಲಿಯಾದ ಕುಂಜುರಾಣಿ ಕಾಲಿಗೆ ಗಾಯ ಮಾಡಿಕೊಂಡು ಕಳೆದ ವರ್ಷ ತಮ್ಮ ಅತ್ಯುತ್ತಮ ಸಾಧನೆ ನೀಡದಾದರು. ಇನ್ನೊಂದೆಡೆ ಮಹಿಳೆಯರ ಲಿಫ್ಟಿಂಗ್ ಓಲಂಪಿಕ್ ಮಾನ್ಯತೆ ಪಡೆದಿರುವುದರೊಂದಿಗೆ, ಅಂತಾರಾಷ್ಟ್ರೀಯ ಲಿಫ್ಟಿಂಗ್ ಪರಿಷತ್ತು ಆರು ಹೊಸ ಭಾರದ ವರ್ಗಗಳನ್ನು ನಿಗದಿಪಡಿಸಿದೆ. ಇದರನ್ವಯ ಕುಂಜುರಾಣಿ ಸದ್ಯದ ತಮ್ಮ ೪೬ ಕಿಲೋಗ್ರಾಂ ವರ್ಗದಿಂದ ೪೮ ಕಿಲೋ ಗ್ರಾಂ ವರ್ಗದಲ್ಲಿ ಸ್ಪರ್ಧಿಸಬೇಕಾಗುತ್ತದೆ. ಈ ಹೊಸ ತೂಕದ ವರ್ಗದಲ್ಲಿ ಕುಂಜುರಾಣಿ ಹೇಗೆ ಪ್ರದರ್ಶನ ನೀಡುತ್ತಾರೆನ್ನುವದು ಮಹತ್ವದ್ದು.

ಕುಂಜುರಾಣಿ ಅವರ ಸಾಧನೆಯನ್ನು ವಿಶ್ಲೇಷಿಸಿದಾಗ ಒಂದು ಅಂಶ ಬೆಳಕಿಗೆ ಬರುತ್ತದೆ. ಅವರು ಗೆದ್ದಿರುವ ಪದಕಗಳ ಪೈಕಿ ಹೆಚ್ಚಿನವು ಬೆಳ್ಳಿಯವೇ. ಅವರೇ ಒಪ್ಪಿಕೊಂಡಿರುವಂತೆ ಲಿಫ್ಟಿಂಗ್‌ಗಿಂತ ಸ್ವಲ್ಪ ಮೊದಲು 'ನರ್ವಸ್' ಆಗುವದೇ ಇದಕ್ಕೆ ಕಾರಣ. ಇದೇ ಕಾರಣದಿಂದ ಹಲವು ಸಲ ಹೊನ್ನಿನಿಂದ ವಂಚಿತರಾದದ್ದೂ ಇದೆ. ಆದರೆ ಇದರ ಮೇಲೆ ಗೆಲುವು ಸಾಧಿಸುವ, ಬೇಗದಲ್ಲೇ 'ಹೊನ್ನಿನ ಬರ'ಕ್ಕೆ ಮಂಗಳ ಹಾಡುವ ಆತ್ಮವಿಶ್ವಾಸ ಈ 'ಉಕ್ಕಿನ ಮಹಿಳೆ'ಯದು.

**– ವಸಂತ ಮುರ್ಡೇಶ್ವರ**
ಧಾರವಾಡ

## ಪುರಸ್ಕಾರ

ಧಾರವಾಡದ ಪ್ರಾ.ಸಂ.ಶಿ. ಬೂಸನೂರು ಮಠ ಪ್ರತಿಷ್ಠಾನವು ೧೯೯೭ರ ಸಾಲಿನ ಪ್ರಶಸ್ತಿಗಾಗಿ ೧೯೯೫, ೯೬, ೯೭ರಲ್ಲಿ ಪ್ರಕಟವಾದ ಕನ್ನಡ ಕೃತಿಯನ್ನು ಆಹ್ವಾನಿಸಿದೆ. ಸ್ವತಂತ್ರ ಹಾಗೂ ಉತ್ತಮ ಕೃತಿಗೆ ರೂ. ೧೦ ಸಾವಿರ ಪುರಸ್ಕಾರ ಪ್ರಶಸ್ತಿ ಪತ್ರವನ್ನು ನೀಡಲಾಗುವುದು.

ಆಸಕ್ತರು ಡಿಸೆಂಬರ್ ೩೧ರೊಳಗೆ ನಾಲ್ಕು ಪ್ರತಿಗಳನ್ನು ಡಾ.ಬಿ.ಸಿ. ಜವಳಿ, ತೇಜಸ್ವಿ, ೩ನೇ ಮುಖ್ಯ ರಸ್ತೆ, ಕಲ್ಯಾಣನಗರ, ಧಾರವಾಡ - ೭ ಈ ವಿಳಾಸಕ್ಕೆ ಕಳುಹಿಸಬಹುದಾಗಿದೆ.

# ಕಿಲ ಕಿಲ

ಚಿಣ್ಣರೆ,
ಈ ತಿಂಗಳ ಪುಟಾಣಿ ಪದ್ಯಗಳಲ್ಲಿ ನಿಮ್ಮ ಬಾಯಿ ನೀರೂರಿಸುವ ಆರು ಹಣ್ಣುಗಳ ಹೆಸರಿವೆ. ಯಾವ್ಯಾವವೆಂದು ಊಹಿಸಿ - ನಿಮ್ಮ ಜಾಣತನ ಮೆರೆಸಿ!

○ ಗೋಪಾಲಕೃಷ್ಣ ವಂಡ್ಸೆ

೧
ಮೈ ಬಣ್ಣವೆತ್ತಿದೆ
ಕಡು ಕಡು ಕೆಂಪು
ಸಿಮ್ಲಾದಲಿ ಇದಕ್ಕೆ
ಬೆಳೆಯಂತೆ - ಸೊಂಪು
ನೋಡಿರೆ ಕಣ್ಮನಕೆ
ನೀಡುವುದು ತಂಪು
ತಕ್ಷಣ ಸೂಸಿರಿ
ನಿಮ್ಮ ಜಾಣ್ಮೆಯ ಕಂಪು!

೨
ಇದು ನೋಡಲು
ಸ್ವಲ್ಪ ಮುರುಟು
ಕೆಲವು ಇರುವವು
ಸರಿಯಾಗಿ ಉರುಟು
ಚೀಪಲು ಒಳಗಿದೆ
ಬೀಜದ ಗೊರಟು
ಉತ್ತರ ಕೊಡದಿರೆ
ಆಗ್ವದು ಒರಟು!

೩
ಹಣ್ಣಿನ ತಲೆಯಲಿ
ಚಿಗುರಿದೆ ಗಿಡ
ಹೊದ್ದಿದೆ ಮೈಯಲಿ
ಪುಕ್ಕದ ಬುಡ
ತುಂಬಿದೆ ಒಡಲಲಿ
ಜೇನಿನ ಕೊಡ
ಏನೆಂದು ಹೇಳಲು
ಮಾಡುವಿರೇಕೆ ತಡ!?

೪
ನರಿಯ ಕತೆಯಲಿ
ಹುಳಿಯಾದ ಹಣ್ಣು
ಉಂಡೆ ಪಾಯಸದಲಿ
ಬಿಡುವುದಿದು ಕಣ್ಣು
ಸರಿಯಾಗಿ ಯೋಚಿಸು
ಬಿಸಿಲ ಬದುಕಿನ ಚಿಣ್ಣು
ಕೂಡಲೆ ಹೇಳಿದರೆ
ಕೊಡುವೆ ನಾ ಗಿಣ್ಣು!

೫
ಮೈಯಲಿ ಮೊಳೆತಿವೆ
ಮುಳ್ಳಿನ ಬೆಳೆ
ಒಡಲಲಿ ತುಂಬಿವೆ
ಸಿಹಿ ಸಿಹಿ ತೊಳೆ
ಜತೆಯಲಿ ಮೇಣದ
ಹಾಲಿನ ಕೊಳೆ
ಉತ್ತರ ಹೇಳಿರೆ
ಜಾಣರಿಗೆ ಕಳೆ!

೬
ಬಿಳಿಯ ಮೋದಕ
ಹಳದಿ ಸಿಪ್ಪೆ
ಸಿಪ್ಪೆ ನಂಜಿರೆ
ಒಗರು ಸಪ್ಪೆ
ಅದಕ್ಕೇ ಸೇರ್ವದು
ಮೂಲೆಯ ತಿಪ್ಪೆ
ಹೇಳಿರಿ ನೋಡೋಣ
ಮುಚ್ಚದೆ ರೆಪ್ಪೆ!

ಉತ್ತರ:

| | |
|---|---|
| ೧. ಸೇಬು | ೪. ದ್ರಾಕ್ಷಿ |
| ೨. ಮಾವು | ೫. ಹಲಸು |
| ೩. ಅನಾನಸ್ | ೬. ಬಾಳೆಹಣ್ಣು |



ಯಶಸ್ ಉಡುಪ

## ನನಗಿಷ್ಟವಾದ ಪುಸ್ತಕ-ಪತ್ರಿಕೆ

ಮಕ್ಕಳೇ,
ನಿಮಗೆ ಯಾವ ಪುಸ್ತಕ ಓದುವುದೆಂದರೆ ಇಷ್ಟ? ನೀವು ದಿನ ಪತ್ರಿಕೆ ಓದುತ್ತೀರಾ? ಯಾವ ಪತ್ರಿಕೆಯಲ್ಲಿ ಯಾವ ಅಂಕಣ, ಯಾವ ವಿಷಯ ನಿಮಗಿಷ್ಟ? ಈ ಬಗ್ಗೆ ಆರು ವಾಕ್ಯಗಳಲ್ಲಿ ನಮಗೆ ಬರೆದು ಕಳಿಸಿ. ನಿಮ್ಮ ಬರಹ ಯೋಗ್ಯವಾಗಿದ್ದರೆ ಮುಂದಿನ ಸಂಚಿಕೆಯಲ್ಲಿ ಅದನ್ನು ಪ್ರಕಟಿಸುತ್ತೇವೆ.

*ವಿಶೇಷ ಸೂಚನೆ:*

- ❑ ನಿಮ್ಮ ವಯಸ್ಸು ೧೫ ವರ್ಷ ಮೀರಿರಬಾರದು.
- ❑ ನಿಮ್ಮ ಅನಿಸಿಕೆಯನ್ನು ಬಿಳಿ ಹಾಳೆಯಲ್ಲಿ ಬರೆದು ಇದೇ ಸಂಚಿಕೆಯ ೬೫ನೇ ಪುಟದಲ್ಲಿರುವ ಕಿಲಕಿಲ ಕೂಪನ್-ನ್ನು ಲಗತ್ತಿಸಿ ಈ ಕೆಳಗಿನ ವಿಳಾಸಕ್ಕೆ ಅಂಚೆಯಲ್ಲಿ ಕಳಿಸಿ.
- ❑ ನಿಮ್ಮ ಬರಹ ನಮಗೆ ತಲುಪಲು ಕೊನೆಯ ದಿನಾಂಕ : ೧-೧೧-೧೯೯೬.

ಸಂಪಾದಕರು, ಬಿಸಿಲ ಬದುಕು ಅಂಚೆ ಪೆಟ್ಟಿಗೆ ೭೯೫೧,
ಬಸವೇಶ್ವರನಗರ, ಬೆಂಗಳೂರು-೭೯.

# ಒಂದು ದಿನ

ಒಂದು ದಿನದಲ್ಲಿ ನೀವು ಇಷ್ಟಪಟ್ಟು ಮಾಡುವ ಕೆಲಸಗಳಾವುವು? ನಿಮಗಿಷ್ಟವಿಲ್ಲದೆ ಮಾಡುವ ಕೆಲಸಗಳಾವುವು? ಈ ಬಗ್ಗೆ ಬರೆಯಲು ಕಳೆದ ಸಂಚಿಕೆಯಲ್ಲಿ ಕೋರಲಾಗಿತ್ತು. ಅನೇಕ ಮಕ್ಕಳು ಈ ವಿಭಾಗದಲ್ಲಿ ಬಹಳ ಉತ್ಸಾಹದಿಂದ ಭಾಗವಹಿಸಿದ್ದಾರೆ. ಅವರಿಗೆಲ್ಲ ಅಭಿನಂದನೆಗಳು. ಇಲ್ಲಿ ಕೆಲವು ಆಯ್ದ ಬರಹಗಳನ್ನು ಪ್ರಕಟಿಸುತ್ತಿದ್ದೇವೆ.

## ಸರಳ ದಿನಚರಿ

ನಮ್ಮ ಶಾಲೆ ಮುಂಜಾನೆ ೭.೩೦ಕ್ಕೆ ಪ್ರಾರಂಭವಾಗುವುದರಿಂದ ೭.೦೦ಕ್ಕೆಲ್ಲಾ ಮುಂಜಾನೆ ಕಾರ್ಯಕ್ರಮಗಳನ್ನು ಮುಗಿಸಿಕೊಂಡು ಶಾಲೆಗೆ ಹೋಗುತ್ತೇವೆ. ಮಧ್ಯಾಹ್ನ ೧೨.೩೦ಕ್ಕೆ ಮನೆಗೆ ಬಂದು ಶಾಲೆಯ ಸಮವಸ್ತ್ರಗಳನ್ನು ಬಿಚ್ಚಿಟ್ಟು ಬೇರೆ ವಸ್ತ್ರಗಳನ್ನು ಧರಿಸಿಕೊಂಡು ಊಟ ಮಾಡಿ ಸಾಯಂಕಾಲದವರೆಗೆ ಕೂಡಿ ಆಡುತ್ತೇವೆ. ಸಾಯಂಕಾಲದಿಂದ ಶಾಲೆಯಲ್ಲಿ ಕೊಟ್ಟ ಮನೆಗೆಲಸಗಳನ್ನು ಮುಗಿಸಿ ರಾತ್ರಿ ಊಟ ಮಾಡಿ ಮಲಗುವುದೇ ನಮ್ಮಿಬ್ಬರ ದಿನಚರಿ.

**– ಮಹೇಂದ್ರ, ಸುನಿತ** (೬ ಮತ್ತು ೯ನೇ ತರಗತಿ)
ಇಲಕಲ್ಲ

## ಗೋಡೆಯೇ ಗೆಳೆಯ

ನಾನು ಬೆಳಿಗ್ಗೆ ಸುಮಾರು ೫.೦೦ ಗಂಟೆಗೆ ಏಳುತ್ತೇನೆ. ಎದ್ದು ಅರ್ಧ ತಾಸು ಯೋಗಾಸನ ಮಾಡಿ ಟ್ಯೂಶನ್‌ಗೆ ರೆಡಿಯಾಗುತ್ತೇನೆ. ಅಲ್ಲಿಂದ ಬಂದ ನಂತರ ಟಿಫನ್ ಮಾಡಿ ಶಾಲೆಗೆ ಹೋಗುತ್ತೇನೆ. ನನಗೆ ಕ್ರಿಕೆಟ್ ಎಂದರೆ ಬಲು ಇಷ್ಟ. ಆದುದರಿಂದ ವಿರಾಮದ ವೇಳೆಯಲ್ಲಿ ಕ್ರಿಕೆಟ್ ಆಡುತ್ತೇನೆ. ಗೆಳೆಯರು ಯಾರೂ ಇರದ ಪಕ್ಷದಲ್ಲಿ ಗೋಡೆಯೇ ನನಗೆ ಗೆಳೆಯನಾಗಿರುತ್ತದೆ. ಅದರ ಜೊತೆ ಕ್ರಿಕೆಟ್ ಆಡುತ್ತೇನೆ. ಹಾಗೂ ಮನೆಯ ಕೆಲಸದಲ್ಲಿ ನೆರವಾಗುತ್ತೇನೆ. ನನಗೆ ಶಾಲೆಯಿಂದ ಬಂದ ಮೇಲೆ ತಿಂಡಿ ತಿನ್ನುವುದು ಬಹಳ ಇಷ್ಟ. ಊಟಕ್ಕಿಂತ ತಿಂಡಿಯೇ ಬಲು ಪ್ರೀತಿ. ನನಗೆ ಟಿ.ವಿ.ಯಲ್ಲಿ ಕ್ರಿಕೆಟ್ ನೋಡಲು ಇಷ್ಟ. ಆದರೆ ಸಿನಿಮಾ ಹಾಡುಗಳನ್ನು ನೋಡುವುದಿಲ್ಲ. ನಾನು ಮತ್ತು ನನ್ನ ಅಕ್ಕ ಇಬ್ಬರು ರಾತ್ರಿ ವೇಳೆಯಲ್ಲಿ ಇಂಗ್ಲೀಷ್ ವ್ಯಾಕರಣದ ಬಗ್ಗೆ ಚರ್ಚೆ ಮಾಡುತ್ತೇವೆ. ರಾತ್ರಿ ನಾನು ೯.೦೦ ಗಂಟೆಗೆ ಊಟ ಮಾಡಿ ಉದಯ ಟಿ.ವಿ.ಯಲ್ಲಿ ಬರುವ ಸಿನಿಮಾವನ್ನು ನೋಡುತ್ತಾ ೧೦.೩೦ಕ್ಕೆ ಮಲಗುತ್ತೇನೆ. ನಾನು ಹೆಚ್ಚಾಗಿ ರಾತ್ರಿ ಓದುವುದಿಲ್ಲ. ಬೆಳಿಗ್ಗೆ ಓದುತ್ತೇನೆ.

**– ಪವನ ಗುಡಿ** (೯ನೇ ತರಗತಿ)
ದೇವದುರ್ಗ

## ದುಶ್ಚಟಗಳೇ ಇಲ್ಲ

ನಾನು ಬೆಳಿಗ್ಗೆ ೪.೩೦ ಗಂಟೆಗೆ ಏಳುತ್ತೇನೆ. ೬.೩೦ರ ವರೆಗೆ ಓದುತ್ತೇನೆ. ೬.೩೦ಯಿಂದ ೧೦ ಗಂಟೆವರೆಗೆ ತಂದೆ ತಾಯಿ ಹೇಳಿದ ಕೆಲಸವನ್ನು ಮಾಡುತ್ತೇನೆ. ೧೦ ಗಂಟೆಯಿಂದ ಸಂಜೆ ೫ ಗಂಟೆವರೆಗೆ ಶಾಲೆಗೆ ಹೋಗುತ್ತೇನೆ. ೫ ಗಂಟೆಯಿಂದ ೬ ಗಂಟೆವರೆಗೆ ಆಟ, ಕೆಲಸ. ೬ರಿಂದ ೧೦ ಗಂಟೆವರೆಗೆ ಓದುತ್ತೇನೆ. ೧೦ ಗಂಟೆಗೆ ಊಟ ಮಾಡಿ ಮಲಗುತ್ತೇನೆ. ಖಾಲಿ ಕುಳಿತುಕೊಳ್ಳುವುದು ಮಜಾ ಮಾಡುವುದು ಇನ್ನಿತರ ದುಶ್ಚಟಗಳು ನನಗೆ ಇಷ್ಟ ಇಲ್ಲ.

**– ಅಂದಾನಯ್ಯ ಶಿ. ನಾಲಿಮಠ** (೯ನೇ ತರಗತಿ)
ಚಿಕೇನಕೊಪ್ಪ

## ಏಳುವುದು ನಾಲ್ಕು ಗಂಟೆಗೆ!

ನಾನು ಬೆಳಿಗ್ಗೆ ನಾಲ್ಕು ಗಂಟೆಗೆ ಎದ್ದು ಹಲ್ಲು ಉಜ್ಜಿ ಆರು ಗಂಟೆಯವರೆಗೆ ಓದುವೆ. ಆಮೇಲೆ ಚಹ ಕುಡಿದು ಸ್ನಾನ ಮಾಡುತ್ತೇನೆ. ಸ್ನಾನ ಮಾಡಿದ ನಂತರ ದೇವರ ಪೂಜೆ ಮಾಡಿ ಸಮವಸ್ತ್ರವನ್ನು ಧರಿಸಿ ತಲೆ ಬಾಚಿಕೊಂಡು ಟಿಫನ್ ಮಾಡುವೆ. ನಂತರ ಶೂ ಹಾಕಿಕೊಂಡು ಸ್ಕೂಲ್ ಡ್ರೆಸ್ ಮತ್ತು ಟಾಯ್ ಹಾಕಿಕೊಂಡು, ಸ್ಕೂಲ್ ಬ್ಯಾಗ್ ತೆಗೆದುಕೊಂಡು ಶಾಲೆಗೆ ಹೋಗುತ್ತೇನೆ. ಶಾಲೆಗೆ ಹೋದ ಮೇಲೆ ರಾಷ್ಟ್ರಗೀತೆ ಹೇಳುವೆ. ಕ್ಲಾಸ್‌ನಲ್ಲಿ ಹೋದ ಮೇಲೆ ಶಿಸ್ತಿನಿಂದ ಸಾಲಾಗಿ ಕೂಡುತ್ತೇವೆ. ಶಾಲೆ ಬಿಟ್ಟ ಮೇಲೆ ಮನೆಗೆ ಬರುವೆ. ಬಂದು ಕೈಕಾಲು ಮುಖ ತೊಳೆದುಕೊಂಡು ಊಟ ಮಾಡಿ ಪುನಃ ಮರಳಿ ಶಾಲೆಗೆ ಹೋಗುವೆ. ಇಂಗ್ಲೀಷ್ ಟೀಚರ್ ಬಂದು ಪಾಠ ಹೇಳಿ ಮತ್ತೊಂದು ಕ್ಲಾಸಿಗೆ ಹೋದರು. ಆಗ ಶಾಲೆ ಬಿಡುವ ವೇಳೆ ಆಗಿತ್ತು. ಮನೆಗೆ ಹೋಗಿ ಬೇರೆ ಪ್ಯಾಂಟ್ ಶರ್ಟ್ ಹಾಕಿಕೊಂಡು ಟ್ಯೂಷನ್‌ಗೆ ಹೋಗುವೆ. ಆರು ಗಂಟೆಗೆ ಬಂದು ಹೋಮ್ ವರ್ಕ್ ಮಾಡುವೆ. ಎಂಟು ಗಂಟೆಗೆ ಊಟ ಮಾಡುವೆ. ಹೊರಗಡೆ ಕಟ್ಟೆಯ ಮೇಲೆ ಮಲಗುವೆ.

**– ಆನಂದಕುಮಾರ ಅವಂಟಿ** (೬ನೇ ತರಗತಿ)
ಮಸ್ಕಿ

## ದಿನದ ಹಾಡು

ಬೇಗನೆದ್ದು ಹಲ್ಲನುಜ್ಜಿ ಮುಖವ ತೊಳೆದು
ತಂದೆ-ತಾಯಿ ದೇವಗೆ ನಮಿಸಿ
ತಿಂಡಿ ತೀರ್ಥ ಎಲ್ಲಾ ಮುಗಿಸಿ, ಅಭ್ಯಾಸದಲ್ಲಿ ತೊಡಗುವೆ
ಸಮಯ ನೋಡಿ ಓದು ಮುಗಿಸಿ, ಸಮವಸ್ತ್ರವ ಧರಿಸುವೆ
ಅಪ್ಪ ಕೊಟ್ಟ ಪಾಟಿಯನ್ನು ಹೆಗಲಿಗೆ ಹಾಕುತಾ
ಅಮ್ಮ ಕೊಟ್ಟ ಬುತ್ತಿಯನ್ನು ಕೈಯಲ್ಲಿಡುತಾ
ಗೆಳತಿಯರೊಡನೆ ಕೇಕೆ ಹಾಕುತಾ ಶಾಲೆ ಕಡೆಗೆ ನಡೆಯುವೆ
ಗುರುಗಳು ಕಲಿಸುವ ಪಾಠ ಮತ್ತು ಬುದ್ಧಿಮಾತು ಶ್ರದ್ಧೆಯಿಂದ ಕೇಳುವೆ
ಕಳ್ಳತನ ಮಾಡಬೇಡ, ಸುಳ್ಳನೆಂದು ನುಡಿಯಬೇಡ
ಮರವನೆಂದು ಕಡಿಯಬೇಡ, ಬಡವನ ನೋಡಿ ನಗಲು ಬೇಡ
ಇಂಥ ಕೆಲಸವನೆಂದು ಕೂಡ ನಾನೆಂದು ಮಾಡೆನು
ಶಾಲೆ ಬಿಟ್ಟು ಮನೆಗೆ ಬಂದು, ಅಮ್ಮ ಕೊಟ್ಟ ತಿಂಡಿ ತಿಂದು
ನನ್ನ ಗಿಡಕೆ ನೀರನೆರೆದು, ಓದು ಬರೆದು ಎಲ್ಲಾ ಮುಗಿಸಿ ಆಡಲು ನಾ ಹೊರಡುವೆ
ಬೆಳದಿಂಗಳ ರಾತ್ರಿಯಲ್ಲಿ ನಗುತ ನಲಿಯುತ
ಪ್ರಾರ್ಥನೆ ಊಟ ಎಲ್ಲಾ ಮುಗಿಸಿ ಅಮ್ಮನ ಮಡಿಲ ಸೇರುವೆ

**– ಟಿ.ಜಿ. ತೇಜಸ್ವಿನಿ ದೇವಾಡಿಗ** (೭ನೇ ತರಗತಿ)
ಕುಂದಾಪುರ

## ದೇವರಲ್ಲಿ ಶ್ರದ್ಧೆ

ನನಗೆ ಇಷ್ಟವಾದ ಕೆಲಸ: ನಾನು ಮುಂಜಾನೆ ಬೇಗನೆ ಎದ್ದು ಮುಖ ತೊಳೆದುಕೊಂಡು ದೇವರಿಗೆ ನಮಸ್ಕರಿಸುತ್ತೇನೆ. ಹೂವು ಹರಿಯುವುದು, ಗಿಡಗಳಿಗೆ ನೀರು ಹಣಸುವದು, ತಂದೆ ತಾಯಿಗಳು ಹೇಳಿದ ಕೆಲಸ ಮಾಡುತ್ತೇನೆ. ಸ್ನಾನ ಮಾಡಿ ದೇವರ ಪ್ರಾರ್ಥನೆ ಮತ್ತು ಪೂಜೆ ಮಾಡುತ್ತೇನೆ. ಮನೆ ಪಾಠ ಅಭ್ಯಾಸ ಮಾಡುತ್ತೇನೆ. ವೇಳೆಗೆ ಸರಿಯಾಗಿ ಶಾಲೆಗೆ ಹೋಗುತ್ತೇನೆ. ಆಟ ಆಡುತ್ತೇನೆ.

ನನಗೆ ಇಷ್ಟವಿಲ್ಲದ ಕೆಲಸ: ಬಹಳ ಓಡಾಡುವದು, ಪೇಟೆಗೆ ಹೋಗುವದು, ಗೆಳೆಯರ ಜೊತೆಗೆ ಜಗಳ ಮಾಡುವುದು, ಸುಳ್ಳು ಹೇಳುವುದು, ದನ ಕಾಯುವದು, ಕುರಿ ಕಾಯುವದು, ಹಾಲು ತರುವದು, ನೀರು ತರುವದು.

- ಪ್ರವೀಣ ರಾ. ಹಿರೇಮಠ, (೬ನೇ ತರಗತಿ)
ರಾಮಪುರ

## ಮನೆ ಮುಂದೆ ರಂಗೋಲಿ

ನಾನು ಬೆಳಗ್ಗೆ ೫ಕ್ಕೆ ಎದ್ದು, ಒಂದು ಗಂಟೆಯವರೆಗೆ ಪ್ರಶಾಂತ ಸಮಯದಲ್ಲಿ ಓದುತ್ತೇನೆ. ನಂತರ ೬.೩೦ರ ವೇಳೆಗೆ ಬೆಳಗಿನ ಕ್ರಿಯಾವಿಧಿಗಳನ್ನು ಮುಗಿಸಿಕೊಂಡು ಮನೆಯ ಮುಂದೆ ರಂಗೋಲಿ ಹಾಕುತ್ತೇನೆ. ಸ್ನಾನ-ಊಟ ಮುಗಿಸಿಕೊಂಡು ಒಂದು ಗಂಟೆವರೆಗೆ ಪ್ರಜಾವಾಣಿ ಮತ್ತು ಇತರ ಪತ್ರಿಕೆಗಳನ್ನು ಓದಿಕೊಳ್ಳುತ್ತೇನೆ. ನಂತರ ೧೦.೩೦ ಗಂಟೆಗೆ ಶಾಲೆಗೆ ಹೋಗಿ ಅಧ್ಯಾಪಕರ ಪಾಠಗಳನ್ನು ಮನಃಪೂರ್ವಕವಾಗಿ ಕೇಳಿಕೊಳ್ಳುತ್ತೇನೆ. ಸಾಯಂಕಾಲ ಮನೆಗೆ ಬಂದು ಸ್ವಲ್ಪ ವಾಕಿಂಗ್ ಮತ್ತು ನೀರು ತರುವ ಕೆಲಸ ಮಾಡುತ್ತೇನೆ. ಜೊತೆಗೆ ಸಣ್ಣ-ಪುಟ್ಟ ಆಟಗಳನ್ನೂ ಆಡುತ್ತೇನೆ. ರೇಡಿಯೋದಲ್ಲಿ ಮನರಂಜನಾ ಕಾರ್ಯಕ್ರಮಗಳು ಮತ್ತು ವಾರ್ತಾ ಸಮಾಚಾರ, ರಸಪ್ರಶ್ನೆ ಇವೆಲ್ಲವುಗಳನ್ನೂ ಶ್ರದ್ಧೆಯಿಂದ ಕೇಳುತ್ತೇನೆ.

ಆದರೆ ಹಿರಿಯರ ಮತ್ತು ಗುರುಗಳ ಹೆದರಿಕೆಯಿಂದ ಮಾಡುವಂತಹ ಕೆಲಸಗಳು ಬಹಳ ಕಡಿಮೆ.

- ಎಸ್. ವಿಜಯಲಕ್ಷ್ಮಿ, (೯ನೇ ತರಗತಿ)
ಹುಲಗಿನಾಳ

## ಕ್ರಿಕೆಟ್ - ಕಬಡ್ಡಿ

ನಾನು ಬೆಳಗ್ಗೆ ೫ ಗಂಟೆಗೆ ಎದ್ದು ೨ ಕಿ.ಮೀ. ಜಾಗಿಂಗ್ ಹೋಗುತ್ತೇನೆ. ೫.೩೦ರಿಂದ ೬.೩೦ರ ವರೆಗೆ ಅಭ್ಯಾಸ. ೬.೩೦ರಿಂದ ೭.೩೦ರ ವರೆಗೆ ವೈಯಕ್ತಿಕ ಸ್ವಚ್ಛತೆ. ೭.೩೦ರಿಂದ ೯ ಗಂಟೆವರೆಗೆ ಶಾಲೆಯ ಪಾಠ. ೯ರಿಂದ ೯.೩೦ ಟಿಫಿನ್. ೯.೩೦ರಿಂದ ಅರ್ಧ ತಾಸು ವಿಶ್ರಾಂತಿ. ೧೦ ಗಂಟೆಗೆ ಸ್ಕೂಲಿಗೆ ಹೋಗುವದು. ೫ ಗಂಟೆವರೆಗೆ ಶಾಲಾ ಚಟುವಟಿಕೆ. ೫ರಿಂದ ೬ರ ವರೆಗೆ ಕ್ರಿಕೆಟ್ ಕಬಡ್ಡಿ ಇತರೆ ಆಟ. ೬ರಿಂದ ೭ರ ವರೆಗೆ ಟಿ.ವಿ.ಯಲ್ಲಿ ಧಾರಾವಾಹಿ ಹಾಗೂ ಸಮಾಚಾರ ತಿಳಿಯುವದು ನಂತರ ೯ರ ವರೆಗೆ ಅಭ್ಯಾಸ. ೧೦ರ ವರೆಗೆ ಊಟ. ೧೦ರಿಂದ ೫ರ ವರೆಗೆ ನಿದ್ರೆ ಮಾಡುವದು ನನ್ನ ಒಂದು ದಿನದ ಕೆಲಸವಾಗಿದೆ.

- ಪ್ರಶಾಂತಕುಮಾರ ವಿ.ಎಸ್. (೮ನೇ ತರಗತಿ)
ಇಟಗಿ

## ಹೆದರಿಕೆಯಿಂದ ಏಳುವೆ

ನಾನು ಬೆಳಗ್ಗೆ ತಂದೆ ತಾಯಿಗಳ ಒತ್ತಾಯದಿಂದ ೭ ಗಂಟೆಗೆ ಏಳುವದು. ಮುಖ ತೊಳೆದುಕೊಂಡು ೭ರಿಂದ ೮ರ ವರೆಗೆ ಕ್ಲಾಸಿಗೆ ಹೋಗುವೆನು. ೮ರಿಂದ ೯ರ ತನಕ ಸ್ನಾನ ಉಪಾಹಾರ ಮುಗಿಸಿ ೯ರಿಂದ ೧೦ರ ವರೆಗೆ ಪಾಠದ ಮನೆಗೆಲಸ. ನಂತರ ೧೦ ಗಂಟೆಗೆ ಶಾಲೆಗೆ ಹೋಗುತ್ತೇನೆ. ೫ ಗಂಟೆಗೆ ಮರಳಿ ಬಂದ ಮೇಲೆ ಟಿ.ವಿ.ಯಲ್ಲಿ ೬.೩೦ರ ತನಕ ಕನ್ನಡ ಕಾರ್ಯಕ್ರಮಗಳನ್ನು ನೋಡುವುದು. ೬.೩೦ರಿಂದ ೮.೩೦ರ ವರೆಗೆ ತಂದೆ ತಾಯಿಯರ ಹೆದರಿಕೆಯಿಂದ ಪಾಠ ಓದುವುದು. ೮.೩೦ರಿಂದ ೯.೦೦ರ ವರೆಗೆ ಊಟ. ೯.೦೦ರಿಂದ ಬೆಳಗಿನ ತನಕ ನಿದ್ರೆ ಮಾಡುವದು. ಒಂದೊಂದು ದಿನ ಬೆಳಗ್ಗೆ ದೇವರ ಪೂಜೆ ಮಾಡುತ್ತೇನೆ. ದಿನಕ್ಕೆ ಅರ್ಧ ಗಂಟೆ ಸಂಗೀತ ಕಲಿಯಲು ಹೋಗುತ್ತೇನೆ.

- ಸುರೇಶ ಸಜ್ಜನರ (೫ನೇ ತರಗತಿ)
ಸೂಡಿ

## ಒಂದು ಕ್ಷಣವನ್ನೂ ವೇಸ್ಟ್ ಮಾಡೆನು

**ನನ್ನ ದಿನಚರಿ ಬೆಳಿಗ್ಗೆ ೬.೩೦ಕ್ಕೆ ಶುರುವಾದರೆ, ರಾತ್ರಿ ೯.೩೦ಕ್ಕೆ ಮುಗಿಯುತ್ತದೆ. ನಾನು ಬೆಳಿಗ್ಗೆಯಿಂದ ರಾತ್ರಿವರೆಗೆ ಒಂದು ಕ್ಷಣಾನೂ ವೇಸ್ಟ್ ಮಾಡದೆ ಏನೇನೋ ಮಾಡ್ತಾ ಇರ್ತೀನಿ. ಬೆಳಿಗ್ಗೆ ಮೊದಲು ಮಾಡುವ ಕೆಲಸವೇ ನನಗೆ ಇಷ್ಟವಿಲ್ಲದೆ ಮಾಡುವಂಥಾದ್ದು. ಅದೆಂದರೆ ಬೆಳಿಗ್ಗೆ ಬೇಗ ಏಳುವದು. ಆದರೂ ಎದ್ದು ಸ್ವಲ್ಪ ಹೊತ್ತು ಓದಿ ನಂತರ ರೆಡಿ ಆಗಿ ಸ್ಕೂಲ್‌ಗೆ ಹೋಗ್ತೀನಿ. ಇದು ನಂಗೆ ತುಂಬಾ ಇಷ್ಟವಾದ ಕೆಲಸ. ಯಾಕಂದ್ರೆ ಮುಂದೆ ಚೆನ್ನಾಗಿ ಓದಿ ದೊಡ್ಡ ಸರ್ಜನ್ ಆಗಬೇಕೆಂದು ನನ್ನ ಆಸೆ. ಶಾಲೆಯಿಂದ ಬಂದ ಮೇಲೆ ತಿಂಡಿ ತಿನ್ನೋದು, ಆಟ ಆಡೋದು ಡ್ರಾಯಿಂಗ್ ಮಾಡೋದು. ನಂತರ Home-work ಮಾಡೋದು ಇವೆಲ್ಲಾ ನಂಗಿಷ್ಟವಾದ ಕೆಲಸಗಳೇ. ಆದರೆ ಆಮೇಲೆ ಊಟ ಮಾಡ್ಬೇಕಂದ್ರೆ, ನಂಗೆ ಸ್ವಲ್ಪ ಕಷ್ಟ, ನಂತರ ಬ್ರಷ್ ಮಾಡ್ಬೇಕಂದ್ರೆ, ಇನ್ನೂ ಕಷ್ಟ, ಆದ್ರೂ ಇವನ್ನು ಕಷ್ಟಪಟ್ಟು ಮಾಡಿ, ೯.೩೦ಕ್ಕೆ ಮಲಗ್ತೀನಿ. ಇದನ್ನು ಮಾತ್ರ ತುಂಬಾ ಇಷ್ಟಪಟ್ಟು ಮಾಡ್ತೀನಿ.**

**- ಜಿ.ಎಸ್. ಗಾಯತ್ರಿ ಪ್ರಕಾಶ್ (೪ನೇ ತರಗತಿ)**
**ಬಳ್ಳಾರಿ**

## ಪೂಜೆಯೆಂದರೆ ಆಗದು

ಬೆಳಗಿನ ವಿಹಾರ ಹಾಗೂ ಬೆಳಗಿನ ಓದು ನನಗೆ ತುಂಬಾ ಇಷ್ಟವಾದದ್ದು. ಹಿರಿಯರು ಒತ್ತಾಯದಿಂದ ಮಾಡಿಸುವ ಪೂಜೆ, ದೇವಸ್ಥಾನಕ್ಕೆ ಹೋಗುವುದೆಂದರೆ ನನಗಾಗದು. ರೊಟ್ಟಿ, ಮೊಸರು, ಚಟ್ನಿಯ ಊಟ ನನಗೆ ತುಂಬಾ ಹಿಡಿಸುವುದು. ಕ್ರಿಕೆಟ್ ಆಡುವುದು T.V. ನೋಡುವುದರಲ್ಲಿ, ಚಿತ್ರ ಬಿಡಿಸುವುದರಲ್ಲಿ ಆಸಕ್ತಿ. ಇದಕ್ಕೂ ಹಿರಿಯರೂ ಅಡ್ಡಿಪಡಿಸಿದಾಗ ಮನಸ್ಸಿಲ್ಲದ ಮನಸ್ಸಿನಿಂದ ಪುಸ್ತಕ ತೆರೆದು ಕೂಡುತ್ತೇನೆ.

- ನಾಭಿರಾಜ ಡಿ. ಅಕ್ಕಿ (೯ನೇ ತರಗತಿ)
ಗೋಗಿ

## ಅಡುಗೆ ಮಾಡಲು ಇಷ್ಟ

ನನಗೆ ಅಡುಗೆ ಮಾಡಲು ತುಂಬಾ ಇಷ್ಟ. ಆದರೆ, ನನ್ನ ಅಮ್ಮ ನನ್ನನ್ನು ಒಲೆಯ ಹತ್ತಿರವೇ ಬಿಡುವುದಿಲ್ಲ. ಪಾತ್ರೆ ತೊಳೆಯುವ ಕೆಲಸ ನನಗೆ ಇಷ್ಟವಿಲ್ಲ ಮತ್ತು ಶಾಲೆಯಲ್ಲಿ ಕೊಟ್ಟ ಹೋಂವರ್ಕನ್ನು ಮಾಡಲು ಇಷ್ಟವಿಲ್ಲ. ಆದರೂ ಗುರುಗಳ ಹೆದರಿಕೆಯಿಂದ ಹೋಂವರ್ಕ್ ಮಾಡುತ್ತೇನೆ.

- ಜಿ.ಎಂ. ರೇಶ್ಮಾ (೪ನೇ ತರಗತಿ)
ಶಾಮರಾಯನಪಾಳ್ಯ

# ಸೆಂಟಿಮೆಂಟ್ ನಿರ್ದೇಶಕ ಮಹೇಂದರ್

**ಸುಗ್ಗಿ ಚಿತ್ರದಲ್ಲಿ ಮಹೇಂದರ್ ಕೆಲಸ ಸರಿಯಿಲ್ಲ ಎಂದು ನಿರ್ಮಾಪಕ ಹಂಸಲೇಖಾ ದೂರಿದಾಗ ಕರೆದವರು ಅವರೇ ಜರೆದವರೂ ಅವರೇ ಎಂದು ತಣ್ಣಗೆ ತಮ್ಮ ನಿರ್ದೋಷಿತ್ವವನ್ನು ಸಾಬೀತುಪಡಿಸಿದರು.**



ನಂಬಿಕೆಗಳನ್ನು ಮುರಿಯುವ ಸಾಹಸ ಮಾಡುವವರಿಗೆಲ್ಲಾ ಈ ಮಾಯಾಲೋಕ ಏನಾದರೊಂದು ಉಡುಗೊರೆಯನ್ನು ದಯ ಪಾಲಿಸುತ್ತಾ ಬಂದಿದೆ. ಉದಾಹರಣೆಗೆ ಸಿನಿಮಾ ನಿರ್ದೇಶಕನಾಗಬೇಕಾದರೆ ಕನಿಷ್ಠ ೫ ವರ್ಷವಾದರೂ ನೀವು ಇನ್ನೊಬ್ಬ ಹಿರಿಯ ನಿರ್ದೇಶಕನಿಗೆ ಸಹಾಯಕನಾಗಿ ದುಡಿಯ ಬೇಕು ಎನ್ನುತ್ತದೆ ಚಿತ್ರರಂಗದ ಅಲಿಖಿತ ನಿಯಮ. ಇದನ್ನು ನಂಬಿ ಒಂದು ದಿನ ನಿರ್ದೇಶಕನ ಪಟ್ಟದಲ್ಲಿ ಕುಳಿತವರು ಇದ್ದಾರೆ, ಅದೇ ರೀತಿ ೧೫ ವರ್ಷ ಕಳೆದರೂ ಸಹಾಯಕನೆಂಬ ಲೇಬಲ್‌ನಿಂದ ಈಚೆ ಬರ ಲಾರದೆ ಅಲ್ಲೇ ಬಸವಳಿದು ಕುಸಿದವರೂ ಇದ್ದಾರೆ. ಕೆಲವು ಸಹಾಯಕರಂತೂ ತಾವು ಇನ್ನೆಂದಿಗೂ ಮೇಲೇರಲಾರೆವು ಎಂಬ ಭಯ ದಿಂದ ಆತ್ಮಹತ್ಯೆ ಮಾಡಿಕೊಂಡ ಕೇಸುಗಳೂ ಇವೆ.

ಈ ಮಿಥ್‌ನ್ನು ಮುರಿದವರು ಮಹೇಂದರ್. ಇಂಥ ಸಾಹಸ ಮಾಡೋದಕ್ಕೆ ಬೇಕಾದ ಅರ್ಹತೆಯೂ ಈತನ್ನಲಿರಲಿಲ್ಲ. ಪಟ್ಟಣದಲ್ಲೇ ಬೆಳೆದ ಹುಡುಗರು ಎಂಥ ದಡ್ಡರಾಗಿದ್ದರೂ ಇಲ್ಲಿನ ಪಾದರಸದ ಬದುಕಿಗೆ ಹೊಂದಿಕೊಂಡಿರುತ್ತಾರೆ, ನಡುದಾರಿಯಲ್ಲೇ ಮೋಸ ಹೋಗದಷ್ಟು ಚಾಲಾಕಿತನವೂ ಇವರ ರಕ್ತದಲ್ಲಿರುತ್ತದೆ. ಆದರೆ ಮಹೇಂದರ್ ದೂರದ ತಮಿಳ್ನಾಡು ಗಡಿಯಲ್ಲಿರುವ ಕೊಳ್ಳೇಗಾಲದಿಂದ ಬಂದವರು. ಕಾಡು, ಹೊಲ, ಕುರಿ, ಮುದ್ದೆ ಬಿಟ್ಟರೆ ಬೇರೇನನ್ನೂ ಕಾಣದ ಮುಗ್ಧ. ಸ್ಕೂಲ್ ಓದೋವಾಗ ಮೈಸೂರಿಗೆ ಬಂದಿದ್ದುಂಟು. ಅಲ್ಲಿ ಈತ ಸ್ಕೂಲ್ ಫಾದರ್ ಅವರ ಚಿತ್ರವನ್ನು ಬಿಡಿಸಿದಾಗ ಮೆಚ್ಚುಗೆ ಗಳಿಸಿದ್ದುಂಟು. ಈ ಕಾರಣಕ್ಕೇ ಇಟಲಿಗೆ ಹೋಗುವ ಅವಕಾಶ ಬಂದಿದ್ದೂ ಉಂಟು. ವಯಸ್ಸು, ಭಯ, ಮನೆಯ ಸೆಳೆತ - ಈ ಮೂರು ಕಾರಣಗಳಿಂದ ಅದನ್ನು ನಿರಾಕರಿಸಿದ ಮಹೇಂದರ್ ಮತ್ತೆ ಕೊಳ್ಳೆಗಾಲಕ್ಕೇ ವಾಪಾಸಾದರಂತೆ.

ಮಹೇಂದರ್ ಮನೆಯಲ್ಲಿ ಬಡತನವಿತ್ತು, ಅವಿಭಕ್ತ ಕುಟುಂಬವಾದ್ದರಿಂದ ಗಿಜಗಿಜಿ ವಾತಾವರಣ, ಇವೆಲ್ಲದರ ನಡುವೆಯೂ ಎಲ್ಲರಂತೆ ಈತ ತಾನೊಂದು ಕನಸ ಕಂಡ. ಅದಕ್ಕೆ ನಿರ್ದಿಷ್ಟ ಆಕಾರವಿರಲಿಲ್ಲ, ಆತನೇ ರಚಿಸಬಹುದಾಗಿದ್ದ ಅಬ್ಸರ್ಡ್ ಪೈಂಟಿಂಗ್‌ನಂತಿತ್ತು. ಕನಸಿನ ಒಟ್ಟಾರೆ ಸಾರಾಂಶವೆಂದರೆ ತಾನೊಬ್ಬ ದೊಡ್ಡ ಮನುಷ್ಯನಾಗಬೇಕು, ನಾಲ್ಕು

**ಮಹೇಂದರ್ ದೂರದ ತಮಿಳ್ನಾಡು ಗಡಿಯಲ್ಲಿರುವ ಕೊಳ್ಳೇಗಾಲದಿಂದ ಬಂದವರು. ಕಾಡು, ಹೊಲ, ಕುರಿ, ಮುದ್ದೆ ಬಿಟ್ಟರೆ ಬೇರೇನನ್ನೂ ಕಾಣದ ಮುಗ್ಧ.**

ಜನ ತನ್ನ ಬಗ್ಗೆ ಮಾತಾಡಿಕೊಳ್ಳಬೇಕು. ಕೊಳ್ಳೆಗಾಲದಲ್ಲಂತೂ ಅದು ಕನಸಿನಲ್ಲೂ ಸಾಧ್ಯವಿರಲಿಲ್ಲ. ಮಣ್ಣಿನ ಮಗನಾಗೋಣ ಎಂದರೆ ಅಷ್ಟೊಂದು ಭೂಮಿಯಿರಲಿಲ್ಲ. ಆದರೆ ಎಲ್ಲಾ ಕನಸಿನ ಕಥೆಯಲ್ಲಿ ದೇವರು ಬರುವಂತೆ ಆ ಊರಿಗೆ ಒಂದು ದಿನ ತಮಿಳಿನ ಖ್ಯಾತ ನಿರ್ದೇಶಕ ಭಾರತಿರಾಜ ಬಂದರು. ಇಡೀ ಕೊಳ್ಳೆಗಾಲವನ್ನೇ ತಮ್ಮ ಕ್ಯಾಮರಾದಲ್ಲಿ ತುಂಬಿಕೊಂಡರು. ಹಾಗೇ ಈ ಹುಡುಗನ ಕಣ್ಣನ್ನೂ ತುಂಬಿದರು. ಎಂದಾದರೊಂದು ದಿನ ತಾನೂ ಭಾರತಿರಾಜ ಆಗಬೇಕು ಅಂದುಕೊಂಡ ಮಹೇಂದರ್ ಅಲ್ಲೇ ಅವರನ್ನು ಮಾತಾಡಿಸಿದರು, ಆಟೋಗ್ರಾಫ್ ತೆಗೆದುಕೊಂಡರು.

ನಿರ್ದೇಶಕನಾಗುವ ನಿರ್ಧಾರ ತೆಗೆದುಕೊಂಡು ಮಹೇಂದರ್ ಒಂದು ದಿನ ಹೆಗಲ ಮೇಲೊಂದು ಚೀಲ ಹಾಕಿಕೊಂಡು ನೇರವಾಗಿ ಬೆಂಗಳೂರು ಬಸ್ಸು ಹತ್ತಿಯೇಬಿಟ್ಟರು. ಪರಿಚಯದವರ ರೂಮ್ ಹುಡುಕಿ ಅಲ್ಲೇ ತಿಂಗಳು ಠಿಕಾಣಿ ಹೂಡಿದರು. ಯಾರಾದರೂ ನಿರ್ದೇಶಕರ ಬಳಿ ಹೋಗಿ ಕೆಲಸ ಕೊಡಿ ಅಂತ ಕೇಳಲು ಭಯ. ಅದರ ಬದಲಾಗಿ ಸಿನಿಮಾಗೆ ಸಂಬಂಧಿಸಿದ ಪುಸ್ತಕಗಳನ್ನೆಲ್ಲಾ ಕಂಠಪಾಠ ಮಾಡಿದರು. ಒಂದು ನೋಟ್‌ಬುಕ್ ಹಿಡಿದುಕೊಂಡು ಥಿಯೇಟರ್‌ಗೆ ಹೋಗಿ ಅಲ್ಲೇ ಚಿತ್ರ ನೋಡುತ್ತಾ ನೋಟ್ಸ್ ಮಾಡಿಕೊಳ್ಳೋದಕ್ಕೆ ಶುರು ಮಾಡಿದರು. ಹಿಂದಿ, ತಮಿಳು, ತೆಲುಗು, ಕನ್ನಡ ಹೀಗೆ ಕಣ್ಣಿಗೆ ಸಿಕ್ಕ ಚಿತ್ರಗಳನ್ನೆಲ್ಲಾ ನೋಡುತ್ತಾ, ಅವುಗಳ ತಾಂತ್ರಿಕ ವಿವರಗಳನ್ನು ಬರೆದಿಟ್ಟುಕೊಳ್ಳುತ್ತಾ ಮಹೇಂದರ್ ಬೆಳೆದರು. ಕ್ಲೋಸ್‌ಅಪ್, ಲಾಂಗ್‌ಶಾಟ್, ಟ್ರಾಲಿ, ಕ್ರೇನ್ ಮೊದಲಾದ ಟೆಕ್ನಿಕಲ್ ವಿವರಗಳೆಲ್ಲಾ ಇವರಿಗೆ ಈ ಮೂಲಕಾನೇ ಹೊಳೆಯುತ್ತಾ ಬಂತು.

**ಹೀಗೆ ಯಾರಿಗೂ ಸಹಾಯಕನಾಗದ, ಸಿನಿಮಾ ಗ್ರಾಮರ್‌ನ್ನು ಬರೀ ಥಿಯರಿ ಮೂಲಕವೇ ಅರ್ಥಮಾಡಿಕೊಂಡ ಹಳ್ಳಿಗಾಡಿನ ವ್ಯಕ್ತಿಯೊಂದು ಒಂದು ಫೈನ್ ಡೇ ನಿರ್ದೇಶಕನ ಕುರ್ಚಿಯಲ್ಲಿ ಕುಳಿತೇಬಿಟ್ಟತು.**

ಹೀಗೆ ಯಾರಿಗೂ ಸಹಾಯಕನಾಗದ, ಸಿನಿಮಾ ಗ್ರಾಮರ್‌ನ್ನು ಬರೀ ಥಿಯರಿ ಮೂಲಕವೇ ಅರ್ಥಮಾಡಿಕೊಂಡ ಹಳ್ಳಿಗಾಡಿನ ವ್ಯಕ್ತಿಯೊಂದು ಒಂದು ಫೈನ್ ಡೇ ನಿರ್ದೇಶಕನ ಕುರ್ಚಿಯಲ್ಲಿ ಕುಳಿತೇಬಿಟ್ಟಿತು. ಚಿತ್ರದ ಹೆಸರು 'ಪ್ರಣಯದ ಪಕ್ಷಿ'. ಊರವರೇ ನಮ್ ಹುಡುಗ ಡೈರೆಕ್ಟರ್ ಅಗ್ತವ್ನೆ ಅಂತ ಹಣ ಹೊಂದಿಸಿ ತಂದರು. ಆದರೆ ಸಿನಿಮಾ ಎಂಬ ಬಕಾಸುರನ ಹೊಟ್ಟೆಗೆ ಸುರಿದಷ್ಟೂ ಸಾಕಾಗೋಲ್ಲ ಎನ್ನುವುದು ಕ್ರಮೇಣ ಅರ್ಥವಾಗುತ್ತಾ ಹೋಯಿತು. ಮಹೇಂದರ್ ಏನೂ ಹತಾಶರಾಗಲಿಲ್ಲ. ಹಣ ಕೈಯಲ್ಲಿದ್ದಾಗ ಮಾತ್ರ ಶೂಟಿಂಗ್ ನಡೆಸಿ ಅನಂತರ ಸುಮ್ಮನೇ ಇರುತ್ತಿದ್ದರು. ಕೊನೆಗೂ ಎರಡು ವರ್ಷಗಳ ನಂತರ ಚಿತ್ರ ಪೂರ್ತಿಯಾಗಿ ಅದ್ದೇಗೋ ಬಿಡುಗಡೆಯಾಯಿತು. ಪ್ರೇಮಕಥೆಯಾಧಾರಿತ ಈ ಚಿತ್ರ ಸುಮಾರಾಗಿದೆ ಎಂದು ಜನ ಅಂದರು. ಪತ್ರಿಕೆಗಳಲ್ಲಿ ಪರವಾಗಿಲ್ಲ ಎಂಬ ವಿಮರ್ಶೆಯೂ ಬಂತು. ಅನಂತರ ಆಗ ಬೇಡಿಕೆಯಲ್ಲಿದ್ದ ರಘುವೀರ್ ನಾಯಕನಾಗಿದ್ದ ಚಿತ್ರವನ್ನು ನಿರ್ದೇಶಿಸುವ ಅವಕಾಶ. ಆ ಚಿತ್ರವೂ ಅಸಲಿಗೆ ಮೋಸ ಮಾಡಲಿಲ್ಲ.

ಮಹೇಂದರ್‌ಗೆ ಸೆಂಟಿಮೆಂಟ್ ನಿರ್ದೇಶಕ ಎಂಬ ಬಿರುದು ತಂದುಕೊಟ್ಟಿದ್ದು ಹೆತ್ತವರು, ತಾಯಿಲ್ಲದ ತವರು, ಕರ್ಪೂರದ ಗೊಂಬೆ ಮೊದಲಾದ ಸೂಪರ್ ಹಿಟ್ ಚಿತ್ರಗಳು. ಮಹೇಂದರ್ ಚಿತ್ರಕ್ಕೆ ಹೋದ ಪ್ರೇಕ್ಷಕರು ಕಣ್ಣೀರು ಸುರಿಸದೇ ಹೊರಬಂದಲ್ಲಿ ಅದು ಪ್ರಪಂಚದ ಎಂಟನೇ ಅದ್ಭುತ ಎಂದೇ ಪ್ರಚಾರವಾಗುವ ಮಟ್ಟಕ್ಕೆ ಹೋಯಿತು. ಈ ಎಲ್ಲಾ ಚಿತ್ರಗಳಲ್ಲೂ ಹೆಣ್ಣಿನ ಹಾಡುಪಾಡನ್ನು ಒಂದು ಕಥೆಯ ಸುತ್ತ ಹೇಳುವ ತಂತ್ರವನ್ನೇ ಮಹೇಂದರ್ ಬಳಸಿದರು. ತಾಯಿಲ್ಲದ ತವರು ಚಿತ್ರದಲ್ಲಿ ಗಂಡನ ಮನೆ ಸೇರಿದ ಹುಡುಗಿ ಅಲ್ಲಿ ಪಡಬಾರದ ಕಷ್ಟ ಅನುಭವಿಸಿ ಮರಳಿ ತವರಿಗೆ ಬರುತ್ತಾಳೆ. ಆದರೆ ಆ ಹೊತ್ತಿಗೆ ಆಕೆಯ ತಾಯಿ ಸತ್ತು ಹೋಗಿರುತ್ತಾಳೆ. ಅಣ್ಣನ ಹೆಂಡತಿಯಿಂದ ಹಿಂಸೆ ಶುರು. ಕೊನೆಗೆ ಆಗಷ್ಟೆ ಹುಟ್ಟಿದ ಜೋಡಿಮಕ್ಕಳನ್ನು ಬಾವಿಗೆ ತಳ್ಳಿ ತಾನೂ ಆತ್ಮಹತ್ಯೆ ಮಾಡಿಕೊಳ್ಳುವುದರೊಂದಿಗೆ ನಾಯಕಿಯ ಬದುಕು ಅಂತ್ಯ. ಹೆತ್ತವರು



ಚಿತ್ರದಲ್ಲಿ ಮಕ್ಕಳೇ ಅಪ್ಪ-ಅಮ್ಮನಿಗೆ ಶತ್ರುವಾಗಿ ಕಾಡುತ್ತಾರೆ. ಅಪ್ಪ ಬದುಕಿರುವಾಗಲೇ ಆತನ ದೇಹವನ್ನು ಚಟ್ಟಕ್ಕೇರಿಸುವ ಮಟ್ಟಕ್ಕೆ ಕ್ರೌರ್ಯ ವಿಜೃಂಭಿಸುತ್ತದೆ.

ಇಂಥ ದೃಶ್ಯಗಳು ಅಸಹಜ ಎನಿಸೋದಿಲ್ವೇ ಎಂಬ ಪ್ರಶ್ನೆಗೆ ಮಹೇಂದರ್ ತಾನು ನಿಜ ಜೀವನದಲ್ಲಿ ತನ್ನೂರಲ್ಲೇ ಅಪ್ಪನನ್ನು ಸಾಯಿಸುವ ಮಕ್ಕಳನ್ನು ನೋಡಿದ್ದೇನೆ ಎನ್ನುತ್ತಾರೆ. ಅವರ ಪ್ರಕಾರ ಅವರ ಚಿತ್ರಗಳಲ್ಲಿ ಬರುವ ದೃಶ್ಯಗಳೆಲ್ಲಾ ಅವರು ತಮ್ಮ ಬದುಕಿನಲ್ಲಿ ಕಂಡಿದ್ದು. ಕರ್ಪೂರದ ಗೊಂಬೆಯ ನಾಯಕಿಯಂತೂ ತನ್ನ ತಂಗಿಗಾಗಿ ತನ್ನ ಪ್ರಿಯತಮನನ್ನೇ ತ್ಯಾಗ ಮಾಡುವ ಹಂತ ತಲುಪುತ್ತಾಳೆ. ಇಂಥ ಅತಿರೇಕಗಳನ್ನೇ ಕಥೆಯ ರೂಪದಲ್ಲಿ ನೋಡುಗರ ಕರುಳು ಕರುಗುವಂತೆ ನಿರೂಪಿಸುವ ಸಾಮರ್ಥ್ಯ ಮಹೇಂದರ್‌ಗಿದೆ. ಅದಕ್ಕೆ ಸರಿಯಾಗಿ ಹಂಸಲೇಖರ ಸಂಗೀತದ ಹಿಮ್ಮೇಳವೂ ಇರುತ್ತದೆ. ಶ್ರುತಿಯಂಥ ಕಣ್ಣೀರ ನಾಯಕಿಯ ನೆರವೂ ಇರುವಾಗ ಈ ಚಿತ್ರಗಳು ಹೆಂಗರುಳುಗಳ ಮನಸೆಳೆದದ್ದರಲ್ಲಿ ಅಚ್ಚರಿಯೇನಿಲ್ಲ.

ಸೆಂಟಿಮೆಂಟ್ ಚಿತ್ರಗಳನ್ನೇ ಯಾಕೆ ನಿರ್ದೇಶಿಸುತ್ತೀರಿ ಎಂದೊಮ್ಮೆ ಪತ್ರಕರ್ತರು ಪ್ರಶ್ನಿಸಿದಾಗ ಮಹೇಂದರ್ ಉತ್ತರಿಸಿದ್ದು ಹೀಗೆ 'ಭಾರತೀಯ ಚಿತ್ರಗಳಲ್ಲಿ ಸೆಂಟಿಮೆಂಟ್‌ಗೆ ಯಾವತ್ತೂ ಸಾವಿಲ್ಲ. ಯಾಕೆಂದರೆ ನಾವೆಲ್ಲರೂ ಭಾವನೆಗಳಿಗೆ ಶರಣಾಗುವ ಮಂದಿ. ನನ್ನ ಗುರು ಭಾರತಿರಾಜ ಇದುವರೆಗೆ ನಿರ್ದೇಶಿಸಿದ ಚಿತ್ರಗಳೆಲ್ಲವೂ ಸೆಂಟಿಮೆಂಟ್ ವರ್ಗಕ್ಕೆ ಸೇರಿದವು. ಅವು ಯಾವತ್ತಾದರೂ ತೋಪಾಗಿದ್ದರೆ ಹೇಳಿ. ಅದೇ ಥರ ನನ್ನ ಚಿತ್ರಗಳೂ ಕೂಡಾ. ಮಹೇಂದರ್‌ನ್ನು ನಂಬಿ ನಾನು ಸೋತು ಹೋದೆ ಎಂದು ಯಾವ ನಿರ್ಮಾಪಕನೂ ಇದುವರೆಗೆ ಹೇಳಿದ್ದಿಲ್ಲ.'

ಗಂಗಾ ಯಮುನಾ ಚಿತ್ರದ ತನಕ ಮಹೇಂದರ್ ಹೇಳಿದ್ದು ನಿಜವಾಗಿತ್ತು. ಅನಂತರ ಪ್ರೇಕ್ಷಕ ಇದ್ದಕ್ಕಿದ್ದಂತೆ ಸೆಂಟಿಮೆಂಟ್ ಚಿತ್ರಗಳನ್ನು ತಿರಸ್ಕರಿಸಿದ. ಮಹೇಂದರ್ ಬಹಳ ಭರವಸೆ ಇಟ್ಟುಕೊಂಡಿದ್ದ ಕೊಡಗಿನಕಾವೇರಿ ಚಿತ್ರ ದಯನೀಯವಾಗಿ ನೆಲಕಚ್ಚಿತು. ಶ್ರುತಿ-ಮಹೇಂದರ್ ಜೋಡಿ ನಡುವೆ ಬಿರುಕು ಕಾಣಿಸಿಕೊಂಡಿದ್ದು ಆವಾಗಲೇ. ಮಹೇಂದರ್ ಚಿತ್ರವೆಂದರೆ ಶ್ರುತಿ ಇರಲೇಬೇಕು ಎಂಬ ನಿಯಮ ಮುರಿದುಬಿತ್ತು. ಇದೀಗ ಅವರ ಮೇಘ ಬಂತು ಮೇಘ ಚಿತ್ರದಲ್ಲಿ ಶ್ರುತಿಯಿಲ್ಲ. ಮಹೇಂದರ್ ಕೂಡಾ ಹಾದಿ ಬದಲಾಯಿಸುವ ಸೂಚನೆ ನೀಡಿದ್ದಾರೆ. ತಿಳಿಹಾಸ್ಯ ಮಿಶ್ರಿತ ಚಿತ್ರಗಳನ್ನು ನಿರ್ದೇಶಿಸುವತ್ತ ವಾಲಿದ್ದಾರೆ. ಇಲ್ಲಿಯವರೆಗೆ ಒಂದೇ ವಸ್ತುವಿಗೆ ಬ್ರಾಂಡ್ ಆಗಿದ್ದ ನಿರ್ದೇಶಕನ ಹೊಸ ಪ್ರಯೋಗವನ್ನು ಪ್ರೇಕ್ಷಕ ಸ್ವೀಕರಿಸುತ್ತಾನೆಯೇ ಎನ್ನುವುದು ಕುತೂಹಲಕಾರಿ ಸಂಗತಿ. ಯಾಕೆಂದರೆ ಮೌನ ರಾಗ ಎಂಬ ಮನೋವೈಜ್ಞಾನಿಕ ಚಿತ್ರ ಮಹೇಂದರ್ ದೌರ್ಬಲ್ಯಗಳನ್ನು ಎತ್ತಿ ತೋರಿಸಿತ್ತು.

> **ಮಹೇಂದರ್ ಚಿತ್ರಕ್ಕೆ ಹೋದ ಪ್ರೇಕ್ಷಕರು ಕಣ್ಣೀರು ಸುರಿಸದೇ ಹೊರಬಂದಲ್ಲಿ ಅದು ಪ್ರಪಂಚದ ಎಂಟನೇ ಅದ್ಭುತ ಎಂದೇ ಪ್ರಚಾರವಾಗುವ ಮಟ್ಟಕ್ಕೆ ಹೋಯಿತು.**

ಮಹೇಂದರ್ ಚಿತ್ರಗಳು ಜನಪ್ರಿಯ ಸೂತ್ರಗಳ ಚೌಕಟ್ಟಿನಲ್ಲೇ ಇದ್ದರೂ ಅವುಗಳಲ್ಲಿ ಎದ್ದುಕಾಣುವ ಸಂಗತಿಯೆಂದರೆ ಹಳ್ಳಿ ಬದುಕಿನ ಸಮರ್ಥ ಚಿತ್ರಣ. ಹಳ್ಳಿ ಪರಿಸರ, ಗ್ರಾಮ್ಯ ಭಾಷೆ, ಹಳ್ಳಿ ರಾಜಕೀಯ ಇತ್ಯಾದಿಗಳನ್ನು ಇತರ ನಿರ್ದೇಶಕರಿಗಿಂತ ಸೊಗಸಾಗಿ ಹೇಳುವ ಕಲೆ ಮಹೇಂದರ್‌ಗೆ ಸಿದ್ಧಿಯಾಗಿದೆ. ಇದಕ್ಕೆ ಮುಖ್ಯ ಕಾರಣ ಅವರ ಹಿನ್ನೆಲೆ. ಇಂದಿಗೂ ಮಹೇಂದರ್ ಸಮಯ ಸಿಕ್ಕಾಗ ಕೊಳ್ಳೆಗಾಲಕ್ಕೆ ಹೋಗಿಬರುತ್ತಾರೆ. ಅಲ್ಲಿ ಸ್ವಲ್ಪ ಹೊಲವನ್ನೂ ಖರೀದಿಸಿದ್ದಾರೆ. ಹಿಂದಿನ ದಿನಗಳನ್ನು ಮರೆತಿಲ್ಲ, ಆ ಸೌಜನ್ಯವನ್ನು ಜೋಪಾನವಾಗಿಟ್ಟುಕೊಂಡಿದ್ದಾರೆ. ಸೆಟ್‌ನಲ್ಲೂ ಈ ನಿರ್ದೇಶಕ ಕೂಗಾಡಿದ್ದನ್ನು ಕಂಡವರಿಲ್ಲ. ಆ ಕಾರಣಕ್ಕೇ ಇಡೀ ಚಿತ್ರೋದ್ಯಮ ಈತನ ಬಗ್ಗೆ ಎಂದೂ ಅಪಸ್ವರ ಎತ್ತಿಲ್ಲ.

ಕಳೆದ ೮ ವರ್ಷಗಳಲ್ಲಿ ಮಹೇಂದರ್ ವಿವಾದಗಳಲ್ಲಿ ಸಿಲುಕಿದ್ದು ಕಡಿಮೆ. ಅಂಥ ಸಂದರ್ಭ ಬಂದಾಗಲೂ ಅವರು ತಮ್ಮ ಒಳ್ಳೇ ಹುಡುಗ ಇಮೇಜ್‌ನ್ನು ಬಿಟ್ಟುಕೊಡಲಿಲ್ಲ. ಶ್ರುತಿ ಹಾಗೂ ಮಹೇಂದರ್ ಸಂಬಂಧ ಸೆಟ್ ನಿಂದೀಚೆಗೂ ಬಹಳ ಚೆನ್ನಾಗಿದೆ ಎಂಬ ವದಂತಿ ಹಬ್ಬಿದಾಗ ಆಕೆ ತನ್ನ ಸ್ನೇಹಿತೆ ಹಾಗೂ ಒಳ್ಳೇ ನಟಿ ಎಂದಿದ್ದ ಮಹೇಂದರ್ ಅನಂತರ ಆ ಬಗ್ಗೆ ಮಾತಾಡಲಿಲ್ಲ. ಮೈಸೂರು ನಿರ್ಮಾಪಕ ದೇವರಾಜ್‌ಗಾಗಿ ತಾನು ನಿರ್ದೇಶಿಸಬೇಕಾಗಿದ್ದ ದಾಯಾದಿ ಚಿತ್ರ ಇನ್ನೊಬ್ಬ ನಿರ್ದೇಶಕನ ಮಡಿಲಿಗೆ ಬಿದ್ದಾಗಲೂ ಮಹೇಂದರ್ ಸುಮ್ಮನಿದ್ದರು. ದೇವರಾಜ್ ಮುಂದಿನ ಚಿತ್ರವನ್ನು ತಾನೇ ನಿರ್ದೇಶಿಸುತ್ತೇನೆ, ಯಾಕೆಂದರೆ ತನ್ನನ್ನು ಬೆಳೆಸಿದವರೇ ಅವರು ಎನ್ನುವ ಸೌಜನ್ಯ ತೋರಿದ್ದರು. ಸುಗ್ಗಿ ಚಿತ್ರದಲ್ಲಿ ಮಹೇಂದರ್ ಕೆಲಸ ಸರಿಯಿಲ್ಲ ಎಂದು ನಿರ್ಮಾಪಕ ಹಂಸಲೇಖಾ ದೂರಿದಾಗ ಕರೆದವರು ಅವರೇ ಜರೆದವರೂ ಅವರೇ ಎಂದು ತಣ್ಣಗೆ ತಮ್ಮ ನಿರ್ದೋಷಿತ್ವವನ್ನು ಸಾಬೀತುಪಡಿಸಿದರು. ಮತ್ತದೇ ಹಂಸ ಕರೆದಾಗ ಮಹೇಂದರ್ ಇಲ್ಲವೆನ್ನಲಿಲ್ಲ. ಈ ಕಾರಣಕ್ಕೆ ಈತನ ಚಿತ್ರಗಳನ್ನು ಇಷ್ಟಪಡದವರೂ ಈತನನ್ನು ಮೆಚ್ಚುತ್ತಾರೆ. ●



**ಮೀಸೆ**

ನಿಮ್ಮಿಂದ ಪ್ರತೀಸಾರಿ ಮುತ್ತು
ಪಡೆಯಬೇಕೆಂಬುದು
ನನ್ನ ಆಸೆ .... ಆದರೆ
ಮುತ್ತು ಕೊಡಲು ಬಂದಾಗ
ಅಡ್ಡ ಬರುತ್ತದೆ
ಆ ನಿಮ್ಮ ಮೀಸೆ

- ಅಂಗಡಿ ತಿಪ್ಪೇಸ್ವಾಮಿ


ತರಲ್ಲ ಅಂತೀಯಾ... ಹಾಗಾದರೆ ಸೂಟ್‌ಕೇಸ್-
ನಲ್ಲಿ ತರ್ತಾರ...


ಹೇಳಬಾರದಾ? ನಾನು ರಾಜೀವ್ ಗಾಂಧಿ
ಜಯಂತಿ ಅಂತ ಮಾತಾಡಿದೆನಲ್ಲ....


ಉಪಗ್ರಹಗಳ ವೈಫಲ್ಯ: ಕೋಟಿಗಟ್ಟಲೆ ನಷ್ಟ: ಸುದ್ದಿ
ನಮ್ಮ ಮಂತ್ರಿಗಳು ಮೆರವಣಿಗೆಯಲ್ಲಿ ಪ್ರವಾಸ ಮಾಡಿದರಲ್ಲ ಹಾಗೇನಾ..


ತೇಜಸ್ವಿ


ರಾತ್ರಿ ಚೆನ್ನಾಗಿ 'ಗುಂಡು' ಹಾಕಿ 'ಆಟೋ'-
ದಲ್ಲಿ ಬಂದ್ರಲ್ಲ... ಇನಕಂ ಟ್ಯಾಕ್ಸ್‌ನವರು
ಮನೆಮೇಲೆ ರೈಡ್ ಮಾಡಿದಾರೆ....

## ನೆರಳಾಗಿ ಕಾಡಿತ್ತು ಮಾಯೆ


ದೇವೇಗೌಡರಿಗೆ ಹಾಕಿದ್ದ ಟೋಪಿನಾ
ಅಥವಾ ಹೊಸದಾ


ರಂಗ ಸರ್ಕಾರದ
ಆಡಳಿತ ತೃಪ್ತಿ
ತಂದಿಲ್ಲ_ ಕೇಸರಿ

# ಜಾಣ ವಿದ್ಯಾರ್ಥಿ ಯೋಜನೆ !

## ಕೇವಲ 90 ರೂಪಾಯಿಗೆ 12 ಸಂಚಿಕೆಗಳು !

ಮನೆಯಲ್ಲಿ ಎಲ್ಲರಿಗೂ ಇಷ್ಟವಾಗುವ ವಿಶಿಷ್ಟ ಮಾಸಪತ್ರಿಕೆಯಾಗಿ ಜನಪ್ರಿಯವಾಗಿರುವ 'ಬಿಸಿಲ ಬದುಕು' ವಿದ್ಯಾರ್ಥಿಮಿತ್ರರ ವಿಶೇಷ ಅಭಿಮಾನಕ್ಕೆ ಪಾತ್ರವಾಗಿದೆ. ಇದಕ್ಕೆ ಈ ಪತ್ರಿಕೆಯಲ್ಲಿರುವ ವಿದ್ಯೆ-ಉದ್ಯೋಗ ವಿಭಾಗದ ಉಪಯುಕ್ತ ಮಾಹಿತಿಯೂ ಒಂದು ಕಾರಣ. ನಾಡಿನ ಸಾವಿರಾರು ವಿದ್ಯಾರ್ಥಿಗಳಿಗೆ ಅಪ್ಪನಂತೆ, ಗುರುವಿನಂತೆ, ತಾಯಿಯಂತೆ, ಹಿರಿಯಣ್ಣನಂತೆ ಮಾಹಿತಿ-ಸ್ಫೂರ್ತಿ-ಮಾರ್ಗದರ್ಶನ ನೀಡುತ್ತಿರುವ 'ಬಿಸಿಲ ಬದುಕು' ಮಾಸಿಕ ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ಇನ್ನಷ್ಟು ಹತ್ತಿರವಾಗಲು ಈ ವಿಶೇಷ ರಿಯಾಯಿತಿ ಯೋಜನೆ ಘೋಷಿಸುತ್ತಿದೆ.

- ಜಾಣ ವಿದ್ಯಾರ್ಥಿ ಯೋಜನೆಯಡಿ ನೀವು ಕೇವಲ 90 ರೂಪಾಯಿ ಕಳುಹಿಸಿದರೆ ಸಾಕು. ಒಂದು ವರ್ಷ ಕಾಲ 12 ಸಂಚಿಕೆಗಳು ಅಂಚೆ ಮೂಲಕ ನಿಮ್ಮ ಮನೆ ತಲುಪುತ್ತವೆ.
- ಈ ಯೋಜನೆಯ ಪ್ರಯೋಜನ ಪಡೆಯಲು ಬಿಸಿಲ ಬದುಕು ಪತ್ರಿಕೆಯ ಅಕ್ಟೋಬರ್ 1997 ಸಂಚಿಕೆಯ 65ನೇ ಪುಟದಲ್ಲಿರುವ 'ಜಾಣ ವಿದ್ಯಾರ್ಥಿ' ಕೂಪನ್‌ನ್ನು ಭರ್ತಿ ಮಾಡಿ ನಿಮ್ಮ ಶಾಲೆ ಅಥವಾ ಕಾಲೇಜು ಮುಖ್ಯಸ್ಥರ ಸೀಲು-ಸಹಿ ಹಾಕಿಸಿ ನಮಗೆ ಕಳುಹಿಸಿ.
- 90 ರೂಪಾಯಿಗಳನ್ನು ಎಂ.ಓ. ಮೂಲಕವೇ ಕಳಿಸಬೇಕು. ಎಂ.ಓ. ಫಾರ್ಮ್‌ನಲ್ಲಿ ನಿಮ್ಮ ಪೂರ್ಣ ಅಂಚೆ ವಿಳಾಸ ಬರೆಯಲು ಮರೆಯಬೇಡಿ.

ಬಿಸಿಲ ಬದುಕು

• ವಾಣಿಜ್ಯ • ವಿಕಾಸ • ಮಾಹಿತಿ • ಸಂಪರ್ಕ

ಬಿಸಿಲ ಬದುಕು ಮಾಸ ಪತ್ರಿಕೆ

ಅಂಕುರ ಪ್ರಕಾಶನ, ಅಂಚೆ ಪೆಟ್ಟಿಗೆ : 7951, ಬಸವೇಶ್ವರನಗರ, ಬೆಂಗಳೂರು - 560 079

BISILA BADUKU Kannada Monthly No.MAG (2) PRB.DECL / 3 / 97-98 NOVEMBER 1997 Regd. BGW/394













